ನೆಮ್ಮದಿಯ ನಾಳೆ ನಮ್ಮದು

# ಹೊಸತು

ಆಗಸ್ಟ್ ೨೦೧೯
ಬೆಲೆ : ₹೨೫

ISSN 2319-7307




## ಜಲಿಯನ್‌ವಾಲಾಬಾಗ್ ಹತ್ಯಾಕಾಂಡಕ್ಕೆ ೧೦೦ ವರ್ಷ

# ಹೊಸತು




ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ನಾಮದೇವ ಕಾಗದಗಾರ, ಕಮಲಂ ಅರಸು, ಗೋಪಿ ಹಿರೇಬೆಟ್ಟು, ಜಿ. ಎಂ. ಬೊಮ್ಮನಳ್ಳಿ, ಆದರ್ಶ ಪೈ

**ಮುಖಪುಟ : ಜಲಿಯನ್‌ವಾಲಾಬಾಗ್ ನೂರು ವರುಷ**

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ರಾಜ್ಯ ರಾಜಕಾರಣದಲ್ಲಿ ರಾಜೀನಾಮೆ ನೀಡಿರುವ ಅತೃಪ್ತ ಶಾಸಕರನ್ನು ಕುರಿತ ಸುಪ್ರೀಮ್ ಕೋರ್ಟಿನ ಮಧ್ಯಂತರ ತೀರ್ಪು ಪ್ರಕಟವಾಗಿದೆ. ಎರಡೂ ಪಕ್ಷಗಳವರು, ಎಂದರೆ ಮೈತ್ರಿ ಸರಕಾರದ ಬೆಂಬಲಿಗರು ಮತ್ತು ಪ್ರತಿ ಪಕ್ಷದವರೂ ತೀರ್ಪನ್ನು ಸ್ವಾಗತಿಸಿ ತಮಗೆ ಸರಿ ಕಾಣುವಂತೆ ಅರ್ಥೈಸಿದ್ದಾರೆ. ಎಲ್ಲರ ಕಣ್ಣು ಈಗ ಶಾಸನ ಸಭಾಪತಿಗಳ ನಡವಳಿಕೆ ಮೇಲೆ. ಮೈತ್ರಿ ಸರಕಾರದ ಭವಿಷ್ಯ ಸಭಾಪತಿಗಳ ಅಂಗಳದಲ್ಲಿದೆ. ಈ ಮಧ್ಯೆ ವಿಧಾನಮಂಡಲದ ಕಲಾಪಗಳು ಬೇರೆ ಆರಂಭವಾಗಿವೆ. ಮುಖ್ಯಮಂತ್ರಿ ಕುಮಾರಸ್ವಾಮಿ ವಿಶ್ವಾಸ ಮತ ಯಾಚಿಸಲು ಮುಂದಾಗಿದ್ದಾರೆ ಸುಪ್ರೀಮ್ ಕೋರ್ಟು ತೀರ್ಪಿನ ಪ್ರಕಾರ. ಎಲ್ಲವೂ ಸುಸೂತ್ರವಾಗಿ ನಡೆದರೆ ಈಗಿನ ಪರಿಸ್ಥಿತಿಯಂತೆ ಸರಕಾರ ಅಧಿಕಾರ ಕಳೆದುಕೊಳ್ಳುವುದು ಖಚಿತ. ಆದರೆ ಅಧಿಕಾರದಲ್ಲಿ ಉಳಿಯಲು ಒಂದೊಂದು ದಿನವೂ ಮುಖ್ಯ. ಈಗಾಗಲೇ ಹದಿನೈದು ಮಂದಿ ಶಾಸಕರು ಬಂಡಾಯವೆದ್ದಿದ್ದಾರೆ. ಇದರಿಂದ ಸರಕಾರ ಅಲ್ಪಮತಕ್ಕೆ ಕುಸಿದಿದೆ. ಎಲ್ಲವೂ ಲೆಕ್ಕಾಚಾರ. ಭಾಜಪದ ನಾಯಕ ಯಡಿಯೂರಪ್ಪ ಅಧಿಕಾರಕ್ಕೆ ಏರಲು ದಿನ ಎಣಿಸುತ್ತಿದ್ದಾರೆ. ಕಾಂಗ್ರೆಸ್ – ಜೆಡಿಎಸ್ ಮೈತ್ರಿಕೂಟ ಬಂದದ್ದೇ ಭಾಜಪವನ್ನು ದೂರ ಇರಿಸುವ ತರಾತುರಿಯಲ್ಲಿ. ಮಹಾಮೈತ್ರಿಯ ಕೂಗಾಟದಿಂದಲೇ ಕುಮಾರಸ್ವಾಮಿ ಸರಕಾರ ಅಸ್ತಿತ್ವಕ್ಕೆ ಬಂದದ್ದು. ಮಂತ್ರಿಮಂಡಲ ರಚನೆಯಾದಾಗಲೇ ಅತೃಪ್ತಿಯ ಹೊಗೆಯಾಡಲು ಪ್ರಾರಂಭವಾಯಿತು. ಲೋಕಸಭೆಯ ಚುನಾವಣೆಯಲ್ಲಿ ಮೈತ್ರಿಕೂಟ ಮಣ್ಣುಮುಕ್ಕಿದ ಮೇಲೆ ಅತೃಪ್ತಿ ಗರಿಗೆದರಿತು. ಸರಕಾರದ ಅಳಿವು ಮತ್ತು ಉಳಿವಿನ ಪ್ರಶ್ನೆ ಗಂಭೀರವಾಗಿ ಉದ್ಭವಿಸಿತು. ಸಚಿವ ಸ್ಥಾನ, ಅಧಿಕಾರ ಯಾರಿಗೆ ಬೇಡ ! ಕಾಂಗ್ರೆಸ್ ಸರಕಾರ ವಿದ್ದಾಗಲೂ ಅತೃಪ್ತರ ಸಮಸ್ಯೆ ಇದ್ದೇ ಇತ್ತು. ಒಂದು ನಿರ್ದಿಷ್ಟ ಕಾರ್ಯಕ್ರಮ ವಿಲ್ಲದ ಏಕಾಏಕಿ ಅಧಿಕಾರಕ್ಕೇರಿದ ಮೈತ್ರಿ ಸರಕಾರ ಇದು. ವರ್ಷದ ಮೇಲಾದರೂ ಸರಕಾರ ಉಳಿಸಿಕೊಳ್ಳುವುದೊಂದೇ ಕಾರ್ಯಕ್ರಮವಾಯಿತು. ಸಮನ್ವಯ ಸಮಿತಿಯ ಸೂತ್ರಧಾರಿ ಮಾಜಿ ಮುಖ್ಯಮಂತ್ರಿ ಸಿದ್ದರಾಮಯ್ಯ ಐದು ವರ್ಷ ಮುಖ್ಯಮಂತ್ರಿಯಾಗಿದ್ದವರು. ಮತ್ತೆ ಮುಖ್ಯಮಂತ್ರಿಯಾಗುವ ಕನಸುಗಾರ. ತಮ್ಮ ಬೆಂಬಲಿಗರ ಸಮ್ಮುಖದಲ್ಲಿ ತಮ್ಮ ಕನಸನ್ನು ತೋಡಿಕೊಂಡಿದ್ದಾರೆ. ಕಾಂಗ್ರೆಸ್ – ಜೆಡಿಎಸ್‌ನಲ್ಲಿ ಬಂಡಾಯದ ಜ್ವಾಲೆ ಹೊಗೆಯಾಡುತ್ತಿದ್ದು, ಈಗ ದೊಡ್ಡ ಬೆಂಕಿ ಹೊತ್ತಿಕೊಂಡಿದೆ. ಅಪ್ಪ – ಮಕ್ಕಳು – ಮೊಮ್ಮಕ್ಕಳ ಪಕ್ಷ ಜೆಡಿಎಸ್ ಈ ಹಿಂದೆ ಭಾಜಪದೊಂದಿಗೆ ಕೈಜೋಡಿಸಿದ್ದುದನ್ನು ನೆನಪಿಸಿಕೊಳ್ಳಬೇಕು. ಕುಮಾರಸ್ವಾಮಿ ಅಧಿಕಾರದಲ್ಲಿರಲು ಏನು ಬೇಕಾದರೂ ಮಾಡಲು ಸಿದ್ಧ. ಈ ಮಧ್ಯೆ ಭಾಜಪದ ಸದಸ್ಯರ ಅಹೋರಾತ್ರಿ ಧರಣಿ ವಿಧಾನಮಂಡಲದ ಆವರಣದಲ್ಲಿ ನಡೆದಿದೆ. ರಾಜ್ಯಪಾಲರು ತಾವಾರಿಗೆ ಕಮ್ಮಿ ಎಂಬಂತೆ ಮುಖ್ಯಮಂತ್ರಿ ವಿಶ್ವಾಸ ಮತಕ್ಕೆ ಗಡುವು ನೀಡಿ ತಲೆತೂರಿಸಿದ್ದಾರೆ. ಒಟ್ಟಿನಲ್ಲಿ ಕರ್ನಾಟಕದ ರಾಜಕಾರಣ ಹೊಲಸಿನ ರಾಡಿಯಾಗಿದೆ.

✶ ✶ ✶

ಗುರುವಾರ ಜುಲೈ ೧೮ ಕುಮಾರಸ್ವಾಮಿ ಸರಕಾರ ವಿಶ್ವಾಸ ಮತ ಯಾಚಿಸಲು ಗಡುವಿನ ದಿನ. ಕಲಾಪ ಪ್ರಾರಂಭವಾಗುತ್ತಿದ್ದ ಹಾಗೆಯೇ ಕ್ರಿಯಾ ಲೋಪದ ಚರ್ಚೆ. ಸುಪ್ರೀಮ್ ಕೋರ್ಟಿನ ತೀರ್ಪಿನಂತೆ ವಿಪ್ ಜಾರಿ ಮಾಡಿ ಕಡ್ಡಾಯವಾಗಿ ಸದನದಲ್ಲಿ ಹಾಜರಿದ್ದು ಮತ ನೀಡುವ ಹಾಗೆ ಪಕ್ಷಗಳು ಅಧಿಕಾರ ಚಲಾಯಿಸುವಂತಿಲ್ಲ. ಹಾಗೆ ಮಾಡಿದರೆ ಯಥಾಸ್ಥಿತಿ ಕಾಪಾಡುವುದಕ್ಕಾಗದು. ಯಾರನ್ನೂ ಬಲವಂತವಾಗಿ ಸದನಕ್ಕೆ ಹಾಜರಿರುವಂತೆ ಒತ್ತಾಯ ಮಾಡಲಾಗದು. ಅಂಥದ್ದರಲ್ಲೂ ಜೆಡಿಎಸ್ ವಿಪ್ ಜಾರಿ ಮಾಡಿ ಸದಸ್ಯರಿಗೆಲ್ಲ ಆದೇಶ ನೀಡಿದೆ. ಆದರೆ ಕಾಂಗ್ರೆಸ್ ಹಾಗೆ ಮಾಡಿಲ್ಲ. ಬದಲಾಗಿ ಕ್ರಿಯಾಲೋಪ ಎತ್ತಿದೆ. ಸಿದ್ದರಾಮಯ್ಯ ಸದನದಲ್ಲಿ ಕ್ರಿಯಾಲೋಪ ಎತ್ತಿದ್ದಾರೆ. ಇದು ಸರಕಾರ ಉಳಿಸಿಕೊಳ್ಳಲು ಕೊನೆಯ ಪ್ರಯತ್ನ. ಶಾಸನ ಸಭಾ ಸದಸ್ಯರುಗಳಿಗೆ ಅನರ್ಹತೆಯ ಬೆದರಿಕೆ ಹಾಕಿ ಒಲಿಸಿಕೊಳ್ಳುವ ಪ್ರಯತ್ನ. ವಿಪ್ ಜಾರಿಗೊಳಿಸಿದರೆ ಪಕ್ಷಾಂತರ ಮಸೂದೆಯ ಪ್ರಕಾರ ವಿಧಾನಸಭಾ ಸದಸ್ಯರು ಅನರ್ಹರಾಗುತ್ತಾರೆ.

**(೬ನೇ ಪುಟಕ್ಕೆ)**







ಸಂಪುಟ-೨೧ ಸಂಚಿಕೆ-೧ ಆಗಸ್ಟ್ ೨೦೧೯





**ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**
೭೩೮/೧೧, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

**ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨



**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


# ಸಂಪಾದಕೀಯ

## ಯಾರೇ ಗೆದ್ದರೂ ಸೋಲು ಪ್ರಜಾಸತ್ತೆಯದು

ಕರ್ನಾಟಕದ ರಾಜಕಾರಣ ರಣರಂಗವಾಗಿದೆ. ಇದು ಮೊದಲಸಲವೇನೂ ಅಲ್ಲ. ಕೊನೆಯದೂ ಅಲ್ಲ. ೧೯೬೯ರಿಂದ ಕಾಂಗ್ರೆಸ್ ವಿಘಟನೆ ಆರಂಭವಾದಾಗಿನಿಂದ ಪಕ್ಷಾಂತರ, ಮುಖ್ಯಮಂತ್ರಿ, ಮಂತ್ರಿಮಂಡಲ ಬದಲಾವಣೆ, ಒಂದು ಸರಕಾರದ ಪತನ, ಮತ್ತೊಂದು ಸರಕಾರದ ರಚನೆ, ಆ ಸರಕಾರದ ಪತನಕ್ಕೆ ಪಿತೂರಿ. ಇವೆಲ್ಲ ಹಲವಾರು ಬಾರಿ ಕರ್ನಾಟಕದ, ವಿವಿಧ ರಾಜ್ಯಗಳ, ಕೇಂದ್ರ ಸರಕಾರದ ಆಡಳಿತದ ಸಂದರ್ಭದಲ್ಲಿ ನಡೆದ ವಿದ್ಯಮಾನಗಳೇ. ಕಾಲ ಮತ್ತು ಪಾತ್ರಧಾರಿಗಳು ಮಾತ್ರ ಭಿನ್ನ. ಆಳುವ ಪಕ್ಷ ಬಹುಮತದ ಅಂಚಿನಲ್ಲಿದ್ದರೆ ಅಥವಾ ಸಮ್ಮಿಶ್ರ ಸರಕಾರವಾಗಿದ್ದರೆ ಈ ರಣರಂಗ ಇನ್ನೂ ರಂಗೇರುತ್ತದೆ.

ಕರ್ನಾಟಕದಲ್ಲಿಯೂ ೧೯೬೯ರಿಂದಲೇ ಆರಂಭವಾದ ಈ ಬಣ ರಾಜಕಾರಣ ಕೆಲವೇ ಸಂದರ್ಭದಲ್ಲಿ ಸ್ಥಿರ ಸರಕಾರ ಕೊಟ್ಟಿದೆ. ಇನ್ನುಳಿದಂತೆ ಸರಕಾರಗಳ ಪತನ, ಮಂತ್ರಿ ಮಂಡಲ ಬದಲಾವಣೆ, ಆರೋಪ–ಪತ್ಯಾರೋಪ, ಎಲ್ಲವೂ ಸಹಜ ಎಂಬಂತೆ ನಡೆದುಬಂದಿದೆ. ಒಂದು ಕಾಲದಲ್ಲಿ ರಾಜಕಾರಣಿ ಎಂದರೆ ಒಂದು ಗಿಡದಿಂದ ಇನ್ನೊಂದು ಗಿಡಕ್ಕೆ ಜಿಗಿಯುವ ಮಂಗನ ಸಂಕೇತವಾಗಿದ್ದ. 'ಆಯಾರಾಂ ಗಯಾರಾಂ' ಎಂಬುದು ರಾಜಕಾರಣದ ಮಂತ್ರವಾಗಿತ್ತು. ಪಕ್ಷಾಂತರ ಎನ್ನುವುದು ಭಾರತದ ಪ್ರಜಾಸತ್ತೆಗೆ ಮಾರಕರೋಗವಾಗಿ ಪರಿಣಮಿಸಿದ್ದರೆ, ಭ್ರಷ್ಟ, ಅಧಿಕಾರದಾಹಿ ರಾಜಕಾರಣಿಗಳಿಗೆ ಒಂದು ವರದಾನ, ಮೌಲ್ಯವಾಗಿದೆ. ಜನಾದೇಶ ಪಡೆದ ಹಲವಾರು ಸರಕಾರಗಳು ಒಬ್ಬಿಬ್ಬರು ಸದನ ಸದಸ್ಯರ ಪಕ್ಷಾಂತರದಿಂದ, ತಂತ್ರಗಾರಿಕೆಯಿಂದ ಪತನವಾಗಿವೆ. ವ್ಯಕ್ತಿಗತ, ಭಿನ್ನಮತೀಯರ ಪಕ್ಷಾಂತರಕ್ಕೆ ತಡೆಹಾಕಿದವರು ರಾಜೀವ ಗಾಂಧಿ. ಸಂವಿಧಾನದ ೫೨ನೇ ತಿದ್ದುಪಡಿ ಮೂಲಕ ೧–೩–೧೯೮೫ರಿಂದ ಪಕ್ಷಾಂತರ ನಿಷೇಧ ಕಾನೂನು ಜಾರಿಗೆ ತಂದರು. ಇದು ವ್ಯಕ್ತಿಗತವಾಗಿ, ಸಣ್ಣ ಗುಂಪಿನ ಪಕ್ಷಾಂತರವನ್ನು ತಡೆಯಲು ಸಾಧ್ಯವಾಯಿತು. ಪಕ್ಷಾಂತರದ ಪಿಡುಗು ಒಂದು ಕಡೆಯಾದರೆ ಬಂಡುಕೋರತನದ ಪಿಡುಗು ಇನ್ನೊಂದು, ಒಂದು ಪಕ್ಷದೊಳಗೇ ನಡೆಯುವ ಪಿತೂರಿಗಳಿಗೆ ಈ ಬಂಡುಕೋರತನ ಹಲವಾರು ಬಾರಿ ಸಾಕ್ಷಿಯಾಗಿದೆ. ೧೯೮೮ರಲ್ಲಿ ರಾಮಕೃಷ್ಣ ಹೆಗಡೆಯವರು ರಾಜೀನಾಮೆ ನೀಡಿ ಎಸ್. ಆರ್. ಬೊಮ್ಮಾಯಿಯವರು ಮುಖ್ಯಮಂತ್ರಿಯಾದಾಗ ಅವರ ಪಕ್ಷದವರೇ ಪಿತೂರಿ ಮಾಡಿ ಬಂಡೆದ್ದು ರಾಜ್ಯಪಾಲರಿಗೆ ಪತ್ರ ಕೊಟ್ಟು ಸರಕಾರ ಪತನವಾಗಲು ಕಾರಣಕರ್ತರಾದರು. ಆ ಸಂದರ್ಭದಲ್ಲಿ ಸುಪ್ರೀಂ ಕೋರ್ಟ್‌ಗೆ ಹೋದ ಬೊಮ್ಮಾಯಿ ತಮ್ಮ ಸರಕಾರದ ಪತನ ಅಸಾಂವಿಧಾನಿಕ ಎಂದು ಸಾಬೀತುಪಡಿಸಲು ೧೯೯೪ರ ಸುಪ್ರೀಂ ಕೋರ್ಟ್ ಅಂತಿಮ ತೀರ್ಪಿನವರೆಗೆ ಕಾಯಬೇಕಾಯಿತು. ಬೊಮ್ಮಾಯಿಯವರಿಗೆ ನ್ಯಾಯ ಸಿಕ್ಕಿತೇ ಹೊರತು ಕಳೆದುಹೋದ ಅಧಿಕಾರ ಸಿಗಲಿಲ್ಲ. ಆದರೆ ಈ ತೀರ್ಪು ಕೇಂದ್ರದ ಆಡಳಿತ ಪಕ್ಷ, ಅದರ ಪ್ರತಿನಿಧಿಯಾಗಿರುವ ರಾಜ್ಯಪಾಲರು ರಾಜ್ಯದಲ್ಲಿ ಆಡಳಿತದಲ್ಲಿರುವ ಪಕ್ಷದ ಮೇಲೆ ಸವಾರಿ ಮಾಡುವುದನ್ನು ತಡೆಯಿತು. ಸರಕಾರದ ಬಲಾಬಲ ತೀರ್ಮಾನವಾಗಬೇಕಾದದ್ದು ಶಾಸನಸಭೆಯಲ್ಲಿ ಮಾತ್ರ ಎಂಬ ಈ ಐತಿಹಾಸಿಕ ತೀರ್ಪು, ರಾಜೀವ್ ಗಾಂಧಿ ಕಾಲದಲ್ಲಿ ತಂದ ಪಕ್ಷಾಂತರ ನಿಷೇಧ ಕಾನೂನಿನಷ್ಟೇ ಮಹತ್ವದ್ದು. ಹೀಗೆ ಕಾಲಕಾಲಕ್ಕೆ ನಮ್ಮ ಸಂವಿಧಾನ ತಿದ್ದುಪಡಿ, ನ್ಯಾಯಾಂಗದ ತೀರ್ಪುಗಳ ಮೂಲಕ ಪ್ರಜಾಸತ್ತೆಯನ್ನು ಸಬಲಗೊಳಿಸುವ ಪ್ರಯತ್ನಗಳು ನಡೆದಿವೆ. ಆದರೆ ಸಮಯಸಾಧಕ ರಾಜಕಾರಣ, ಅಧಿಕಾರ ಲಾಲಸೆ, ಹಣದ ಆಮಿಷಕ್ಕೆ ಬಲಿಯಾದ ಜನಪ್ರತಿನಿಧಿಗಳು ಕಾನೂನಿನ ನೀತಿನಿಯಮಗಳ ಸಂದಿನಿಂದಲೇ ತಮ್ಮ ಸ್ವಾರ್ಥ ಸಾಧನೆಯ ಪ್ರಯತ್ನಗಳನ್ನು ನಿರಂತರ ಮುಂದುವರೆಸಿದ್ದಾರೆ. ಕರ್ನಾಟಕದಲ್ಲಿ ಆರಂಭದಿಂದಲೂ ವೀರೇಂದ್ರ ಪಾಟೀಲ, ದೇವರಾಜ ಅರಸು, ರಾಮಕೃಷ್ಣ ಹೆಗಡೆ, ಎಸ್. ಆರ್. ಬೊಮ್ಮಾಯಿ, ಬಂಗಾರಪ್ಪ, ಧರಮ್‌ಸಿಂಗ್, ಬಿ. ಎಸ್. ಯಡಿಯೂರಪ್ಪ, ಈಗ ಕುಮಾರಸ್ವಾಮಿ ಈ ಎಲ್ಲರೂ ಮುಖ್ಯಮಂತ್ರಿಗಳಾಗಿದ್ದಾಗ, ಸ್ವಪಕ್ಷೀಯರಿಂದ, ಮಿತ್ರಪಕ್ಷದಿಂದ, ವಿರೋಧ ಪಕ್ಷದಿಂದ ಅಧಿಕಾರದ ಅಸ್ಥಿರತೆಯನ್ನು ಅನುಭವಿಸಿದವರೇ. ಇದಕ್ಕೆ ರಾಜ್ಯದಲ್ಲಿ ಆಡಳಿತ ಮಾಡಿದ ಯಾವುದೇ ಪಕ್ಷ ಹೊರತಲ್ಲ.

ಕೇಂದ್ರದಲ್ಲಿ ಆಡಳಿತದಲ್ಲಿದ್ದ ಪಕ್ಷ ತನ್ನ ಆಡಳಿತವಿಲ್ಲದ ರಾಜ್ಯ ಸರಕಾರಗಳನ್ನು ಆರ್ಟಿಕಲ್ – ೩೫೬ರನ್ವಯ ಅಧಿಕಾರ ದುರುಪಯೋಗಪಡಿಸಿಕೊಂಡು, ಅರಾಜಕತೆ ಅಸ್ಥಿರತೆಯ ನೆಪವೊಡ್ಡಿ ಕಿತ್ತುಹಾಕಿದ ಉದಾಹರಣೆಗಳು ಸಾಕಷ್ಟಿವೆ. ನೆಹರೂ ಕಾಲದಿಂದ ಇಂಥ ಅಸಾಂವಿಧಾನಿಕ ನಡೆಗಳು ಜಾರಿಯಲ್ಲಿವೆ. ನೆಹರೂ ಕೇರಳದಲ್ಲಿ ಕಮ್ಯುನಿಸ್ಟ್ ಪಕ್ಷದ ಆಡಳಿತ ವಜಾ ಮಾಡಿದ್ದು, ಇಂದಿರಾ ಗಾಂಧಿಯವರು ಆಂಧ್ರದ ಎನ್.ಟಿ.ಆರ್. ಸರಕಾರ, ಆನಂತರ ಬೊಮ್ಮಾಯಿ ಸರಕಾರ ಹೀಗೆ ಹಲವಾರು ಬಾರಿ ಹಲವು ರಾಜ್ಯಗಳಲ್ಲಿ ಕಾನೂನಿನ ಹೆಸರಿನಲ್ಲಿಯೇ ಅಸ್ಥಿರತೆಯ ಹೆಸರಿನಲ್ಲಿ ತಮ್ಮದಲ್ಲದ ಪಕ್ಷದ ಸರಕಾರಗಳನ್ನು ವಜಾ ಮಾಡಲಾಗಿದೆ. ಇದಕ್ಕೆ ಕಾಂಗ್ರೆಸ್, ಜನತಾ ಪರಿವಾರ, ಬಿಜೆಪಿ ಯಾವ ಪಕ್ಷಗಳೂ ಹೊರತಲ್ಲ. ಇವೆಲ್ಲ ಸಂವಿಧಾನ, ಕಾನೂನಿನ ಹೆಸರಿನಲ್ಲಿಯೇ ನಡೆದ ಅಸಾಂವಿಧಾನಿಕ ನಡೆಗಳು, ಅಕ್ರಮ ರಾಜಕಾರಣದ ಉದಾಹರಣೆಗಳು.

ಕರ್ನಾಟಕದಲ್ಲಿ ಈಗ ನಡೆದಿರುವ ರಾಜಕೀಯ ನಾಟಕ ಹೊಸದೇನೂ ಅಲ್ಲ. ಮುಖ್ಯಮಂತ್ರಿ ಕುಮಾರಸ್ವಾಮಿಗಳಾಗಲೀ, ದೇವೇಗೌಡರಾಗಲೀ, ಕಾಂಗ್ರೆಸ್ ಆಗಲೀ, ಬಿಜೆಪಿಯವರು ಪ್ರಜಾಸತ್ತೆಯ ದಮನ ಮಾಡುತ್ತಿದ್ದಾರೆಂದು

ಬೊಬ್ಬಿಡುತ್ತಿದ್ದಾರೆ. ಇವರು ಅಂಥ ಆರೋಪ ಮಾಡುವ ನೈತಿಕತೆಯನ್ನು ಕಳೆದುಕೊಂಡಿದ್ದಾರೆ. ಹೀಗಾಗಿ ಜನರ ಸಿಂಪಥಿ ಇವರ ಪರವಾಗಿಲ್ಲ. ಶ್ರೀಮತಿ ಇಂದಿರಾ ಗಾಂಧಿಯವರು ಆಂಧ್ರಪ್ರದೇಶದಲ್ಲಿ ರಾಜ್ಯಪಾಲರನ್ನು ದುರುಪಯೋಗಪಡಿಸಿಕೊಂಡು ಬಹುಮತವಿರುವ ಎನ್. ಟಿ. ರಾಮರಾವ್ ಅವರನ್ನು ಅಧಿಕಾರ ವಂಚಿತರನ್ನಾಗಿಸಿದಾಗ ದೇಶದಾದ್ಯಂತ ಪ್ರತಿಭಟನೆ ವ್ಯಕ್ತವಾಗಿತ್ತು. ಆದರೆ ಇಂದು ಕರ್ನಾಟಕದಲ್ಲಿ ಆಪರೇಷನ್ ಕಮಲಕ್ಕೆ ಬಲಿಯಾಗಿ ಸಮ್ಮಿಶ್ರ ಸರಕಾರ ಪತನವಾಗುವ ಸ್ಥಿತಿ ಇರುವಾಗ ಸಾರ್ವಜನಿಕರಿರಲಿ, ಸ್ವತಃ ಕಾಂಗ್ರೆಸ್ ಜೆ.ಡಿ.ಎಸ್. ಪಕ್ಷಗಳೂ ರಾಜ್ಯದಾದ್ಯಂತ ಒಂದು ಚಳುವಳಿ ರೂಪಿಸುವ ಸ್ಥಿತಿಯಲ್ಲಿಲ್ಲ. ಕಾರಣ ನೈತಿಕತೆಯನ್ನು ಕಳೆದುಕೊಂಡಿದ್ದಾರೆ.

ಕರ್ನಾಟಕದಲ್ಲಿ ಜೆ.ಡಿ.ಎಸ್. ಕಾಂಗ್ರೆಸ್ ಸಮ್ಮಿಶ್ರ ಸರಕಾರ ಆರಂಭವಾದ ದಿನದಿಂದಲೇ ಬಿ.ಜೆ.ಪಿ.ಯವರು ಕಿಚಡಿ ಸರಕಾರ, ಸಂವಿಧಾನ ವಿರೋಧಿ, ಜನಾದೇಶ ಹೀಗೆ ಏನೆಲ್ಲ ಮಾತನಾಡುತ್ತಿದ್ದಾರೆ. ಅದೇ ಸಂದರ್ಭದಲ್ಲಿ ಬಿ.ಜೆ.ಪಿ.ಯವರು ಮಹಾರಾಷ್ಟ್ರ, ಗೋವಾ, ಜಮ್ಮು–ಕಾಶ್ಮೀರ, ಬಿಹಾರ, ತ್ರಿಪುರಾ ಮುಂತಾದ ರಾಜ್ಯಗಳಲ್ಲಿ ಸಮ್ಮಿಶ್ರ ಸರಕಾರ ನಡೆಸುತ್ತಲೇ ಕರ್ನಾಟಕದಲ್ಲಿ ಸಮ್ಮಿಶ್ರ ಸರಕಾರವನ್ನು, ಸಮ್ಮಿಶ್ರ ನೀತಿಯನ್ನೇ ಟೀಕಿಸುತ್ತಾರೆ. ಹಾಗಿದ್ದರೆ ಬಿ.ಜೆ.ಪಿ.ಯವರಿಗಾದರೂ ಸರಕಾರ ಮಾಡುವ ಬಲವಿತ್ತೇ ಎಂದರೆ ಅದೂ ಇಲ್ಲ. ತಮ್ಮ ಸಮ್ಮಿಶ್ರ ಸರಕಾರ ಪವಿತ್ರ, ಇತರರ ಸಮ್ಮಿಶ್ರ ಸರಕಾರ ಅಪವಿತ್ರ. ಕರ್ನಾಟಕದಲ್ಲಿ ಬಿ.ಜೆ.ಪಿ.ಯವರು ಆಪರೇಷನ್ ಕಮಲಕ್ಕೆ ಪ್ರಸಿದ್ಧರು. ಅಧಿಕಾರಕ್ಕಾಗಿ ರಾಜಕಾರಣವನ್ನು, ಶಾಸಕಸ್ಥಾನವನ್ನು ವ್ಯಾಪಾರಿ ಸರಕನ್ನಾಗಿ ಮಾಡಿದ ಕೀರ್ತಿ ಬಿ.ಜೆ.ಪಿ.ಯವರಿಗೆ, ಅದರಲ್ಲೂ ಇದಕ್ಕೆ ಕುಮ್ಮಕ್ಕು ಕೊಟ್ಟ ಅವರ ನಾಯಕರಾದ ಅಮಿತ್ ಶಾ, ಮೋದಿಯವರಿಗೆ ಸಲ್ಲಬೇಕು. ಗೋವಾದಲ್ಲಿ ತಮ್ಮದೇ ನಾಯಕತ್ವದ ಸಮ್ಮಿಶ್ರ ಸರಕಾರವಿದ್ದರೂ ಕಾಂಗ್ರೆಸ್‌ನ ಶಾಸಕರನ್ನು ಖರೀದಿಸಿ ಏಕಪಕ್ಷದ ಆಡಳಿತ ಶುರುವಿಟ್ಟುಕೊಂಡಿದ್ದಾರೆ. ಪಶ್ಚಿಮ ಬಂಗಾಲ, ಮಧ್ಯಪ್ರದೇಶದಲ್ಲಿ ಶಾಸಕರ ಖರೀದಿ ಪ್ರಯತ್ನ ಆರಂಭಿಸಿದ್ದಾರೆ. ಜನಾದೇಶವಿಲ್ಲದಿದ್ದರೂ ಶಾಸಕರ ಖರೀದಿ ಮಾಡಿ ಅಧಿಕಾರ ಹಿಡಿವ ಕೊಳಕು ರಾಜಕಾರಣ ಆರಂಭಿಸಿದ ಬಿ.ಜೆ.ಪಿ.ಯವರು ಪ್ರಜಾಸತ್ತೆಯನ್ನೇ ವ್ಯಾಪಾರೀಕರಣಕ್ಕೀಡುಮಾಡಿದ್ದಾರೆ.

ಪ್ರಸ್ತುತ ಕರ್ನಾಟಕದ ಸಂದರ್ಭದಲ್ಲಿ ನಡೆಯುತ್ತಿರುವ ರಾಜಕೀಯ ನಾಟಕದಲ್ಲಿ ಎಲ್ಲರ ಪಾತ್ರಗಳೂ ಜನರಿಗೆ ಪರಿಚಿತವೇ. ಕಾಂಗ್ರೆಸ್, ದಳ, ಬಿಜೆಪಿ ಎಲ್ಲರೂ ಅಧಿಕಾರಕ್ಕಾಗಿ ನೈತಿಕ ರಾಜಕಾರಣ ಅಥವಾ ಪ್ರಜಾಸತ್ತಾತ್ಮಕ ನಡೆಗಳನ್ನು ಧಿಕ್ಕರಿಸಿದವರೇ. ಪ್ರಧಾನಿ ಮೋದಿ ಹಾಗೂ ಬಿ.ಜೆ.ಪಿ. ಅಧ್ಯಕ್ಷ ಅಮಿತ್ ಷಾ ಅವರದು ಒಂದು ರಾಷ್ಟ್ರ, ಒಂದು ತೆರಿಗೆ, ಒಂದು ಧರ್ಮ, ಒಂದು ಭಾಷೆ, ಒಂದು ಸಂಸ್ಕೃತಿ, ಒಂದು ಚುನಾವಣೆ ಎಂಬ ಘೋಷಣೆಯ ಜೊತೆ ಒಂದು ಪಕ್ಷ ಎಂಬ ನೀತಿ ಜಾರಿಯಲ್ಲಿದೆ. ಅದಕ್ಕನುಸಾರವಾಗಿಯೇ ಮೊದಲು ವಿರೋಧ ಪಕ್ಷಗಳನ್ನು ನಂತರ ಮಿತ್ರ ಪಕ್ಷಗಳನ್ನು ನಾಶ ಮಾಡುವ ಗುರಿ ಹೊಂದಿದ್ದಾರೆ. ಇದಕ್ಕೆ ಗೋವಾದಲ್ಲಿ, ಕಾಶ್ಮೀರದಲ್ಲಿ ಮಿತ್ರ ಪಕ್ಷಗಳ ಮೇಲೆ ದಾಳಿ ನಡೆಸಿದ್ದಾರೆ. ಮಹಾರಾಷ್ಟ್ರದಲ್ಲಿ ಶಿವಸೇನೆಯ ಜೊತೆ ಮಿತ್ರತ್ವ–ಶತ್ರುತ್ವ ಏಕಕಾಲದಲ್ಲಿದೆ. ಹೀಗೆ ಮುಂದಿನ ದಿನಗಳಲ್ಲಿ ಕಾರ್ಪೊರೇಟ್ ಕಂಪನಿಗಳಿಂದ ಪಡೆದ ಹಣದಿಂದ ಅನ್ಯಪಕ್ಷಗಳ ಪ್ರತಿನಿಧಿಗಳನ್ನು ಖರೀದಿಸಿ ಅಥವಾ ಅನ್ಯಪಕ್ಷಗಳನ್ನು ನಾಶ ಮಾಡಿ ಹಿಟ್ಲರ್‌ನಂತೆ ಏಕಪಕ್ಷದ ವ್ಯವಸ್ಥೆಗೆ ತಯಾರಿ ನಡೆಸಿದ್ದಾರೆ.

ಕಾಂಗ್ರೆಸ್ ಮತ್ತು ಜನತಾದಳಗಳು ಬಿ.ಜೆ.ಪಿ.ಯನ್ನು ಎದುರಿಸುವ ಶಕ್ತಿ, ನೈತಿಕತೆಯನ್ನು ಕಳೆದುಕೊಂಡಿವೆ. ಚುನಾವಣೆಯ ಸಂದರ್ಭದಲ್ಲಿ ಬಿ.ಜೆ.ಪಿ.ಯವರು ಪಕ್ಷ ತೊರೆದು ಕಾಂಗ್ರೆಸ್ ಸೇರುತ್ತಾರೆ. ಕಾಂಗ್ರೆಸ್‌ನವರು ಜೆ.ಡಿ.ಎಸ್. ಸೇರುತ್ತಾರೆ. ಜೆ.ಡಿ.ಎಸ್., ಕಾಂಗ್ರೆಸ್‌ನವರು ಬಿ.ಜೆ.ಪಿ. ಸೇರುತ್ತಾರೆ. ಅಂದರೆ ಈ ಮೂರೂ ಪಕ್ಷಗಳಿಗೆ ಹಣ, ಜಾತಿ, ಕೋಮು ಬಲವಿರುವ ಅಭ್ಯರ್ಥಿಗಳು ಮುಖ್ಯವೇ ಹೊರತು ಅಭ್ಯರ್ಥಿಯ ವ್ಯಕ್ತಿತ್ವ, ಚಾರಿತ್ರ್ಯ, ತತ್ವ, ಸಿದ್ಧಾಂತ ಮುಖ್ಯವಲ್ಲ. ಪಕ್ಷದಲ್ಲಿ ಬ್ಯಾನರ್ ಹೊತ್ತು ಕೆಲಸ ಮಾಡಿದ ಕಾರ್ಯಕರ್ತರಿಗಿಂತ, ಧನಬಲವಿರುವ ಅನ್ಯಪಕ್ಷದ ವ್ಯಕ್ತಿಯೇ ಸೂಕ್ತ ಅಭ್ಯರ್ಥಿಯಾಗಿ ಕಾಣಿಸುತ್ತಾನೆ. ಇಂದು ಬಿ.ಜೆ.ಪಿ.ಯ ಕೋಮುವಾದವನ್ನು ಹೊರತುಪಡಿಸಿದರೆ ಈ ಮೂರೂ ಪಕ್ಷಗಳಲ್ಲಿರುವ ವ್ಯತ್ಯಾಸವೇನು? ಈಗಲಾದರೂ ಜಾತ್ಯತೀತವೆಂದು ಹೇಳಿಕೊಳ್ಳುವ ಜೆ.ಡಿ.ಎಸ್., ಕಾಂಗ್ರೆಸ್ ಪಕ್ಷದ ನಾಯಕರು ಸೌಹಾರ್ದ ಸಮಾಜಕ್ಕಾಗಿ, ಬಿ.ಜೆ.ಪಿ.ಗಿಂತ ಭಿನ್ನವಾದ ಆರ್ಥಿಕ, ರಾಜಕೀಯ ನೀತಿಗಳನ್ನು ಅಳವಡಿಸಿಕೊಳ್ಳಬೇಕು. ಈ ಸಮ್ಮಿಶ್ರ ಸರಕಾರ ಯಾಕೆ ಉಳಿಯಬೇಕು ಎಂಬುದಕ್ಕೆ ಕಾರಣಬೇಕು. ಕಾಂಗ್ರೆಸ್–ದಳದ ಸರಕಾರ ಉಳಿಯಲಿ ಎಂಬುದು ರಾಜ್ಯದ ಜಾತ್ಯತೀತ, ಪ್ರಜಾಸತ್ತಾತ್ಮಕ, ಸೌಹಾರ್ದಪ್ರಿಯ ಜನರ ಆಶಯವಾಗಿದೆ. ಆದರೆ ಸಮ್ಮಿಶ್ರ ಸರಕಾರದ ಆಡಳಿತ ವೈಖರಿ ಆ ಆಶಯಕ್ಕೆ ಧಕ್ಕೆ ತರುವಂತಿದೆ. ಸ್ಪಷ್ಟವಿಲ್ಲದ ಸುಪ್ರೀಂ ಕೋರ್ಟ್ ತೀರ್ಪು, ರಾಜ್ಯಪಾಲರ ರಾಜಕೀಯ ನಡೆ, ಅತೃಪ್ತರೆಂಬ ಧನದಾಹಿಗಳು, ರಾಜಕೀಯ ವ್ಯಾಪಾರಿಗಳು ಬಚಾವಾಗಲು ಪೂರಕವಾಗಿವೆ. ಈ ಅತೃಪ್ತರಲ್ಲಿ ಬಹುತೇಕರು ಅಧಿಕಾರ ಮತ್ತು ತಮ್ಮ ಅವ್ಯವಹಾರಗಳ ರಕ್ಷಣೆಗಾಗಿ ಬಿ.ಜೆ.ಪಿ. ಜೊತೆ ಕೈ ಜೋಡಿಸಿದ್ದಾರೆಯೇ ಹೊರತು ತಮಗೆ ಮತ ನೀಡಿದ ಮತದಾರರ ಹಿತಾಸಕ್ತಿಗಾಗಿ ಅಲ್ಲ.

ಮುಖ್ಯಮಂತ್ರಿ ಕುಮಾರಸ್ವಾಮಿಗಳಿಗೆ ವಿಶ್ವಾಸ ಮತ ದೊರೆಯುತ್ತದೆಯೇ ಇಲ್ಲವೇ ಬೇರೆ ವಿಷಯ. ರಾಜ್ಯದಲ್ಲಿ ನಡೆಯುತ್ತಿರುವ ಒಟ್ಟಾರೆ ವಿದ್ಯಮಾನ ನೋಡಿದರೆ ಯಾರೇ ಗೆದ್ದರೂ ಸೋತದ್ದು ಮಾತ್ರ ಪ್ರಜಾಸತ್ತೆ. ಅನೈತಿಕ ರಾಜಕಾರಣದ ಬೆಟ್ಟದ ಮೇಲೆ ನಿಂತು ಒಬ್ಬರು ಇನ್ನೊಬ್ಬರಿಗೆ ನೈತಿಕತೆಯನ್ನು ಬೋಧಿಸುವ ಇಂದಿನ ಸಂದರ್ಭ ಒಂದು ಸಿನಿಮಾದ ಚಿತ್ರಕತೆಯಾಗಲು ಮಾತ್ರ ಯೋಗ್ಯ. ಇದನ್ನು ಅರ್ಥ ಮಾಡಿಕೊಳ್ಳಬೇಕಾದವರು ರಾಜ್ಯದ ಮತದಾರರು, ಸಮಗ್ರ ನಾಗರಿಕರು.






■ **ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೫/- |
| **ವಾರ್ಷಿಕ ಚಂದಾ** | ₹ ೩೦೦/- |
| **ಮೂರು ವರ್ಷಕ್ಕೆ** | ₹ ೬೦೦/- |

■ **ನವಕರ್ನಾಟಕ ಶಾಖೆಗಳು**

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

*(೩ನೇ ಪುಟದಿಂದ ಈ ತಿಂಗಳು)*

ಹಾಗೆ ಅನರ್ಹರಾದ ಸದಸ್ಯರು ಆರು ವರ್ಷಗಳ ಕಾಲ ಚುನಾವಣೆಯಲ್ಲಿ ಭಾಗವಹಿಸುವಂತಿಲ್ಲ. ವಿಪ್ ಜಾರಿಗೊಳಿಸುವುದು ರಾಜಕೀಯ ಪಕ್ಷಗಳ ಹಕ್ಕು. ಅದನ್ನು ಮೊಟಕುಗೊಳಿಸುವಂತಿಲ್ಲ. ಇದೇ ಕ್ರಿಯಾ ಲೋಪದ ಆಧಾರ. ಅದರ ಬಗ್ಗೆಯೂ ಚರ್ಚೆ, ಸುದೀರ್ಘ ಭಾಷಣಗಳು, ಒಂದು ಬಗೆಯಲ್ಲಿ ವಿಳಂಬ ಮಾಡುವ ಪ್ರಕ್ರಿಯೆ, ಕಾಲಹರಣ, ಇದಕ್ಕೆ ತೆರಿಗೆದಾರರ ಹಣದ ವೆಚ್ಚ. ಅಂತೂ ಅಧಿಕಾರಕ್ಕಾಗಿ ಭಾಜಪ ಮತ್ತು ಕಾಂಗ್ರೆಸ್–ಜೆಡಿಎಸ್ ದೋಸ್ತಿಗಳ ಈ ಜಂಗೀ ಕುಸ್ತಿ ಪರಿಣಾಮ ನಿರೀಕ್ಷಣೆ ಮಾತ್ರ ಜನರ ಪಾಲಿಗೆ. ಪರಿಸ್ಥಿತಿ ಹೀಗಿರುವಾಗ ಜನಪರ ಕಾರ್ಯಕ್ರಮ ಗಳು ಅಮಲಿಗೆ ಬರುವುದಾದರೂ ಹೇಗೆ? ಶಾಸನ ಸಭೆ ವಿಸರ್ಜನೆ, ಮರು ಚುನಾವಣೆ ಒಂದೇ ಮಾರ್ಗವೇ? ಇದು ಜನರಿಗೆ ಮತ್ತೆ ಹೊರೆಯಾಗದೆ? ಇದೇ ಮುಖ್ಯ ಪ್ರಶ್ನೆ. ಅಂತೂ ತುರಾತುರಿಯಲ್ಲಿ ಅಧಿಕಾರಕ್ಕೆ ಬಂದ ದೋಸ್ತಿ ಸರಕಾರಕ್ಕೆ ಅಧಿಕಾರ ಉಳಿಸಿಕೊಳ್ಳುವುದೇ ಮುಖ್ಯವಾಗಿರುವಾಗ ಇನ್ನು ಜನಪರ ಯೋಜನೆಗಳಿಗೆ ಸಮಯ ಯಾವಾಗ ಒದಗೀತು. ಇಂಥ ಪರಿಸ್ಥಿತಿ ಎಷ್ಟು ಬೇಗ ಅಂತ್ಯಗೊಂಡರೆ ಅಷ್ಟೂ ಕ್ಷೇಮ.

* * *

ಚುನಾವಣೆಯಲ್ಲಿ ಆರಿಸಿಬಂದಿರುವ ಎಮ್ಮೆಲ್ಲೇಗಳು ಒಂದು ಸಲ ಆಯ್ಕೆಯಾದರೆ ತಮ್ಮನ್ನು ಆಯ್ಕೆ ಮಾಡಿದ ಜನರ ಮುಖ ನೋಡುವುದು ಮತ್ತೆ ಚುನಾವಣೆ ಬಂದಾಗಲೇ. ಇದು ಸ್ವತಂತ್ರ ಭಾರತದ ಚುನಾಯಿತ ಪ್ರತಿನಿಧಿಗಳ ವೈಖರಿ. ಎಮ್ಮೆಲ್ಲೇಗಳಾಗಲೀ, ಎಂಪಿಗಳಾಗಲೀ ಭೇದವಿಲ್ಲ. ಸಾಕಷ್ಟು ಹಣ ಖರ್ಚು ಮಾಡಿ, ಮತದಾರರನ್ನು ಕೊಳ್ಳುವ ಈ ವ್ಯವಸ್ಥೆ ಇರುವ ವರೆಗೆ ಏನೂ ಮಾಡುವಂತಿಲ್ಲ. ಒಮ್ಮೆ ಚುನಾಯಿತನಾದ ಪ್ರತಿನಿಧಿಯನ್ನು ಹಿಂದಕ್ಕೆ ಕರೆಸಿಕೊಳ್ಳುವ ವ್ಯವಧಾನವೂ ಇಲ್ಲ. ಚುನಾಯಿಸುವ ಹಕ್ಕು ಪ್ರಜೆಗಳಿಗೆ ಇದೆಯೇ ಹೊರತು ವಾಪಸ್ಸು ಕರೆಸಿಕೊಳ್ಳುವ ಹಕ್ಕಿಲ್ಲ. ಹಾಗೆಯೇ ರಾಜಕೀಯ ಪಕ್ಷಗಳು ಪಡೆಯುವ ಮತಗಳ ಸಂಖ್ಯೆ ಆಧಾರಿತವಾದ ಪ್ರಪೋರ್ಷನಲ್ ರೆಪ್ರೆಸೆಂಟೇಶನ್ ವ್ಯವಸ್ಥೆಯೂ ಇಲ್ಲ. ಹಾಗಾಗಿ ಚುನಾವಣಾ ಸುಧಾರಣೆ ಗಳಾಗುವವರೆಗೆ ಏನೂ ಮಾಡುವಂತಿಲ್ಲ. ಈಗಿನ ವ್ಯವಸ್ಥೆಯಲ್ಲಿ ಅದು ನಿರೀಕ್ಷಣೆಗೂ ಮೀರಿದ್ದಾಗಿದೆ. ಹಾಗಾಗಿ ಒಮ್ಮೆ ಚುನಾಯಿತನಾದ ಪ್ರತಿನಿಧಿ ಮಾರಾಟದ ಸರಕಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ. ಪಕ್ಷದಿಂದ ಪಕ್ಷಕ್ಕೆ ಹಾರುವ ಪ್ರಕ್ರಿಯೆ ತಪ್ಪಿಸಲು ಬಂದದ್ದೇ ಪಕ್ಷಾಂತರ ಕಾಯಿದೆ. ಕನಿಷ್ಠ ಪ್ರಮಾಣದ ಸದಸ್ಯರುಗಳು ಒಂದು ಗುಂಪಾಗಿ ಪಕ್ಷ ತ್ಯಜಿಸಲು ಅವಕಾಶವಿದೆ. ಆದರೆ ಪ್ರತಿ ಪಕ್ಷಗಳು ಅಥವಾ ಅಧಿಕಾರದಲ್ಲಿರುವ ಪಕ್ಷದ ಆಮಿಷ ಗಳಿಗೆ ಬಲಿಯಾಗುವವರು ಅನರ್ಹರೆನಿಸಿಕೊಳ್ಳುತ್ತಾರೆ. ಕರ್ನಾಟಕದ ರಾಜಕಾರಣದಲ್ಲಿ ನಡೆಯುತ್ತಿರುವ ವಿದ್ಯಮಾನವೇ ಇದು. ದಕ್ಷಿಣ ಭಾರತದಲ್ಲಿ ನೆಲೆಯೂರಲು ಭಾಜಪ ಭಾರಿ ಪ್ರಯತ್ನ ನಡೆಸಿದೆ. 'ಆಪರೇಷನ್ ಕಮಲ' ಬಲು ಜೋರು ಈಗ. ಅದಕ್ಕೆ ಅಧ್ಯಕ್ಷ ಷಾ ಅನುಮತಿಯೂ ದೊರೆತಿದೆ. ಇದಕ್ಕೆ ಬೇಕಾದಷ್ಟು ಉದಾಹರಣೆಗಳಿವೆ. ಅವನ್ನು ಇಲ್ಲಿ ಪಟ್ಟಿ ಮಾಡುವುದು ಬೇಡ. (೨೦–೦೭–೨೦೧೯)

* * *

ಮೋದಿ ಸರಕಾರದ ಐದು ವರ್ಷಗಳ ಆಡಳಿತ ಮುಗಿದು ಎರಡನೆಯ ಅವಧಿ ಪ್ರಾರಂಭವಾಗಿದೆ. ಮೊದಲ ಐದು ವರ್ಷಗಳ ವೈಫಲ್ಯಗಳಲ್ಲಿ ಎದ್ದು ಕಾಣುವುದು ಸ್ವಚ್ಛ–ಭಾರತ ಅಭಿಯಾನ, ಉದ್ಯೋಗ ಸೃಷ್ಟಿ, 'ಭಾರತದಲ್ಲೇ ತಯಾರಿಸಿ' ಕರೆ ಇವುಗಳು. ನೋಟು ರದ್ದತಿಯ ಫಜೀತಿ ಬೇರೆಯೇ ವಿಷಯ ವಾಗುತ್ತದೆ. ಅದರಿಂದ ಇಲ್ಲಿ ಅದರ ಪ್ರಸ್ತಾಪ ಬೇಡ. ಬೆಂಗಳೂರು ನಗರದ ರಸ್ತೆಗಳನ್ನು ನೋಡಿದರೆ ಸಾಕು ಸ್ವಚ್ಛ ಭಾರತ ಎಷ್ಟು ಯಶಸ್ವಿಯಾಗಿದೆ ಎಂಬುದಕ್ಕೆ. ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯನ್ನು ರಾಷ್ಟ್ರೀಯ ಹಸಿರು ನ್ಯಾಯ ಮಂಡಳಿ ತರಾಟೆಗೆ ತೆಗೆದು ಕೊಂಡಿದೆ. ತೀವ್ರವಾಗಿ ಕಲುಷಿತಗೊಂಡಿರುವ ಪ್ರದೇಶ ಗಳಲ್ಲಿ ಮಾಲಿನ್ಯ ಉಂಟುಮಾಡುತ್ತಿರುವ ಕಾರ್ಖಾನೆ ಗಳನ್ನು ಮೂರು ತಿಂಗಳೊಳಗಾಗಿ ಮುಚ್ಚಿಸಬೇಕು ಎಂಬುದಾಗಿ ಹಸಿರು ನ್ಯಾಯ ಮಂಡಳಿ ತಾಕೀತು ಮಾಡಿದೆ. ಅಂದ ಹಾಗೆ ಗಂಗಾ ನದಿಯ ನೀರಿನ ಶುದ್ಧೀಕರಣದ ವಿಷಯ ಈಗ ಮೋದಿ ಚಕಾರ ವೆತ್ತುತ್ತಿಲ್ಲ. ಸಾರ್ವಜನಿಕ ಆರೋಗ್ಯ ಕಡೆಗಣಿಸಿ ಆರ್ಥಿಕ ಅಭಿವೃದ್ಧಿಗೆ ಆದ್ಯತೆ ನೀಡುವುದೂ ಸರಿಯಲ್ಲ ಎಂಬುದಾಗಿ ನ್ಯಾಯಮಂಡಳಿ ಅಭಿಪ್ರಾಯಪಟ್ಟಿದೆ. ಇನ್ನು ಉದ್ಯೋಗ ಸೃಷ್ಟಿ ಒಂದು ಮರೀಚಿಕೆಯಾಗಿದೆ. ಮೋದಿ ಮೊದಲ ಅವಧಿಗೆ ಅಧಿಕಾರದ ಚುಕ್ಕಾಣಿ ಹಿಡಿದಾಗ ಒಂದು ಕೋಟಿ ಉದ್ಯೋಗ ಸೃಷ್ಟಿಯ ಭರವಸೆ ನೀಡಿದ್ದರು. ಕಪ್ಪುಹಣವನ್ನು ಭಾರತಕ್ಕೆ ತಂದು ಬಡವರ ಜೇಬಿಗೆ ತುಂಬುವ ಭರವಸೆಯಂತೆಯೇ ಉದ್ಯೋಗ ಸೃಷ್ಟಿಯೂ ವಿಫಲಗೊಂಡಿದೆ. ಹೊಸವಿತ್ತೀಯ ಮಂತ್ರಿ ಮಂಡಿಸಿದ ಬಜೆಟ್‌ನಲ್ಲೂ ಉದ್ಯೋಗ ಸೃಷ್ಟಿಯ ಭರವಸೆ ಕಾಣದಾಗಿದೆ. ಇನ್ನು 'ಭಾರತದಲ್ಲೇ ತಯಾರಿಸಿ' ಒಂದು ಘೋಷಣೆ ಯಾಗಿಯೇ ಉಳಿದಿದೆ. ಮುಂದಿನ ಐದು ವರ್ಷಗಳಲ್ಲಿ ಇನ್ನೇನೇನು ಭರವಸೆಗಳು ಬರುತ್ತದೋ ನೋಡಬೇಕು.

* * *

ಬೆಂಗಳೂರಿನಿಂದ ರಾಮನಗರಕ್ಕೆ ಹೋಗುವ ದಾರಿಯಲ್ಲಿ ಒಂದು ಪಕ್ಕಕ್ಕೆ ನಿತ್ಯಾನಂದ ಎಂಬ ಢೋಂಗಿ ಬಾಬಾನ ಆಶ್ರಮವಿದೆ. ನಮ್ಮ ದೇಶದಲ್ಲಿ ಶತಮೂರ್ಖ ರಾಗುವ ಹಕ್ಕು ಎಲ್ಲರಿಗೂ ಇದೆ. ಈಚಿನ ವರ್ಷಗಳಲ್ಲಿ ಆ ಹಕ್ಕನ್ನು ಚಲಾಯಿಸುವವರು ಹೆಚ್ಚುತ್ತಿದ್ದಾರೆ. ತಾವೂ ಅಧಿಕಾರದ ಸ್ಥಾನಗಳನ್ನು ಪಡೆಯಬಹುದೆಂಬ ಮಹದಾಶಯ ಅವರದೆಂದು ತೋರುತ್ತದೆ. ಭೂಮಿಯು ಸ್ಥಿರ, ಸೂರ್ಯನು ಅದರ ಸುತ್ತ ಸುತ್ತುತ್ತಾನೆಂದು ರೋಮನ್ ಕ್ಯಾಥೊಲಿಕ್ ಚರ್ಚ್ ಹದಿನಾರನೆಯ ಶತಮಾನದಲ್ಲಿ ಸಹ ನಂಬಿತ್ತು. ಅದನ್ನು ಪ್ರಶ್ನಿಸಿ ದವರಿಗೆ ಕಿರುಕುಳ ನೀಡಲಾಗುತ್ತಿತ್ತು. ಜೋರ್ಡನೊ ಬ್ರೂನೋ ಎಂಬ ಪಾದ್ರಿ ಖಗೋಳಶಾಸ್ತ್ರಜ್ಞನೂ ಆಗಿದ್ದ. ಕೋಪರ್ನಿಕಸ್‌ನ ಸಿದ್ಧಾಂತವನ್ನು ಬೆಂಬಲಿಸಿದ ಕಾರಣಕ್ಕೆ ಅವನನ್ನು ಜೀವಂತ ಸುಡಲಾಯಿತು. ಗೆಲಿಲಿಯೊ ಸುಖಾಸುಮ್ಮನೆ ಪ್ರಾಣ ಕಳೆದುಕೊಳ್ಳಲು ಸಿದ್ಧನಿರಲಿಲ್ಲ. ಪೋಪ್‌ನ ವಕ್ತಾರರ ನಿಲುವು ಸರಿಯಾಗಿದೆಯೆಂದು ಘೋಷಿಸಿ, "ಆದರೂ ಭೂಮಿ ತಿರುಗುತ್ತಲೇ ಇದೆ" ಎಂದು ಪಿಸುಮಾತಿನಲ್ಲಿ ನುಡಿದ ನಂತೆ. ನಮ್ಮ ನಿತ್ಯಾನಂದಸ್ವಾಮಿ ಹದಿನಾರನೆಯ ಶತಮಾನದ ಮೂರ್ಖತನವನ್ನು ಮೀರಿಸುತ್ತಿದ್ದಾನೆ ಇಪ್ಪತ್ತೊಂದನೆಯ ಶತಮಾನದಲ್ಲಿ. ಜೂನ್ ತಿಂಗಳ ಒಂದು ಪ್ರಾತಃಕಾಲ ಹೆಚ್ಚು ನಿದ್ದೆ ಮಾಡಿಬಿಟ್ಟನೋ ಏನೋ! ಆದ್ದರಿಂದ ತನ್ನ ಉಪದೇಶಾಮೃತ ನೀಡಲು ಬೆಳಿಗ್ಗೆ ತಡವಾಗಿ ಬಂದಿದ್ದನೆಂದು ತೋರುತ್ತದೆ. ಅವನು ಹೇಳಿದನಂತೆ : "ನೋಡಿ ಶಿಷ್ಯವೃಂದದವರೇ, ಎಂತಹ ಅದ್ಭುತ! ಇಂದು ಸೂರ್ಯನು ತಡವಾಗಿ ಉದಯಿಸಿದ್ದಾನೆ. ನಾನೇ ಸೂರ್ಯನಿಗೆ ಹೇಳಿದ್ದೆ, ತಡವಾಗಿ ಏಳೂವರೆಯ ನಂತರ ಉದಯಿಸು, ಎಂದು." ಹಾಗೇ ಮಾಡಿದ ಸೂರ್ಯ!! ಶಿಷ್ಯರೆಲ್ಲಾ ಅವಾಕ್ಕಾದರು, ತಮ್ಮ ಸ್ವಾಮಿಯ ಅಮೋಘ ಶಕ್ತಿಯನ್ನು ಮೆಚ್ಚಿಕೊಂಡು ಅವನಿಗೆ ಉಘೇ, ಉಘೇ, ಹೇಳಿದರು. ಸ್ವಾಮಿಯು ದುರಹಂಕಾರಿ ಮೂರ್ಖನಾಗಿ ಸಿನಿಮಾದ 'ಆದರ್ಶ ಸತಿ'ಯಂತೆ ಸೂರ್ಯನನ್ನು ಹಿಡಿದು ನಿಲ್ಲಿಸುವ ಪರಮಶಕ್ತಿ ಅವನಿಗಿದೆಯೆಂದು ಹೇಳಿಕೊಂಡರೆ ಹಾಳಾಗಲಿ, ಹೆಚ್ಚೆಂದರೆ ಆತನನ್ನು ನಿಮ್ಹಾನ್ಸ್‌ಗೆ ಕರೆದು ಕೊಂಡು ಹೋಗಬಹುದು. ಆದರೆ ಆತನ ಮಹಾ ಶಿಷ್ಯರಿಗೆ ಎಂತಹ ಅಪಾರ ಶ್ರದ್ಧೆ ಆತನ ಬೊಗಳೆಯಲ್ಲಿ! ಅವರಿಗೆ ಎಲ್ಲಿ ಚಿಕಿತ್ಸೆ ಕೊಡಿಸುವುದು ಎಂಬುದೇ ದೇಶಕ್ಕೆ ಯೋಚನೆಯಾಗಿದೆ. ಮುಂಬೈ ವಿಜ್ಞಾನ ಸಮ್ಮೇಳನದಲ್ಲಿ "ಋಗ್ವೇದದಲ್ಲಿ ಅಂತರಗ್ರಹ ಪ್ರಯಾಣ ಸಾಧನಗಳು ಇದ್ದವು" ಎಂದು ಸಂಶೋಧನಾ ಪ್ರಬಂಧ ಮಂಡಿಸಿದ್ದ ಪ್ರವೀಣನ ಬಳಿಗೆ ಇವರನ್ನೆಲ್ಲಾ ಸಾಗಹಾಕಬೇಕು. ಯಾರೋ ಒಬ್ಬ ಹೇಳಿದ್ದನಂತೆ : "ನಾನು ಪ್ರವಾದಿ" ಎಂದು. ಅವನೆದುರಿಗಿದ್ದವನು ಪ್ರತ್ಯುತ್ತರ ನೀಡಿದ : "ಏನೆಂದೆ? ನೀನು ಪ್ರವಾದಿಯೇ? ನಾನು ಯಾರನ್ನೂ ಹಾಗೆ ಕಳಿಸಿಯೇ ಇಲ್ಲವಲ್ಲ." ಹುಚ್ಚಾಸ್ಪತ್ರೆಯಲ್ಲಿ ಮಾತ್ರ ನಡೆಯಬಹುದಾದ ಸಂಭಾಷಣೆ ಇದು ಎಂದು ಅಂದುಕೊಳ್ಳುವಂತಿಲ್ಲ. ಅದು ನಿತ್ಯಾನಂದನ ಮಠದಲ್ಲೂ ಕೇಳಿಬರುವ ಸಂಭಾಷಣೆ. ಒಬ್ಬ ಪ್ರವಾದಿಯಾದರೆ ಇನ್ನೊಬ್ಬ ಸ್ವತಃ ದೇವರು.

* * *

ಭದ್ರಾವತಿಯ ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಯನ್ನು ಮಾರಲು ಚಡಪಡಿಸುತ್ತಿರುವ ಜನದ್ರೋಹಿ ತೀರ್ಮಾನದ ರೂವಾರಿಗಳ ವಿರುದ್ಧ ಕಾರ್ಖಾನೆಯ ನೌಕರರು ಪ್ರತಿಭಟಿಸುತ್ತಿರುವುದು ಸ್ವಾಗತಾರ್ಹ. ಭದ್ರಾವತಿ ನಗರದ ಅರ್ಧ ಭಾಗವನ್ನು ಹರಾಜಿಗಿಟ್ಟು ಅದನ್ನು ಧೂರ್ತರಿಗೆ ಚಿಕ್ಕ ಕವಡೆ ಕಾಸಿನ ಮೊತ್ತಕ್ಕೆ ಮಾರಿಬಿಡಲು ದೆಹಲಿಯ ಮಹಾನ್ ಅಭಿವೃದ್ಧಿ ಮುತ್ಸದ್ದಿಗಳು ಥಕ ಥಕ ಕುಣಿಯುತ್ತಿದ್ದಾರೆ. ಹತ್ತಾರು ಜೇಬುಗಳನ್ನು ತುಂಬಿಸಿಕೊಳ್ಳುವ ಹುನ್ನಾರ ಇದರಲ್ಲಿ ಅಡಗಿದೆ. ಗತಿಸಿದ ಶ್ರೀ. ಅನಂತಕುಮಾರ ಹಿಂದೆ ದೇಶದ 'ಅಶೋಕ ಹೊಟೇಲ್'ಗಳನ್ನು ಮಾರಿದ್ದರು; ಈಗ ನಲವತ್ತೈದು ಶ್ರೀಮಂತ ಕಾರ್ಖಾನೆಗಳ ಮಾರಾಟ ನಡೆಯಲಿದೆ. ದೇಶದ ಅಭಿವೃದ್ಧಿಗೆ ಅದು ಅನಿವಾರ್ಯವೆಂದು ಯಾರೋ ಕೇಂದ್ರ ಸಚಿವರಿಗೆ ಜ್ಞಾನೋದಯವಾಗಿದೆ! ಎರಡು

ದಶಕಗಳ ಹಿಂದೆ ಭದ್ರಾವತಿ ಕಾರ್ಖಾನೆಯು ಕರ್ನಾಟಕ ಸರ್ಕಾರದ ಮಾಲಿಕತ್ವದಲ್ಲಿತ್ತು. ಕೇವಲ ಒಂದು ರೂಪಾಯಿಗೆ ಅದನ್ನು "ಭಾರತ ಉಕ್ಕು ಪ್ರಾಧಿಕಾರ"ಕ್ಕೆ ಹಸ್ತಾಂತರಿಸಲಾಗಿತ್ತು. ಸಾವಿರ ಕೋಟಿ ರೂಪಾಯಿ ಹೂಡಿ ಕಾರ್ಖಾನೆಯನ್ನು ಅಭಿವೃದ್ಧಿ ಗೊಳಿಸುವುದಾಗಿ ಕೇಂದ್ರ ಸರ್ಕಾರ ಹೇಳಿತ್ತು. ಕಬ್ಬಿಣದ ಅದುರಿನ ಗಣಿಯೊಂದನ್ನು ೨೦೧೭ರಲ್ಲಿ ಭದ್ರಾವತಿ ಕಾರ್ಖಾನೆಗೆಂದೇ ಕರ್ನಾಟಕದ ಸರ್ಕಾರ ಕೇಂದ್ರಕ್ಕೆ ನೀಡಿದೆ. ಬಳ್ಳಾರಿಯ ಬಳಿ ರಾಮನದುರ್ಗ ಬೆಟ್ಟದ ಶ್ರೇಣಿಯ ೧೫೦ ಎಕರೆಗಳ ವಿಸ್ತೀರ್ಣದಲ್ಲಿ ಆ ಗಣಿ ಇದೆ. ಕೇಂದ್ರ ಸರ್ಕಾರವು ಭದ್ರಾವತಿ ಮತ್ತು ರಾಮನದುರ್ಗ ಎರಡನ್ನೂ ಮಾರಿ ಮಜ್ಜಿಗೆ ಕುಡಿದು ಸುಖಿಸುತ್ತದೇನೊ! ಕೇಂದ್ರದಿಂದ ನಾವು ಪಡೆದಿರುವ ೧ ರೂಪಾಯಿಯನ್ನು ಈ ಕೂಡಲೇ ಹಿಂದಿರುಗಿಸಿ ಭದ್ರಾವತಿ ಕಾರ್ಖಾನೆ ಮತ್ತು ರಾಮನದುರ್ಗ ಗಣಿ, ಎರಡನ್ನೂ ಹಿಂದಕ್ಕೆ ಪಡೆದು ಸುಮಾರು ಒಂದು ಶತಮಾನದ ಇತಿಹಾಸವನ್ನುಳ್ಳ ಭದ್ರಾವತಿ ಕಾರ್ಖಾನೆಯನ್ನು ಉಳಿಸಿಕೊಳ್ಳಬೇಕು, ಬೆಳೆಸಿಕೊಳ್ಳಬೇಕು. ಭದ್ರಾವತಿ ಕಾರ್ಖಾನೆಯು ಕಿಲುಬಿದ ಕಾಸೇನೂ ಅಲ್ಲ. ಅದು ಕೇಂದ್ರ ಸರ್ಕಾರದ ಸಂಪತ್ತೂ ಅಲ್ಲ. ನಮ್ಮ ಸಂಪತ್ತನ್ನು ಹರಾಜು ಹಾಕಹೊರಟಿರುವ ತಲೆಹಿಡಿಕತನವನ್ನು ಸರ್ವಥಾ ಧಿಕ್ಕರಿಸಬೇಕು. ಭದ್ರಾವತಿ ಕಾರ್ಖಾನೆಯ ಕೆಲಸಗಾರರ ಬೆನ್ನಿಗೆ ಇಡೀ ರಾಜ್ಯ ನಿಲ್ಲಬೇಕು, ಏಕೆಂದರೆ ಅದು ನಮ್ಮ ರಾಜ್ಯದ ಔದ್ಯಮಿಕ ಪರಂಪರೆಯ ಕಲಶಪ್ರಾಯವಾದ ಕಾರ್ಖಾನೆ. ಕನ್ನಡ ಮತ್ತು ಕರ್ನಾಟಕದ ಪರವಾಗಿರುವವರೆಲ್ಲಾ ಒಟ್ಟಾಗಿ ಸೆಣಸಲು ಸಿದ್ಧರಾಗಿದ್ದೇವೆಯೆ? ವಿಧಾನಸೌಧದಲ್ಲಿ ಸಭೆ ಸೇರುವ ಜನಪ್ರತಿನಿಧಿಗಳು ತಮ್ಮ ಕ್ಷುದ್ರ ಆಸೆ ಮತ್ತು ವೈಮನಸ್ಯಗಳ ನಡುವೆಯೂ ಇತ್ತ ಗಮನ ಹರಿಸುವ ಜವಾಬ್ದಾರಿಯನ್ನು ಹೊಂದಿದ್ದಾರೆ.

✶ ✶ ✶

"ವಿಧಾನ ಸೌಧದಲ್ಲಿ ರಾಜ್ಯದ ಪ್ರಗತಿಗಾಗಿ ತಮ್ಮನ್ನು ತಾವು ಸದಾ ಮುಡಿಪಾಗಿಟ್ಟುಕೊಂಡಿರುವ ಜನಪ್ರತಿನಿಧಿಗಳು" ಎಂದಾಗ ಕಳೆದ ಒಂದು ತಿಂಗಳ ಪ್ರಹಸನ ಕ್ರೌರ್ಯವನ್ನು ಜನತೆಯು ಮರೆಯಲಾದೀತೆ? ನಮ್ಮ ರಾಜ್ಯಕ್ಕೆ ಕಳಂಕವನ್ನು ಇಷ್ಟು ದೊಡ್ಡ ಪ್ರಮಾಣದಲ್ಲಿ ಹೇರಲು ಈ ಪ್ರತಿನಿಧಿಗಳಿಗೆ ಜನರ ಮೇಲೆ ಅಷ್ಟೊಂದು ಸಿಟ್ಟು ಉಂಟಾದದ್ದು ಏಕೆ ಮತ್ತು ಹೇಗೆ? ಅವರನ್ನು ಚುನಾಯಿಸಿದ ಒಂದು ತಪ್ಪನ್ನು ಬಿಟ್ಟರೆ ನಾವೆಲ್ಲಾ ಬೇರೇನು ಅಪರಾಧ ಮಾಡಿದ್ದೇವೆ? ನಮ್ಮ ಪ್ರತಿನಿಧಿಗಳ ಸರಾಸರಿ ಸಂಪತ್ತಿನ ಪ್ರಮಾಣವನ್ನು ತಿಳಿದುಕೊಂಡರೆ ಸಿದ್ಧಾಂತ, ಅಭಿವೃದ್ಧಿ, ಜನತಾಸೇವೆ, ಇತ್ಯಾದಿಗಳ ಸಂಪೂರ್ಣ ಅರ್ಥ ಸುಲಭವಾಗಿ ತಿಳಿಯುತ್ತದೆ. ನಮ್ಮದು ಕಂಟ್ರಾಕ್ಟು ಮತ್ತು ದಲ್ಲಾಳಿ ಸರ್ಕಾರವಾಗಿಬಿಟ್ಟಿದೆ. ರಾಜ್ಯದ ಬೊಕ್ಕಸಕ್ಕೆ ಸೇರಬೇಕಾಗಿದ್ದ ಹಣವನ್ನು ಈ ಪ್ರತಿನಿಧಿಗಳಲ್ಲನೇಕರು ಅಪಮಾರ್ಗಗಳಿಂದ ತಮ್ಮ ಸ್ವಂತಕ್ಕೆ ಬಳಿದುಹಾಕಿಕೊಂಡಿದ್ದಾರೆ. ಅದನ್ನು ಉಳಿಸಿಕೊಳ್ಳಲು ಕಸರತ್ತು ನಡೆಯಬೇಕಲ್ಲ, ಅದಕ್ಕೆ ಕೆಲವರು 'ಅತೃಪ್ತ'ರಾಗುತ್ತಾರೆ, ಮುಂಬೈ-ದೇವನಹಳ್ಳಿಗಳಿಗೆ ತೊಲಗಿ ಐಷಾರಾಮಿ ಹೋಟೇಲುಗಳಲ್ಲಿ ತಂಗುತ್ತಾರೆ, ಯಾವನೋ ನೀಡುವ ವಿಮಾನದ ಸೌಕರ್ಯದಿಂದ ಸುಖಿಸುತ್ತಾರೆ, ರಾಜೀನಾಮೆ ಕೊಡಲು ದೌಡಾಯಿಸಿ ಬರುತ್ತಾರೆ, ದೆಹಲಿಯ ಪ್ರಭುಗಳೆದುರು ಸಾಷ್ಟಾಂಗ ನಮಸ್ಕಾರ ಮಾಡುತ್ತಾರೆ ಮತ್ತು ಕೊಸರೂ ಇರಲೆಂದು "ನನ್ನ ಕ್ಷೇತ್ರದ ನಿರಂತರ ಅಭಿವೃದ್ಧಿಗಾಗಿ ಈಗಿನಿಂದ ನಾನು ಮರ್ಕಟಶೂರನಾಗುತ್ತಿದ್ದೇನೆ" ಎಂದು ಹೇಳಿಕೊಳ್ಳುತ್ತಾರೆ. ದೆಹಲಿಯ ಹೆಮ್ಮರಕ್ಕೆ ಜಗಿಯದಿದ್ದರೆ ಅಲ್ಲಿಂದ ಇವರ ಸ್ವತ್ತಿನ ತನಿಖೆಗೆ "ಪ್ರಾಮಾಣಿಕ ಅಧಿಕಾರಿಗಳನ್ನು ಕಳಿಸಲಾಗುತ್ತದೆ" ಎಂಬ ಭೀತಿಯಿಂದ ಇವರು ಉಡುಗಿಹೋಗಿದ್ದಾರೆ. ಇನ್ನು ಕೆಲವರು ಸಚಿವ ಶ್ರೀ. ರೇವಣ್ಣ ಅವರ ಮಹಿಮೆಯಿಂದಾಗಿ ತಾವು ನಿರ್ಗಮಿಸುತ್ತಿರುವುದಾಗಿಯೂ ಹೇಳಿದ್ದುಂಟು. ಕಾರಣಗಳನ್ನೇನೋ ಒಪ್ಪಬೇಕಾದ್ದೆ! ಆದರೆ ರೋಗದ ಮೂಲವೆಂದರೆ ಎಗ್ಗಿಲ್ಲದ ಭ್ರಷ್ಟತನವೆಂಬುದಕ್ಕೆ ಪುರಾವೆಗಳು ಸಾಕಷ್ಟಿವೆ. ಇಂಥವರನ್ನು ತಮ್ಮ ಪ್ರತಿನಿಧಿಗಳನ್ನಾಗಿ ಮಾಡಿಕೊಂಡೆವಲ್ಲಾ ಎಂದು ಎಷ್ಟು ಮಂದಿ ಪರಿತಪಿಸುತ್ತಿದ್ದಾರೋ ತಿಳಿಯದು. ಆದರೆ ಕೊಟ್ಟಿಗೆಯನ್ನು ಶುಭ್ರಗೊಳಿಸುವ ಕೆಲಸದಲ್ಲಿ ಜನತೆಯು ಒಂದಾಗಬೇಕಿದೆ.

✶ ✶ ✶

ನಮ್ಮ ದೇಶವು ಗಣರಾಜ್ಯವಾಗಿ ರೂಪುಗೊಂಡ ತರುವಾಯದಲ್ಲಿ ಅನೇಕ ದೇಶಗಳು ಸ್ನೇಹಹಸ್ತ ಚಾಚಿದವು. ಹಾಗೆ ಮಾಡುವಾಗ ಕೆಲವು ನಿರೀಕ್ಷೆಗಳನ್ನೂ ಇರಿಸಿಕೊಂಡಿದ್ದ ದೇಶಗಳಿಗೇನೂ ಕಡಿಮೆ ಇಲ್ಲ. ಸಮಾಜವಾದಿ ರಾಷ್ಟ್ರಗಳ ವಿರುದ್ಧ, ಮುಖ್ಯವಾಗಿ ಅಂದಿನ ಸೋವಿಯೆತ್ ಒಕ್ಕೂಟದ ವಿರುದ್ಧ, ವಿಷ ಕಾರುತ್ತಿದ್ದ ವಿಶಾಲ ತಳಹದಿಯ ಒಂದು ಬಣ ಅಸ್ತಿತ್ವಕ್ಕೆ ಬಂದಿತು. ಅದು ಈಗಲೂ ಜೀವಂತವಾಗಿದೆ, ಅಲ್ಲದೆ, ವಿವಿಧ ರಾಷ್ಟ್ರಗಳ ಸ್ವಾತಂತ್ರ್ಯ ಮತ್ತು ಸಾರ್ವಭೌಮತ್ವಕ್ಕೆ ಸಂಚುತರುವ ಹೀನಕಾಯಕದಲ್ಲಿ ತೊಡಗಿದೆ. ಅದರ ಹೆಸರು 'ನೇಟೋ,' ಅಂದರೆ ಅಟ್ಲಾಂಟಿಕ್ ಉತ್ತರದ ಕೆಲವು ದೇಶಗಳ ಸಮೂಹ. ಅಮೆರಿಕಾ, ಬ್ರಿಟನ್, ಫ್ರಾನ್ಸ್, ಮುಂತಾದ ಹದಿನಾಲ್ಕು ದೇಶಗಳನ್ನು ಹೊಂದಿದ್ದ 'ನೇಟೋ' ಈಗ ಬಹಳವಾಗಿ ವಿಸ್ತರಿಸಿದೆ. ಅದರ ಜೊತೆಗೆ 'ಸೀಟೋ' ಮತ್ತು 'ಸೆಂಟೋ'ಗಳೂ ಇದ್ದವು. 'ಸೀಟೋ' ಎಂಬುದು 'ಆಗ್ನೇಯ ಏಷ್ಯಾದ ಸಂಚುಕೂಟ'ವಾಗಿತ್ತು, ಪಾಕಿಸ್ತಾನ ಅದರ ಸದಸ್ಯತ್ವವನ್ನು ಹೊಂದಿತ್ತು. ಅಲಿಪ್ತ ವಿದೇಶಾಂಗ ನೀತಿಯನ್ನು ಅನುಸರಿಸುತ್ತಿದ್ದ ಭಾರತವು ನೇಟೋ, ಸೀಟೋ, ಸೆಂಟೋ ಮುಂತಾದವುಗಳ ಸೆಂಟಿಗೆ ಮಾರುಹೋಗದೆ ತನ್ನ ಸ್ವತಂತ್ರ ನೀತಿಯನ್ನು ಅನುಸರಿಸುತ್ತಾ ಬಂದಿದ್ದು ಇತಿಹಾಸ. ವಸಾಹತುಶಾಹಿ ದೌರ್ಜನ್ಯಕ್ಕೆ ಗುರಿಯಾಗಿದ್ದ ದೇಶಗಳು ಸ್ವತಂತ್ರವಾಗಿ ಅಂತರ ರಾಷ್ಟ್ರೀಯ ನೆಲೆಯಲ್ಲಿ ತಮ್ಮ ವರ್ಚಸ್ಸನ್ನು ಉಳಿಸಿ ಬೆಳೆಸಿಕೊಳ್ಳಲು ಅಲಿಪ್ತ ನೀತಿಯು ಪ್ರಬಲ ಸಾಧನವಾಗಿದ್ದಿತು. ಅದನ್ನು ತೀವ್ರವಾಗಿ ವಿರೋಧಿಸುತ್ತಿದ್ದ ಒಂದು ಪಕ್ಷದ ಪ್ರತಿನಿಧಿಗಳು ಈಗ ಅದನ್ನು ವಿರೂಪಗೊಳಿಸುವತ್ತ ಮುನ್ನುಗ್ಗುತ್ತಿದ್ದಾರೆ. ಆದ್ದರಿಂದ ಅದರ ಸಾಧಕ-ಬಾಧಕಗಳನ್ನು ತಿಳಿಯಬೇಕಾದ್ದು ಅಗತ್ಯ ಇದೆ. ಭಾರತವು 'ನೇಟೋ' ಕೂಟವನ್ನು ಸೇರಬೇಕೆಂದು ಅಮೆರಿಕಾ ಆಹ್ವಾನ ನೀಡುತ್ತಿದೆ. ಆ ದೇಶದ ಪ್ರತಿನಿಧಿ ಸಭೆಯು ಆ ಬಗ್ಗೆ ಒಂದು ನಿರ್ಣಯವನ್ನು ಸಹ ಅಂಗೀಕರಿಸಿದೆ. ನಾವು ಮೂಲತಃ ತಿಳಿಯಬೇಕಾದ ಕೆಲವು ಅಂಶಗಳಿವೆ : (ಅ) ನೇಟೋ ಸ್ವಯಂ ರಕ್ಷಣೆಗಿಂತಲೂ ಯಾರ ವಿರುದ್ಧವೋ ಇರುವಂತಹ ಕೂಟ; (ಆ) ನೇಟೋ ಸದಸ್ಯ ರಾಷ್ಟ್ರಗಳಲ್ಲಿ ನೇಟೋ ಸೇನಾ ನೆಲೆಗಳಿರುತ್ತವೆ; (ಇ) ನೆಲೆಗಳು ಬಹಳ ವಿಶಾಲವಾದ ಜಾಗ ಆಕ್ರಮಿಸುತ್ತವೆ, ಅಲ್ಲಿ ಯುದ್ಧ ವಿಮಾನಗಳು ಹಾಗೂ ನೌಕೆಗಳನ್ನು ಇರಿಸಲಾಗುತ್ತದೆ; (ಈ) ಸೇನಾಪಡೆಗಳಿಗೆ ವಾಸಕ್ಕೆ, ತರಬೇತಿಗೆ ಒಂದು ಪಟ್ಟಣವನ್ನು ನಿರ್ಮಿಸಲಾಗುತ್ತದೆ.

ಇದರ ನೇರ ಪರಿಣಾಮವೆಂದರೆ ದೇಶದ ಸ್ವಾಯತ್ತತೆ ಮತ್ತು ಸಾರ್ವಭೌಮತ್ವ ಭಗ್ನಗೊಳ್ಳುತ್ತವೆ, ನೆಲೆಗಾಗಿ ನಮ್ಮ ಅನೇಕ ಪಟ್ಟಣಗಳು ಮತ್ತು ಹಳ್ಳಿಗಳು ನಾಶವಾಗುತ್ತವೆ, ಅಲ್ಲಿ ವಾಸಿಸುವವರು ಸ್ಥಳಾಂತರಗೊಂಡು ಪರದೇಸಿಯಾಗುತ್ತಾರೆ. ಎಲ್ಲದಕ್ಕಿಂತಲೂ ಹೆಚ್ಚಾಗಿ ಚೀಣಾ, ಮುಂತಾದ ದೇಶಗಳ ಕೆಂಗಣ್ಣಿಗೆ ನಮ್ಮ ದೇಶವು ಗುರಿಯಾಗುತ್ತದೆ. ಇಂತಹ ಭವಿಷ್ಯವು ನಮಗೆ ಬೇಕೆ ಮತ್ತು ಇಂತಹ ಅನೀತಿಯುತ ವಿದೇಶಾಂಗ ನೀತಿಯು ನಮ್ಮ ದೇಶಕ್ಕೆ ಮಾರಕವಾಗುವುದಿಲ್ಲವೆ? ಕುರುಡು ಆರಾಧನಾ ಮನೋಭಾವದಿಂದ ಕೇಂದ್ರ ಸರ್ಕಾರದ ಜನವಿರೋಧಿ ಮತ್ತು ದೇಶವಿರೋಧಿ ನೀತಿಗಳನ್ನು ಮಾನ್ಯ ಮಾಡುತ್ತಾ ಹೋದರೆ ನಾವು ಪರಾಧೀನರಾಗುತ್ತೇವೆ, ನಮ್ಮ ಇತಿಹಾಸದಲ್ಲಿ ಹಲವು ಕಪ್ಪು ಚುಕ್ಕೆಗಳನ್ನು ತುಂಬಿಕೊಳ್ಳುತ್ತೇವೆ. ಜನತೆಗೆ ಇದೊಂದು ಮಹತ್ವದ ಘಟ್ಟ; ಸರಿಯಾದ ಪರಾಮರ್ಶೆಯಿಂದ ನಮ್ಮ ಹಾದಿಯನ್ನು ಕಂಡುಕೊಳ್ಳಬೇಕು, ಇಲ್ಲವಾದರೆ ಇತಿಹಾಸವು ನಮ್ಮನ್ನೆಂದೂ ಕ್ಷಮಿಸುವುದಿಲ್ಲ. ಸೀಟೋದಲ್ಲಿದ್ದ ಪಾಕಿಸ್ತಾನವು ಅಮೆರಿಕಾ ಸೇನಾನೆಲೆಗಳನ್ನು ಇದುವರೆಗೂ ಉಚ್ಚಾಟಿಸಲು ಸಾಧ್ಯವಾಗಿಲ್ಲ ಮತ್ತು ನೇಟೋದಲ್ಲಿರುವ ಟರ್ಕಿ ಯಾರಿಂದ ಏನು ಕೊಳ್ಳಬೇಕೆಂಬ ಸ್ವಾತಂತ್ರ್ಯವನ್ನು ಕಳೆದುಕೊಂಡು ವಿಲವಿಲನೆ ಒದ್ದಾಡುತ್ತಿದೆ.

✶ ✶ ✶

ಶ್ರೀ. ಜಗದೀಶ್ ಹುದ್ದಾರ್ ಎಂಬುವರು 'ಹೊಸತು'ಗೆ ಜುಲೈ ೧೫ರಂದು ಪತ್ರವೊಂದನ್ನು ಬರೆದು ಪತ್ರಿಕೆಯು 'ಸತ್ವಹೀನ'ವೆನಿಸಿತೆಂದು ತಿಳಿಸಿದ್ದಾರೆ, ಪತ್ರಿಕೆಯ ಎಲ್ಲ ಬರಹಗಾರರೂ 'ಪ್ರಜಾಪ್ರಭುತ್ವದ ವಿರೋಧಿಗಳು' ಎಂದು ಅಪ್ಪಣೆ ಕೊಡಿಸಿದ್ದಾರೆ. ಜೊತೆಗೆ "ಮೋದಿಯವರ ಕಾರ್ಯತಂತ್ರಗಳನ್ನು ವಿರೋಧಿಸಿ ಕಾಂಗ್ರೆಸ್ ಪಕ್ಷದ ನಿಲುವುಗಳನ್ನೇ" ಎತ್ತಿ ತೋರಿಸುತ್ತದೆಯೆಂಬ ಆಪಾದನೆಯನ್ನು 'ಹೊಸತು' ಪತ್ರಿಕೆಯ ಮೇಲೆ

ಹೊರಿಸಿದ್ದಾರೆ. ಈ ಪೀಠಿಕೆಯ ನಂತರದ ಅವರ ಮಾತುಗಳಿವು: "...ಒಂದು ಪಕ್ಷ ಸ್ವತಂತ್ರವಾಗಿ ೩೦೦ಕ್ಕೂ ಹೆಚ್ಚು ಸಂಸದರನ್ನು ಪಡೆದಿದೆ ಎಂದಾದರೆ, ಸಾಂವಿಧಾನಿಕವಾಗಿ ಆ ಪಕ್ಷ ಆಡಳಿತ ಮಾಡಬೇಕೆಂಬುದು ಜನಾದೇಶ, ಅದನ್ನು ಧಿಕ್ಕರಿಸಲು ನೀವಾಗಲೀ ನಾನಾಗಲೀ ಅನರ್ಹರು. ...ಮೋದಿಯವರ ಕಾರ್ಯಕ್ರಮಗಳು ಜನಪರವಾಗಿವೆ ಎಂತಲೇ ಅರ್ಥ." ಕಡೆಗೆ ಒಂದು ತೀರ್ಮಾನ ಪ್ರಕಟಿಸಿದ್ದಾರೆ : "ಜನಾದೇಶವನ್ನು ಪ್ರಶ್ನಿಸುವ, ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಧಿಕ್ಕರಿಸುವ ವ್ಯಕ್ತಿಗಳಾರೂ ಈ ದೇಶದಲ್ಲಿ ಇರಲು ಅನರ್ಹರು" ಇತ್ಯಾದಿ. ಇದಕ್ಕೆ ಪ್ರತಿಯಾಗಿ ಒಂದು ಮಾತು: ಆಡಳಿತವನ್ನು ಸ್ವೇಚ್ಛಾಚಾರದ ಮಟ್ಟಕ್ಕಿಳಿಸುವುದು 'ಜನಾದೇಶ'ದ ಆಶಯವಲ್ಲ ಎಂಬುದನ್ನು ಸಾಮಾನ್ಯವಾಗಿ ಎಲ್ಲರೂ ಒಪ್ಪುತ್ತಾರೆ. ಹಾಗೆ ಒಪ್ಪುವವರು ಈ ದೇಶದಲ್ಲೇ ಉಳಿಯುವ ಹಕ್ಕು ಹೊಂದಿದ್ದಾರೆ.

'ಹೊಸತು' ಪ್ರಜಾಪ್ರಭುತ್ವವಾದಿಯಾದ್ದರಿಂದಲೇ ಅದು ಎಲ್ಲ ನೀತಿಗಳ ಪರಾಮರ್ಶೆ ಮಾಡುತ್ತದೆ, ಅಂಗೀಕರಿಸುತ್ತದೆ ಇಲ್ಲವೇ ಜನಪರ ದೃಷ್ಟಿಯಿಂದ ಟೀಕಿಸುತ್ತದೆ ಮತ್ತು ಆಗಾಗ್ಗೆ ಪರ್ಯಾಯ ನೀತಿಗಳನ್ನು ಮುಂದಿಡುತ್ತದೆ. ಮುನ್ನೂರು ಸಂಸದರನ್ನು ಹೊಂದಿರಲಿ ಅಥವಾ ಇನ್ನೂ ಹೆಚ್ಚು ಪಡೆಯಲಿ, ಅದು ಎಲ್ಲ ಜನರ ಆದೇಶವಾಗುವುದಿಲ್ಲ. ನಮ್ಮ ಚುನಾವಣೆಯ ಪದ್ಧತಿ ಅಂಥದು. ಇಡೀ ದೇಶದಲ್ಲಿ ಆಯಾ ಪಕ್ಷಗಳು ಪಡೆಯುವ ಒಟ್ಟು ಮತಗಳನ್ನಾಧರಿಸಿ ಆ ಪ್ರಮಾಣದಲ್ಲಿ ಸ್ಥಾನಗಳು ಹಂಚಿಕೆಯಾಗಬೇಕಾದ್ದು ಪ್ರಜಾಪ್ರಭುತ್ವದ ಆದ್ಯ ಲಕ್ಷಣ. ಇಂತಹ ಪದ್ಧತಿ ಹಲವು ದೇಶಗಳಲ್ಲಿ ಜಾರಿಯಲ್ಲಿದೆ. ಮಾನ್ಯ ಹುದ್ದಾರ್ ಅವರು ಈ ಪದ್ಧತಿಯ ಜಾರಿಗಾಗಿ ಆಗ್ರಹಿಸುವುದು, ಆರೋಗ್ಯಕರ. 'ಹೊಸತು' ಆರಂಭದಿಂದಲೂ ಆ ಪದ್ಧತಿಯ ಪರವಾಗಿ ದನಿಯೆತ್ತುತ್ತಾ ಬಂದಿದೆ. ಒಂದು ನಿರ್ದಿಷ್ಟ ನೀತಿಯ ಪರಾಮರ್ಶೆಯು ವ್ಯಕ್ತಿಯ ಅಥವಾ ಪಕ್ಷದ ಮಾಪನವಲ್ಲ; ಅದು ಜನತೆಯ ಪರವಾದ ಸೈದ್ಧಾಂತಿಕ ನಿಲುವಾಗುತ್ತದೆ. ಈಗ ಆರು ವರ್ಷಗಳ ಹಿಂದೆ ಮನಮೋಹನ ಸಿಂಗ್ ಪ್ರಧಾನಿಯಾಗಿದ್ದಾಗಲೂ 'ಹೊಸತು' ಸೈದ್ಧಾಂತಿಕ ಪ್ರಶ್ನೆಗಳನ್ನು ಎತ್ತಿಕೊಂಡು ಚರ್ಚಿಸಿದೆ, ಟೀಕೆಗೆ ಒಳಪಡಿಸಿದೆ. 'ಹೊಸತು' ಲೇಖಕರ ಅಭಿಪ್ರಾಯಗಳು ಸಹ ಪ್ರಾತಿನಿಧಿಕವಾದುವೇ. ಅವರನ್ನೆಲ್ಲಾ 'ಪ್ರಜಾಪ್ರಭುತ್ವ ವಿರೋಧಿಗಳು' ಎಂದು ದೂಷಿಸುವುದು ಸರ್ವಥಾ ಆಕ್ಷೇಪಾರ್ಹವಾಗಿದೆ. ಪ್ರಜಾಪ್ರಭುತ್ವದಲ್ಲಿ ಏಕವಾಣಿ, ಏಕನಾಯಕ ಮತ್ತು ಏಕದೃಷ್ಟಿ ಇರಕೂಡದು. ಹಾಗಿದ್ದರೆ ಪ್ರಭುತ್ವವು ಪ್ರಜೆಗಳದಾಗಿರುವುದಿಲ್ಲ. ಮೋದಿಯವರಿಗೆ ಮತ ಚಲಾಯಿಸದ ಶೇ. ೪೯ ಮಂದಿ ನಮ್ಮ ದೇಶದಲ್ಲಿದ್ದಾರೆ, ಅವರ ಆಕಾಂಕ್ಷೆ ಮತ್ತು ಅಭಿವೃದ್ಧಿಯ ಹಾದಿಯನ್ನು ಕೂಡ ಗಣನೆಗೆ ತೆಗೆದುಕೊಳ್ಳುವುದು ಪ್ರಜಾಪ್ರಭುತ್ವದ ಮಾರ್ಗವೇ ಆಗಿದೆ. ಬಹುತ್ವವನ್ನು ನಿರೋಧಿಸಿ 'ಏಕ'ವನ್ನು ಹೇರುವ ಹವಣಿಕೆಯು ಪ್ರಜಾಪ್ರಭುತ್ವದಲ್ಲಿ ಅಕ್ರಮವಾಗುತ್ತದೆ. ವಿದೇಶಾಂಗ ನೀತಿ, ಆರ್ಥಿಕ ನೀತಿ, ಸಾಂಸ್ಕೃತಿಕ ಲೋಕದ ಸನ್ನಿವೇಶ ಮುಂತಾದುವನ್ನು ಚರ್ಚಿಸುವಾಗ ಸಹಜವಾಗಿಯೇ ಭಿನ್ನದೃಷ್ಟಿಗಳು ಇರುತ್ತವೆ. ಅವನ್ನು ಹೊಸಕಿಹಾಕುವುದು ದಿನಂಪ್ರತಿ ಜರುಗುತ್ತಿರುವ ವಿವಿಧ ರೂಪಗಳ ಗೂಂಡಾಗಿರಿಗೆ ಮಾನ್ಯತೆ ನೀಡಿದಂತಾಗುತ್ತದೆ. ಮಾನ್ಯ ಶ್ರೀ ಹುದ್ದಾರ್ ಮತ್ತು 'ಹೊಸತು' ಓದುಗರು ಅದನ್ನು ವಿವೇಚಿಸಬೇಕೆಂಬುದು ನಮ್ಮ ಆಶಯ.

# ಜನಪರ ಪತ್ರಕರ್ತ ಶಮೀಮ್ ಫೈಜಿ



ದೇಶದ ಎಡಪಂಥೀಯ ಚಿಂತನೆಯಲ್ಲಿ ಪ್ರಖರ ಬರವಣಿಗೆ, ಬದ್ಧತೆಯ ಬದುಕಿಗೆ ಹೆಸರಾಗಿದ್ದ ಪತ್ರಕರ್ತ ಶಮೀಮ್ ಫೈಜಿ ಕಳೆದ ತಿಂಗಳು (ಜುಲೈ ೫)ರಂದು ನಿಧನರಾಗಿದ್ದಾರೆ. ಕ್ಯಾನ್ಸರ್‌ನಿಂದ ಬಳಲುತ್ತಿದ್ದ ಫೈಜಿ, ಅನಾರೋಗ್ಯದ ನಡುವೆಯೂ ತಮ್ಮ ಬದುಕಿನ ಕೊನೆಯ ದಿನಗಳವರೆಗೆ ಕ್ರಿಯಾಶೀಲರಾಗಿದ್ದರು.

ಶಮೀಮ್ ೧೯೪೬ ಮಾರ್ಚ್ ೩ರಂದು ಮಹಾರಾಷ್ಟ್ರದ ನಾಗಪೂರ ಜಿಲ್ಲೆಯ ಕಮ್ಟೀಯಲ್ಲಿ ಜನಿಸಿದರು. ಮುಂದೆ ಶಿಕ್ಷಣಕ್ಕಾಗಿ ನಾಗಪೂರಕ್ಕೆ ಬಂದು ಪತ್ರಿಕೋದ್ಯಮ ಪದವಿಧರರಾದರು. ಉರ್ದು, ಹಿಂದಿ, ಇಂಗ್ಲಿಷ್ ಭಾಷೆಗಳಲ್ಲಿ ಪಾಂಡಿತ್ಯ ಹೊಂದಿದ್ದರು. ೧೯೬೫ರಲ್ಲಿ 'ಹಿತ್ವಾದಾ' ಎಂಬ ಇಂಗ್ಲಿಷ್ ದಿನಪತ್ರಿಕೆಯ ಉಪಸಂಪಾದಕರಾಗಿ ವೃತ್ತಿಜೀವನ ಆರಂಭಿಸಿದರು. ಅದೇ ಸಂದರ್ಭದಲ್ಲಿ ಮಾರ್ಕ್ಸ್‌ವಾದ – ಲೆನಿನ್‌ವಾದಗಳಿಂದ ಪ್ರಭಾವಿತರಾಗಿ ಶಮೀಮ್ ಭಾರತ ಕಮ್ಯುನಿಸ್ಟ್ ಪಕ್ಷದ ಸದಸ್ಯರಾಗಿ, ನಾಯಕರಾಗಿ ಬೆಳೆದರು. ಪತ್ರಿಕೋದ್ಯಮದಲ್ಲಿ ಅಪಾರ ಪಾಂಡಿತ್ಯ ಹೊಂದಿದ್ದ ಇವರು ೧೯೭೯ರಲ್ಲಿ ಸಿಪಿಐನ ಉರ್ದು ಪತ್ರಿಕೆ 'ಹಯಾತ್'ನ ಸಂಪಾದಕರಾದರು. ಹಿರಿಯ ನಾಯಕರಾದ ಚಂದ್ರಾ ರಾಜೇಶ್ವರರಾವ್, ಎ. ಬಿ. ಬರ್ಧನ್ ಅವರ ಒತ್ತಾಸೆಯಂತೆ ದೆಹಲಿಗೆ ಹೋಗಿ ನೆಲೆಸಿದರು. ೧೯೯೬ರಲ್ಲಿ 'ನ್ಯೂ ಏಜ್' ಇಂಗ್ಲಿಷ್ ವಾರಪತ್ರಿಕೆಯ ಜವಾಬ್ದಾರಿ ಹೊತ್ತು ಬದುಕಿನ ಕೊನೆಯುಸಿರಿನವರೆಗೂ ಅದರ ಸಂಪಾದಕರಾಗಿ ಕಾರ್ಯನಿರ್ವಹಿಸಿದರು. 'ಉಮಂಗ್' ಎಂಬ ಉರ್ದು ಪತ್ರಿಕೆ, ಸಿಎನ್‌ಎಸ್, ಡೇಲಿ ಪೆಟ್ರಿಯಾಟ್ ಹೀಗೆ ಹಲವಾರು ಪತ್ರಿಕೆ, ಮಾಧ್ಯಮ ಸಂಸ್ಥೆಗಳಿಗೂ ಕೆಲಸ ಮಾಡಿದರು.

ಎಡ ಚಿಂತನೆಯ ಪ್ರಕಾಶನ ಸಂಸ್ಥೆಯಾದ ಪ್ರಖ್ಯಾತ ಪಿಪಿಎಚ್ (ಪೀಪಲ್ಸ್ ಪಬ್ಲಿಷಿಂಗ್ ಹೌಸ್) ವ್ಯವಸ್ಥಾಪಕ ನಿರ್ದೇಶಕರಾಗಿ ಕೆಲಸ ಮಾಡಿದರು. ಇಂಡಿಯನ್ ಪೀಪಲ್ಸ್ ಥೇಟರ್ ಅಸೋಸಿಯೇಶನ್ (ಇಪ್ಟಾ), ಪಿಡಬ್ಲ್ಯೂಎ (ಪ್ರಗತಿಶೀಲ ಬರಹಗಾರರ ಸಂಘ)ದಲ್ಲಿ ನಾಯಕರಾಗಿ, ಮಾರ್ಗದರ್ಶಕರಾಗಿ ಅವುಗಳ ರಾಷ್ಟ್ರೀಯ ಮಂಡಳಿಗಳಲ್ಲಿ ಕೆಲಸ ಮಾಡಿದರು. ಜನಪರ ಸಾಹಿತ್ಯಕ, ಸಾಂಸ್ಕೃತಿಕ ಚಳುವಳಿಗಳಿಗೆ ಬೌದ್ಧಿಕಶಕ್ತಿಯಾಗಿ ಕೆಲಸ ಮಾಡಿದ ಶಮೀಮ್ ಸ್ನೇಹಜೀವಿ, ಕಡಿಮೆ ಮಾತಿನ ಸರಳ ಬದುಕಿನ ಇವರು ಮನಸು ಮಾಡಿದ್ದರೆ ದೇಶದ, ಬಹುರಾಷ್ಟ್ರೀಯ ಕಂಪನಿಗಳ ದೊಡ್ಡ ಪತ್ರಿಕೆಗಳಲ್ಲಿ ಉನ್ನತಹಂತದ ವ್ಯಕ್ತಿಯಾಗಿ ಕೆಲಸ ಮಾಡಬಹುದಿತ್ತು. ಅಂಥ ಅವಕಾಶಗಳನ್ನು ನಿರಾಕರಿಸಿ ಯೌವನದಲ್ಲಿಯೇ ಮಾರ್ಕ್ಸ್‌ವಾದಿ ಸಿದ್ಧಾಂತಕ್ಕೆ ಮಾರುಹೋಗಿ ತಮ್ಮ ಇಡೀ ಬದುಕನ್ನೇ ಎಡಪಂಥೀಯ ಚಿಂತನೆ, ಚಟುವಟಿಕೆಗೆ ಅರ್ಪಿಸಿದರು.

ನವಕರ್ನಾಟಕ ಪ್ರಕಾಶನದ ಸಹ ಪ್ರಕಾಶನ ಸಂಸ್ಥೆಯಾದ ಪೀಪಲ್ಸ್ ಪಬ್ಲಿಷಿಂಗ್ ಹೌಸ್‌ನ ಜವಾಬ್ದಾರಿ ಹೊತ್ತಿದ್ದ ಫೈಜ್ ನವಕರ್ನಾಟಕ ಸಂಸ್ಥೆಗೂ ಹಲವಾರು ಸಂದರ್ಭದಲ್ಲಿ ಮಾರ್ಗದರ್ಶನ ಮಾಡಿದ್ದಾರೆ. ಬದುಕಿನುದ್ದಕ್ಕೂ ಕನಿಷ್ಠ ಸೌಲಭ್ಯಗಳೊಂದಿಗೆ ಬದ್ಧತೆಯ ಜೀವನ ಸಾಗಿಸಿದ ಶಮೀಮ್ ಫೈಜಿ ತಮ್ಮ ೭೩ನೇ ವಯಸ್ಸಿನಲ್ಲಿ ನಿಧನರಾಗಿದ್ದಾರೆ. ನ್ಯೂ ಏಜ್ ಪತ್ರಿಕೆಯಲ್ಲಿಯೇ ಕೆಲಸ ಮಾಡುತ್ತಿರುವ ಅವರ ಪತ್ನಿ ನಜಮಾ ಮತ್ತು ಮಕ್ಕಳನ್ನು ಹಾಗೂ ಸಾವಿರಾರು ಸಂಗಾತಿಗಳನ್ನು ಅಗಲಿದ್ದಾರೆ.

ಭಾರತದ ಇಂದಿನ ಫ್ಯಾಸಿಸ್ಟ್ ರಾಜಕೀಯ, ಸಾಮಾಜಿಕ ಸಂದರ್ಭದಲ್ಲಿ ಶಮೀಮ್ ಫೈಜಿ ಅಂತಹ ಚಿಂತಕ, ಪತ್ರಕರ್ತನ ಸಾವು ಆಘಾತ ತಂದಿದೆ. ಜನಪರ ಮೌಲ್ಯಕ್ಕಾಗಿ ತನ್ನ ಬದುಕನ್ನೇ ಸವೆಸಿದ ಅವರಿಗೆ 'ನವಕರ್ನಾಟಕ' ಮತ್ತು 'ಹೊಸತು' ಬಳಗ ನಮನಗಳನ್ನು ಸಲ್ಲಿಸುತ್ತದೆ.

**– ಸಂಪಾದಕ**




### ರಾಮನ ನಾಮ

ದೇಶದ ನೀಲಾಕಾಶವು ದೇಶದಲ್ಲಿ ಹೆಚ್ಚುತ್ತಿರುವ ಗುಂಪು ಥಳಿತ, ಭ್ರಷ್ಟಾಚಾರ, ಧಾರ್ಮಿಕ ಅಜೆಂಡ, ಅತ್ಯಾಚಾರ ಮುಂತಾದವುಗಳ ಹೊಗೆಗಳಿಂದ ಕಪ್ಪು ಕಾರ್ಮೋಡವಾಗಿ ಬಾನಲ್ಲಿ ಸುತ್ತಿಕೊಳ್ಳುತ್ತಿದೆ.

ದುಷ್ಕೃತ್ಯಗಳಲ್ಲಿ ದುಷ್ಕರ್ಮಿಗಳು ದೇವರ ಹೆಸರನ್ನು ಬಳಸುತ್ತಾ ದೇವನನ್ನು ಅವಮಾನಿಸುತ್ತಿದ್ದಾರೆ. ದೇಶದಲ್ಲಿ ಅಂತ್ಯಕಾಣದ ಹಿಂಸಾಚಾರಗಳು ವಿಶ್ವದಲ್ಲಿನ ಉಗ್ರವಾದಿಗಳಿಗೆ ಸಮಾನವಾಗಿ ಅಂತ್ಯವಿಲ್ಲದಂತಾಗಿದೆ. ದೇಶದಲ್ಲಿ ಡಜನ್‌ಗಟ್ಟಲೆ ವ್ಯಕ್ತಿ ಹತ್ಯೆಗಳು ನಡೆದರೂ ನಮಗೆ ಅದರ ಬಗ್ಗೆ ಚಿಂತೆಯೇ ಇಲ್ಲದಂತೆ ನಡೆಯುತ್ತಿದ್ದ ದೇಶದ ಪ್ರಧಾನಿ ಕೊನೆಗೊಮ್ಮೆ ತುಟಿ ಬಿಚ್ಚಿದ್ದಾರೆ. ಜಾರ್ಖಂಡ್‌ನಲ್ಲಿನ ಮುಸ್ಲಿಂ ಸಮುದಾಯದ ವ್ಯಕ್ತಿಯು ಗುಂಪು ಥಳಿತದಿಂದ ಸಾವಿಗೀಡಾದಾಗ ಮೋದಿ ತಮ್ಮ ನೋವನ್ನು ದೇಶದ ಮುಂದೆ ತೋಡಿಕೊಂಡಿದ್ದಾರೆ.

ಭಾರೀ ಆಘಾತವನ್ನುಂಟುಮಾಡುವ ವಿಷಯ ವೇನೆಂದರೆ ಇಂತಹ ಕೃತ್ಯಗಳು ದೇವರ ಹೆಸರಲ್ಲಿ ನಡೆಯುವುದು. ಬೆಳ್ಳಂಬೆಳಗ್ಗೆ ಚಳಿಯೊಂದಿಗೆದ್ದು ದೇವರನ್ನು ಪ್ರಾರ್ಥಿಸಲಿಕ್ಕೋಸ್ಕರ ಸ್ನಾನದ ಕೊಳವೆಯತ್ತ ಚಲಿಸುವ ಭಕ್ತನು ನೀರಿನೊಳಗೆ ಮುಳುಗಿ ಸ್ನಾನ ಮಾಡಲು ಚಳಿಯಿಂದ ಹೆದರುವಾಗ ಅವರು ಜೋರಾಗಿ ಶ್ರೀ ರಾಮನ ಹೆಸರನ್ನು ಜಪಿಸಿ ತನಗೆ ಆತ್ಮಸ್ಥೈರ್ಯವನ್ನು ತಂದುಕೊಳ್ಳುತ್ತಾರೆ. ಆದರೆ ಈಗ ಹಾಗಲ್ಲ, ಕಾಲಗಳುರುಳಿವೆ, ಜನರು ಅದೇ ದೇವರ (ರಾಮನ) ಹೆಸರನ್ನು ಯಾವುದೋ ಸಮುದಾಯಕ್ಕೊ, ಜಾತಿಗೊ, ದೇಶಕ್ಕೊ ಸೇರಿದ ಒಬ್ಬ ವ್ಯಕ್ತಿಯ ಮೇಲೆ ಆಕ್ರಮಿಸಲು ಉಪಯೋಗಿಸುವ ಮೂಲಕ ರಾಮನನ್ನು ಅವಮಾನಿಸುತ್ತಿದ್ದಾರೆ. ಅದಾಗಿದೆ ಇಂದು ದೇಶದ ಉದ್ದಗಲಕ್ಕೂ ನಡೆಯುತ್ತಿರುವ "ಮೋಬ್ ಲಿಂಚಿಂಗ್" ಗುಂಪು ಥಳಿತ.

ಈ ದೇಶದಲ್ಲಿ ಕಾನೂನಿನ ಆಡಳಿತ ಇದ್ದರೂ ಗ್ಯಾಂಗ್ ದರ್ಬಾರ್ ಖಾಯಂ ಆಗಿಬಿಟ್ಟಿದೆ. ದಿಲ್ಲಿ ರಸ್ತೆಬದಿಯಲ್ಲಿ ನಡೆದುಕೊಂಡು ಹೋಗುತ್ತಿದ್ದ ಮೋಯಿನ್ ಅಲಿ ಎಂಬವರಿಗೆ ಕಾರು ತಗುಲಿದಾಗ ಅಬ್ಬಾ ಏನು ಆಗಲಿಲ್ಲ ಅಲ್ಲಾಹನ ಕೃಪೆ ಎಂದು ಹೇಳಿದ್ದೇ ತಡ ಮೋಯಿನನ್ನು ಹಿಡಿದು ಥಳಿಸಿದರು, ಜೈ ಶ್ರೀ ರಾಮ್ ಎಂದು ಹೇಳಲು ಪ್ರೇರೇಪಿಸಿದರು. ರಾಜಸ್ಥಾನದಲ್ಲೂ ಇಂತಹ ಘಟನೆಗಳು ಕಂಡುಬಂದಿವೆ.

ಜಮ್‌ಶೇದ್‌ಪುರದಲ್ಲಿ ೨೪ ಹರೆಯದ ತಬ್ರೀಝ್ ಎಂಬಾತನನ್ನು ಜನರು ಕಳ್ಳತನದ ಆರೋಪದಲ್ಲಿ ಹಿಡಿಯುತ್ತಾರೆ. ಕಳ್ಳತನ ಮಾಡಿಲ್ಲವೆಂದು ಮನೆಯವರ ಹೇಳಿಕೆ. ಆದರೆ ಕೆಲವರ ರಣೋತ್ಸಾಹ ಹೇಗಿತ್ತೆಂದರೆ ಆತನನ್ನು ಮರಕ್ಕೆ ಕಟ್ಟಿ ಏಳು ಘಂಟೆಗಳ ಕಾಲ ಹೊಡೆಯುತ್ತಾರೆ, ಜೈ ಶ್ರೀ ರಾಮ ಎಂದು ಹೇಳಿಸುತ್ತಾರೆ, ಕೊನೆಗೆ ಆತ ಪ್ರಾಣ ಬಿಡುತ್ತಾನೆ.

ಸಂಘಪರಿವಾರದ ವೇಷದಲ್ಲಿರುವ ರೌಡಿಗಳು, ಗೂಂಡಾಗಳು ಅಮಾಯಕರನ್ನು ತಡೆದು ನಿಲ್ಲಿಸಿ ಜೈ ಶ್ರೀ ರಾಮ ಎಂದು ಘೋಷಣೆ ಕೂಗಲು ಒತ್ತಾಯಿಸುವ ಮೂಲಕ ಅವರು ಶ್ರೀ ರಾಮನನ್ನು ಅವಮಾನಿಸುತ್ತಿದ್ದಾರೆ. ರಾಮನ ಹೆಸರನ್ನು ಉಚ್ಚರಿಸಲು ಅರ್ಹರಲ್ಲದ ದುಷ್ಕರ್ಮಿಗಳು ಕತ್ತಿ ದೊಣ್ಣೆ ಹಿಡಿದು ಬೀದಿಗಳಲ್ಲಿ ಗುಂಪುಗಳಾಗಿ ನಡೆದಾಡುವಾಗ ರಾಮನಿಗೆ ಎಸಗುವ ಅಪಚಾರವಾಗಿದೆ. ಮಹಾತ್ಮ ಗಾಂಧಿಯವರು




ರಾಮನ ಪರಮ ಭಕ್ತ, ಅವರೆಂದೂ ಶ್ರೀ ರಾಮನಿಗೆ ದೇವಸ್ಥಾನವನ್ನು ಕಟ್ಟಲು ಬಯಸಿದವರಲ್ಲ. ಎಂದಿಗೂ ಸತ್ಯಕ್ಕಾಗಿ, ನ್ಯಾಯಕ್ಕಾಗಿ ರಾಮನ ಪರಮ ಭಕ್ತನಾಗಿದ್ದರು.

ರಾಜಕೀಯ ಕಾಯಿಲೆಗಳು ಲಸಿಕೆಯಿಂದ ಗುಣ ಆಗುವುದಿಲ್ಲ. ಜಮ್‌ಶೇದ್‌ಪುರ, ದಿಲ್ಲಿ, ರಾಜಸ್ಥಾನದಲ್ಲಿ ನಡೆದ ಘಟನೆಗಳು ನಾಗರಿಕತೆಯ ಕಲ್ಪನೆಗೆ ವಿಶ್ವಾಸಘಾತ ನೀಡುವಂತಹವು. ಇದು ಶ್ರೀ ರಾಮನಿಗೆ ಮಾಡುವ ವಿಶ್ವಾಸ ದ್ರೋಹ. ರಾಜಕೀಯ ಸಮಾಜ ಅವರಿಗೆ ಸಹಕಾರ ನೀಡುತ್ತದೆ – ಸರಕಾರ ಅವರನ್ನು ರಕ್ಷಣೆ ಮಾಡುತ್ತದೆ.

**ಕೊಡಗು** **ಅಕ್ಮಲುದ್ದೀನ್**

### ಮದುವೆ ಮತ್ತು ಸ್ವಾತಂತ್ರ್ಯ

ವ್ಯಕ್ತಿ ಸಮಾಜದ ಮೂಲ ಘಟಕ. ಆತನ/ಆಕೆಯ ಬದುಕಿನ ಹಲವಾರು ಮಹತ್ತರ ಘಟ್ಟಗಳಲ್ಲಿ ಮದುವೆಯೂ ಒಂದು. ಸಾಮಾಜೀಕರಣ, ಸಂತಾನಾಭಿವೃದ್ಧಿ ಅದರ ಮೂಲ ಉದ್ದೇಶ. ಗಂಡು–ಹೆಣ್ಣು ಇಬ್ಬರ ಬದುಕಿನಲ್ಲೂ ಮದುವೆಯ ಪಾತ್ರವಿದೆಯಾದರೂ ಅದರ ಸ್ವರೂಪ ತೀರ ಭಿನ್ನ. ಗಂಡಿಗೆ ತಾನು ತಲುಪಬೇಕಾದ ಗಮ್ಯದವರೆಗಿನ ಏರು ದಾರಿಯಲ್ಲಿ ಮದುವೆಯೂ ಒಂದು ಮೆಟ್ಟಿಲು. ಆದರೆ ಅದೇ ಮದುವೆ ಹೆಣ್ಣು ತಾನು ತಲುಪಲೇಬೇಕಾದ ಗಮ್ಯ! ಈ ಕಾರಣಕ್ಕೇ ಇರಬಹುದು, ಆದ್ಯತೆಯ ಪ್ರಶ್ನೆ ಎದುರಾದಾಗ ಹೆಣ್ಣಿನೆದುರು ಆಯ್ಕೆಗಳೇ ಇಲ್ಲ. ಇದ್ದರೂ ಆಕೆ 'ಮದುವೆ'ಯನ್ನು ಒಪ್ಪಿಕೊಂಡೇ ಮತ್ತೊಂದರತ್ತ ನೋಟಹರಿಸಬೇಕು. ಮೊನ್ನೆ ಹೀಗಾಯ್ತು.

ಶಾಲಾ ದಿನಗಳ ಆಪ್ತ ಗೆಳತಿಯ ಮಗಳ ಮದುವೆ. ಸಹಪಾಠಿಗಳೆಲ್ಲ ಸಿಗುವರೆಂಬ ಖುಷಿಯಲ್ಲಿ ತೆರಳಿದ್ದೆ. ಸಿಂಗಾರಗೊಂಡ ಮನದೆ, ಚಪ್ಪರ, ದೀಪಾಲಂಕಾರ, ನಗು–ಮಾತುಗಳಿಂದ ಗಿಜಿಗುಡುತ್ತಿದ್ದ ವಾತಾವರಣ ಮನಸ್ಸಿಗೆ ಮುದ ನೀಡುವಂತಿತ್ತು. ಪ್ರಯಾಣದ ಆಯಾಸ ನೀಗಿಸಿಕೊಂಡು ಸಂಜೆ 'ವಧು'ವನ್ನು ಭೇಟಿ ಮಾಡಿದೆ. ಕೈತುಂಬ ಮದರಂಗಿ ಬಿಡಿಸಿಕೊಂಡವಳು ಗೆಳತಿಯರನ್ನು ದಿಟ್ಟಿಸುತ್ತ ಅನ್ಯಮನಸ್ಕಳಾಗಿ ಕುಳಿತಿದ್ದಳು. ಗೆಳತಿಯರದು ಯಾವ ಶಾಸ್ತ್ರಕ್ಕೆ ಯಾವ ಒಡವೆ, ಎಂಥ ಅಲಂಕಾರ ಮಾಡುವುದು ಎಂಬೆಲ್ಲ ಚರ್ಚೆ. ನನ್ನ ಕಂಡೊಡನೆ ಮುಖ ಅರಳಿಸಿದವಳನ್ನು ಮೃದುವಾಗಿ ಮಾತಿಗೆಳೆದು ಅವಳ ಮ್ಲಾನತೆಗೆ ಕಾರಣ ವೇನೆಂದು ಕೇಳಿದೆ. ಆಕೆ ಕೊಟ್ಟ ವಿವರಣೆಯಿಂದ ಮನಸ್ಸು ಕಲಕಿತು. ಏಪ್ರಿಲ್ ತಿಂಗಳಲ್ಲಿ ಆಕೆ ವಿಜ್ಞಾನ ಪದವಿ ಹಂತದ ಕೊನೆಯ ಪರೀಕ್ಷೆ ಬರೆಯಬೇಕಿತ್ತು. ಹಾಗಂತ ಭಾವಿಸಿಯೇ ಮೇ ತಿಂಗಳಲ್ಲಿ ಆಕೆಯ ಮದುವೆ ದಿನ ಗೊತ್ತುಪಡಿಸಿದ್ದರು. ಚುನಾವಣೆ ಕಾರಣದಿಂದ ಮೇ ತಿಂಗಳಿಗೆ ದೂಡಲ್ಪಟ್ಟಿದ್ದುವು ಪರೀಕ್ಷೆಗಳು. ಮದುವೆಯ ಹಿಂದಿನ ಎರಡು ದಿನ, ಮಾರನೇ ದಿನವೂ ಪರೀಕ್ಷೆಗಳಿದ್ದುವು. ಆಮಂತ್ರಣ ಪತ್ರಿಕೆ ಛಾಪಿಸಿ, ಮದುವೆ ಛತ್ರ ಎಲ್ಲ ಗೊತ್ತುಪಡಿಸಿಯಾಗಿತ್ತು. ಪರೀಕ್ಷೆ ಬರೆಯಲು ಅನುಕೂಲ ಆಗುವಂತೆ ಮದುವೆ ದಿನಾಂಕ ಬದಲಾಯಿಸಲು ಎರಡು ಕಡೆಯ ಹಿರಿಯರೂ ಒಪ್ಪಲಿಲ್ಲ. ಅಷ್ಟೇ ಅಲ್ಲ ತಮ್ಮ ಸೊಸೆ 'ಮನೆವಾರ್ತೆ ನೋಡಿಕೊಂಡರೆ ಸಾಕು' ಎಂದರು ಅತ್ತಕಡೆಯ ಹಿರಿಯರು. ಸರಕಾರಿ ನೌಕರಿಯಲ್ಲಿದ್ದ ವಿದ್ಯಾವಂತ ವರನೂ ಸಹ 'ಹೋಗಲಿ ಬಿಡು, ಮುಂದೆ ನೋಡಿದರಾಯ್ತು' ಅಂತ ಭಾವೀ ಪತ್ನಿಯನ್ನು ಸಂತೈಸಿದ್ದ! ಮೂರು ವರ್ಷಗಳವರೆಗೆ ಹಾಸ್ಟೆಲಿನಲ್ಲಿದ್ದು ಮಾಡಿದ್ದ ಪ್ರಯತ್ನವೆಲ್ಲ ಹೊಳೆಯಲ್ಲಿ ಹುಣಸೆ ತೊಳೆದಂತಾಗಿತ್ತು. ಈಗ ಆಕೆಯೆದುರು ಆಯ್ಕೆಗಳಿರಲಿಲ್ಲ. ತನ್ನ ದಾರಿಯಲ್ಲಿ ಬಂದುದನ್ನು ಒಪ್ಪಿಕೊಳ್ಳದೇ ಅನ್ಯ ಮಾರ್ಗವೂ ಇರಲಿಲ್ಲ.

ಮನಸ್ಸು ಮೂವತ್ತು ವರ್ಷಗಳ ಹಿಂದೆ ಜಾರಿತು. ಪಿಯುಸಿ ನಂತರ ನಿಶ್ಚಿತಾರ್ಥವಾಗಿದ್ದ ನಾನು ಪದವಿವರೆಗೆ ನನಗೆ ಕಲಿಯುವ ಅವಕಾಶ ಕೊಡಬೇಕೆಂಬ ಬೇಡಿಕೆಯಿರಿಸಿದ್ದೆ. ಆ ರೀತಿಯೇ ಆಯಿತು. ಪದವಿ ಅಂತಿಮ ವರ್ಷದ ಪರೀಕ್ಷೆಗಳಿನ್ನೂ ಬಾಕಿ ಇರುವಾಗಲೇ ಮದುವೆ ತಯಾರಿ ಶುರುವಾದವು. ತಾತ (ತಂದೆಯ ತಂದೆ) ಮದುವೆಗೆ ಮೇ ತಿಂಗಳಲ್ಲಿ ದಿನವೊಂದನ್ನು ಗೊತ್ತುಪಡಿಸಿದರು. ಅಂತಿಮ ಹಂತದ ಪರೀಕ್ಷೆ, ಜೊತೆಗೆ ಮದುವೆ ತಯಾರಿ ಒಟ್ಟೊಟ್ಟಿಗೆ

ಎರಡರ ಭಾರವನ್ನೂ ಹೊರಬೇಕಲ್ಲಾ ಎಂಬ ಆತಂಕ ಕಾಡಿದರೂ ಧೈರ್ಯವಿತ್ತು. ತಾತನಿಗೆ ಅದೇನೆನಿಸಿತೊ ಮದುವೆ ಮೇನಲ್ಲಿ ಬೇಡ ಫೆಬ್ರವರಿಯಲ್ಲಿ ಮಾಡೋಣ ಅಂತ ಶುರುವಿಟ್ಟುಕೊಂಡರು. 'ಮದುವೆ ನಮ್ಮ ಕಡೆಗಿದೆ. ಬೇಸಗೆಯಲ್ಲಿ ನೀರಿಗೆ ಬರ, ಬಿಸಿಲ ಝಳ, ತೊಂದರೆ ಯಾಗುವುದು' ಎಂಬುದು ಅದರ ಸ್ಪಷ್ಟೀಕರಣವಾಗಿತ್ತು. ಅಜ್ಜನ ಹಟವೇ ಗೆದ್ದು ಹಾಗೇ ಮಾಡುವುದೆಂದು ತೀರ್ಮಾನವಾಯ್ತು. ಅಪ್ಪ-ಅವ್ವ-ಚಿಕ್ಕಪ್ಪಂದಿರೆಲ್ಲ ಜವಾಬ್ದಾರಿ ಹಂಚಿಕೊಂಡರು. ಆದರೆ ಪ್ರತಿಯೊಬ್ಬರೊಂದಿಗೂ ಎಲ್ಲಾ ಕಡೆ ನಾ ಹೋಗಲೇಬೇಕಿತ್ತು. ತರಗತಿಗಳು ತಪ್ಪಿದವು. ಓದು ವ್ಯತ್ಯಯಗೊಂಡಿತು. ಮದುವೆ ನಡೆದು ಹೊಸದಾಗಿ ಹೋಗಿಬರುವ ಶಾಸ್ತ್ರಗಳೆಲ್ಲ ಮುಗಿದ ಮೇಲೆ ಮತ್ತೆ ಪುಸ್ತಕ ಕೈಗೆತ್ತಿಕೊಂಡಾಯ್ತು. ಪರೀಕ್ಷೆ ಬರೆದು ಫಲಿತಾಂಶ ಬಂದಾಗ ನಿರಾಶಾದಾಯಕ ಎನಿಸುವಷ್ಟು ಕಡಿಮೆ ಅಂಕಗಳು ಬಂದಿದ್ದವು. 'ಈ ಸಲ ನಮ್ಮ ವಿಭಾಗಕ್ಕೆ ಒಂದು ರ್‍ಯಾಂಕ್ ಬರುವುದು ನಿಶ್ಚಿತ' ಎಂದು ನನ್ನ ಮೇಲೆ ನಿರೀಕ್ಷೆಯಿರಿಸಿಕೊಂಡಿದ್ದ ನನ್ನ ಅಧ್ಯಾಪಕರು ನನಗಿಂತ ಹೆಚ್ಚು ಬೇಸರಪಟ್ಟುಕೊಂಡರು.

ಮೂರು ದಶಕಗಳಲ್ಲಿ ಜಗತ್ತು ಎಷ್ಟೆಲ್ಲ ಬದಲಾವಣೆ ಕಂಡಿದೆ. ಆದರೆ 'ಮದುವೆ' ಮತ್ತು 'ಶಿಕ್ಷಣ' ಇವೆರಡರಲ್ಲಿ ಮದುವೆಯನ್ನೇ ಆಯ್ಕೆ ಮಾಡಿಕೊಳ್ಳಬೇಕಾದ ಅನಿವಾರ್ಯತೆ ಹೆಣ್ಣಿಗೆ ಈಗಲೂ ಬದಲಾಗದೇ ಹಾಗೇ ಉಳಿದಿದೆಯಲ್ಲ! ಎಸ್ಸೆಸ್ಸೆಲ್ಸಿ, ಪಿಯುಸಿಯಲ್ಲಿ ಹುಡುಗರಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಪ್ರತಿಭೆ ತೋರುವ ವಿದ್ಯಾರ್ಥಿನಿಯರು ನಂತರದ ದಿನಗಳಲ್ಲಿ ತರಗತಿಗಳಿಂದ ಕಣ್ಮರೆಯಾಗುವುದೇಕೆಂಬ ಪ್ರಶ್ನೆ ಫಲಿತಾಂಶಗಳು ಬಂದಾಗಲೊಮ್ಮೆ ಚರ್ಚೆಯ ಮುನ್ನೆಲೆಗೆ ಬರುತ್ತದೆ. ಇದಕ್ಕೆ ಪರಿಹಾರವೇನು? ಮನಸ್ಥಿತಿಗಳು ಬದಲಾಗದೇ ಸಾಮಾಜಿಕ, ಆರ್ಥಿಕ ಎಂಥ ಬದಲಾವಣೆಗಳೂ ಅಸಾಧ್ಯ. ಜನಸಂಖ್ಯೆಯ ಅರ್ಧದಷ್ಟಿರುವ ಹೆಣ್ಣಿಗೂ ಸಹ ಆಯ್ಕೆಯ ಸ್ವಾತಂತ್ರ್ಯವಿದೆ, ಅದು ಅವಳ ಹಕ್ಕು ಎಂಬುದನ್ನು ಸಮಾಜ ಅರಿಯಬೇಕಿದೆ. ನೌಕರಿ, ಉದ್ಯೋಗ ಮಾಡುವವರಿಗೆ ಮಾತ್ರ ಶಿಕ್ಷಣ ಎಂಬ ಸಿದ್ಧಾಂತವೂ ಬದಲಾಗಬೇಕಿದೆ.

ಗಂಡಿನ ಬಾಳಿನಲ್ಲಿ ಸೂಸಿ ಬಂದು ತಂಗಾಳಿಯಾಗುವ ಮದುವೆ ಹೆಣ್ಣಿಗೆ ಕಾಲ್ತೊಡರು, ಕುತ್ತಿಗೆಯ ಉರುಳಾಗುವ ದಿನಗಳು ದೂರವಾಗಲಿ.

***ಬನಹಟ್ಟಿ*** ***ಚಂದ್ರಪ್ರಭಾ ಬಿ.***

# ವ್ಯಂಗ್ಯ ಚಿತ್ರಕಾರ ವಿ. ಗೋಪಾಲ್

೭೨ ವರ್ಷದ ಹಿರಿಯ ವ್ಯಂಗ್ಯ ಚಿತ್ರಕಾರ ವಿ. ಗೋಪಾಲ್ ಜುಲೈ ೪ರಂದು ಹೃದಯಾಘಾತದಿಂದ ನಮ್ಮನ್ನಗಲಿದರು. ಮೃತರು ಪತ್ನಿ, ಮೂವರು ಮಕ್ಕಳು ಸೇರಿದಂತೆ ಅಪಾರ ಅಭಿಮಾನಿಗಳನ್ನು ಅಗಲಿದ್ದಾರೆ. ಇವರು ಮೂಲತಃ ಕೋಲಾರ ಜಿಲ್ಲೆಯ ಮಾಲೂರಿನವರು. ಗೋಪಾಲ್ ಅವರು ದಶಕಗಳಿಂದ ಬೆಂಗಳೂರಿನಲ್ಲಿ ನೆಲೆಸಿದ್ದರು. ರಾಜ್ಯ ವ್ಯಂಗ್ಯ ಚಿತ್ರಕಲಾವಿದರ ಸಂಘದ ಸಕ್ರಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿರುತ್ತಾರೆ.

ವ್ಯಂಗ್ಯ ಚಿತ್ರ ಕೆಲವರಿಗೆ ನಗು ತಂದರೆ ಹಲವರ ಹೊಟ್ಟೆಯಲ್ಲಿ ಚುರುಕು ಬತ್ತಿ ಹೊತ್ತಿಸುತ್ತದೆ. ಮತ್ತೆ ಕೆಲವರನ್ನು ಚಿಂತನೆಗೆ ಗುರಿಮಾಡುತ್ತದೆ. ಹೀಗೆ ಆನೆಯನ್ನು ಮುಟ್ಟಿದ ಅನುಭವವೂ ಆಗುವುದುಂಟು. ಚಿತ್ರಗಾರರಲ್ಲಿ ಇಲ್ಲದ್ದು ವ್ಯಂಗ್ಯ ಚಿತ್ರಗಾರರಲ್ಲಿ ಇರುತ್ತದೆ. ಇರಲೇಬೇಕು ಕೂಡಾ. ಇವರಿಗೆ ಚಿತ್ರ ಬರೆಯಲು ಬಂದರಷ್ಟೆ ಸಾಲದು. ಸಾಹಿತ್ಯದ ಅಧ್ಯಯನ, ವಿಷಯ ವಿಶ್ಲೇಷಣಾ ಗುಣ, ಎಲ್ಲರನ್ನೂ ಮರೆಮಾಚಿಸಿ ಗೊಳ್ಳನೆ ನಗಿಸುವ ಗುಣ ಇದ್ದರಷ್ಟೆ ಈ ರಂಗ ಒಲಿಯುವುದು. ಓರೆಕೋರೆಗಳನ್ನು ಬಳಸಿ ಕಡಿಮೆ ಗೆರೆಗಳಲ್ಲಿ ವ್ಯಕ್ತಿಯ ಭಾವಚಿತ್ರವನ್ನು ರಚಿಸುವ ಜಾಣ್ಮೆ ಇಲ್ಲದಿದ್ದರೆ ವ್ಯಂಗ್ಯ ಚಿತ್ರಗಾರರಾಗಲು ಆಗೋಲ್ಲ. ಅಂತಹವರಲ್ಲಿ ವಿ. ಗೋಪಾಲ್ ಒಬ್ಬ ಉತ್ತಮ ಸಾಧಕರು.



ಗೋಪಾಲ್‌ರವರು ವ್ಯಂಗ್ಯ ಚಿತ್ರ ಕ್ಷೇತ್ರವನ್ನು ಆಯ್ಕೆಮಾಡಿಕೊಂಡು ಕರ್ನಾಟಕದ ಕಲಾಲೋಕದಲ್ಲಿ ಅತಿ ದೊಡ್ಡ ಹೆಸರು ಮಾಡಿದವರು. ಐವತ್ತೈದು ವರ್ಷಗಳಿಂದ ಚಿತ್ರಕಲಾ ಸೇವೆಯಲ್ಲಿ ತೊಡಗಿಕೊಂಡಿದ್ದ ವಿ. ಗೋಪಾಲ್, ವರ್ಣಚಿತ್ರ ಕಲೆ, ಶಿಲ್ಪಕಲೆ, ಛಾಯಾಗ್ರಹಣ ಕೃಷಿ ಮಾಡಿದವರು. ಕಾರ್ಟೂನ್ ಬರೆಯುವುದನ್ನು ತಮ್ಮ ಅಭಿವ್ಯಕ್ತಿಯ ಇನ್ನೊಂದು ಪ್ರಮುಖ ಮಾರ್ಗವಾಗಿಸಿ ಸಾಕಷ್ಟು ಯಶಸ್ಸನ್ನು ಕಂಡುಕೊಂಡಿದ್ದರು. ತಾವು ಕಲಿತಿದ್ದನ್ನು ಹಂಚಿಕೊಳ್ಳುವ ದೊಡ್ಡಗುಣ ಅವರಲ್ಲಿತ್ತು. ಬದುಕಿನ ಮಗ್ಗುಲುಗಳನ್ನು ಸೂಕ್ಷ್ಮವಾಗಿ ಗ್ರಹಿಸುತ್ತಾ ನಗೆ ಚಿಮ್ಮಿಸುವ ಕೆಲಸ ಮಾಡುತ್ತಾ ಯಾರನ್ನೂ ನೋಯಿಸದೆ ನಗೆ ಚಾಟಿ ಬೀಸುವ ಅದ್ಭುತ ಮೋಡಿ ಗೋಪಾಲ ಅವರದ್ದಾಗಿತ್ತು.

ಸುಮಾರು ೧೯೭೦ರ ಪ್ರಾರಂಭದಿಂದ ವ್ಯಂಗ್ಯ ಚಿತ್ರ ರಚನಾ ಕೃಷಿಯಲ್ಲಿ ತೊಡಗಿರುವ ಇವರ ವ್ಯಂಗ್ಯ ಚಿತ್ರಗಳು ರಾಜ್ಯದಾದ್ಯಂತ ಹೆಸರು ಮಾಡಿವೆ.

ಸಾವಿರಕ್ಕೂ ಅಧಿಕ ವ್ಯಂಗ್ಯ ಚಿತ್ರಗಳು 'ಹೊಸತು' ಪತ್ರಿಕೆ ಸೇರಿದಂತೆ ನಾಡಿನ ಬಹುತೇಕ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ.

ದೇಶ-ವಿದೇಶಗಳಲ್ಲಿ ನಡೆದ ಹಲವು ವ್ಯಂಗ್ಯ ಚಿತ್ರ ಪ್ರದರ್ಶನಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದರು.

ನಿರಂತರ ಅಧ್ಯಯನ, ವಿಷಯ ಗ್ರಹಿಕೆ, ರೇಖೆ ಮೂಡಿಸುವ ಚಮತ್ಕಾರ ಗೋಪಾಲ್‌ರವರಿಗೆ ಕರಗತವಾಗಿತ್ತು.

ಹೆಸರಾಂತ ಹಿರಿಯ ಕಲಾವಿದರಾದ ಎಂ.ಟಿ.ವಿ. ಆಚಾರ್ಯರು ಸ್ಥಾಪನೆ ಮಾಡಿದ ಅಂಚೆ ಚಿತ್ರಕಲೆ ಶಿಕ್ಷಣ ಸಂಸ್ಥೆ 'ಆಚಾರ್ಯ ಚಿತ್ರಕಲಾ ಭವನ'ದ ಪ್ರಧಾನ ಶಿಷ್ಯರಾಗಿ, ರ್‍ಯಾಂಕ್ ಪಡೆಯುವುದರ ಮೂಲಕ ಕಲಾವಿದರಾಗಿ ರೂಪುಗೊಂಡವರು ವಿ. ಗೋಪಾಲ್.

ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯ ನೌಕರನಾಗಿ ಜೀವನ ನಡೆಸಿದ ವಿ. ಗೋಪಾಲರು ಬಹುಮುಖ ಪ್ರತಿಭಾವಂತರು. ಮಣ್ಣಿನಿಂದ ಬೃಹತ್ ಅಳತೆಯ ಗಣಪತಿ ಮೂರ್ತಿಗಳನ್ನು ರಚಿಸುವುದರಲ್ಲಿ ನಿಷ್ಣಾತರಾಗಿದ್ದರು.

ಇಷ್ಟೆಲ್ಲದರ ನಡುವೆಯೂ ಗೋಪಾಲರವರು 'ನಗೆಚಿತ್ರಗಳು', 'ನಗೆರೇಖೆಗಳು', 'ಕಲಾಗೋಪಾಲ' ಎಂಬ ತಮ್ಮ ಆಯ್ದ ಚಿತ್ರಗಳ ಸಂಕಲನಗಳನ್ನು ಹೊರತಂದಿದ್ದಾರೆ.

ಕಲಾವಿದನಿಗೆ ಸಾವಿಲ್ಲ. ಅವರು ರಚಿಸಿದ ಕಲಾಕೃತಿಗಳ ಮೂಲಕ ಅವರನ್ನು ಜೀವಂತವಾಗಿಸುತ್ತವೆ.

ಬದುಕಿನ ಮಗ್ಗಲುಗಳಿಗೆ ರೇಖೆಗಳನ್ನು ಎಳೆದು, ಹಾಸ್ಯ ಚಟಾಕಿಗಳ ಮೂಲಕ ನಗಿಸಿ ಇಂದು ಕಣ್ಮರೆಯಾದ ಗೋಪಾಲ್ ಅವರ ನೆನಪು ಚಿರಾಯುವಾಗಲಿ.

**ನಾಮದೇವ ಕಾಗದಗಾರ**
ವ್ಯಂಗ್ಯ ಚಿತ್ರಕಾರ, ೩ನೇ ಕ್ರಾಸ್
ರಾಣೇಬೆನ್ನೂರು - ೫೮೧ ೧೧೫

"ನಮಗೆ ನೂರಾರು ಎಕರೆ ಸರ್ಕಾರಿ ಜಮೀನು ಬೇಡ, ಜಿಂದಾಲ್‌ಗೆ ನೀಡುವ ಬೆಲೆಗೆ ನಮಗೆ ತಲಾ ಮೂರು ಎಕರೆ ಜಮೀನು ಕೊಡಿ." ಕೋಟಿಗಟ್ಟಲೆ ಸಂಪತ್ತಿನ ಒಡೆಯರು ಈವರೆಗೆ ಅದಕ್ಕೆ ಸ್ಪಂದಿಸಿಲ್ಲ, ಸ್ಪಂದಿಸುವುದೂ ಇಲ್ಲ. ಸಾರ್ವಜನಿಕ ಆಸ್ತಿಯನ್ನು 'ಅಭಿವೃದ್ಧಿ'ಯ ಹೆಸರಿನಲ್ಲಿ ಖಾಸಗಿಯವರಿಗೆ ದಾನ ಮಾಡಲು ಕೇಂದ್ರ ಸರ್ಕಾರವು ಒಂದು ನೀತಿಯನ್ನು ಪ್ರಕಟಿಸಿದೆ. ಅದು ಇಂದಿನ ವೈಭವೋಪೇತ ಭಾರತೀಯ ಸಂಸ್ಕೃತಿ!



# ನಮ್ಮ ಇಂದಿನ ಸವಾಲು ಮತ್ತು ಸಾಧ್ಯತೆಗಳು

ವಿವಿಧ ಕ್ಷೇತ್ರಗಳ ಪರಿಣತರು ದಿನಂಪ್ರತಿ ಎಷ್ಟೊಂದು ವಿಶ್ಲೇಷಣೆ ಮತ್ತು ಸಲಹೆಗಳನ್ನು ನೀಡುತ್ತಿರುತ್ತಾರೆಂದರೆ ಅವನ್ನೆಲ್ಲಾ ಪರಿಚಯಿಸಿಕೊಂಡು ಜೀರ್ಣಿಸಿಕೊಳ್ಳುವುದು ದುಸ್ಸಾಧ್ಯವಾಗಿಬಿಟ್ಟಿದೆ. ಪತ್ರಿಕೆಗಳು, ನಿಯತಕಾಲಿಕಗಳು, ಸಂಶೋಧನಾ ಪ್ರಕಟಣೆಗಳು ಮತ್ತು ಗ್ರಂಥಗಳು ಹೇಗೆ ಹರಿದುಬರುತ್ತಿವೆಯೆಂದರೆ ಸಾಮಾನ್ಯರಿಗೆ ಅವು ಎಟುಕುವುದು ಅಪರೂಪ. ಎಲ್ಲ ಮಾಧ್ಯಮ ಪ್ರಕಾರಗಳಿಗೂ ಸಮಾನ ಗಮನ ನೀಡುವುದಂತೂ ಅಸಾಧ್ಯವಾಗಿಬಿಟ್ಟಿದೆ. ವಿಚಾರ ಸಂಕಿರಣಗಳು ಅಗಾಧವಾಗಿ ವಿಸ್ತರಣೆ ಹೊಂದಿವೆ. ಎಲ್ಲೆಲ್ಲೂ 'ಸವಾಲು'ಗಳ ಚರ್ಚೆ ನಡೆದು ಮುಂದೇನು ಮಾಡಿದರೆ ಜೀವನ ಹಸನಾಗುತ್ತದೆಂಬುದಕ್ಕೆ ಮಾರ್ಗದರ್ಶಿ ಸೂತ್ರಗಳು ರೂಪುಗೊಳ್ಳುತ್ತಿವೆ. ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್ ಮಂಡಿಸಿರುವ ವಾರ್ಷಿಕ ಬಜೆಟ್ ಕಾರಣದಿಂದಾಗಿ ಚಿಂತನಾ ಸಾಮಗ್ರಿಯು ಇನ್ನೂ ಹೆಚ್ಚು ದೈತ್ಯಾಕಾರವನ್ನು ಪಡೆದುಬಿಟ್ಟಿದೆ. ಕೆಲವು ಚರ್ಚೆಗಳನ್ನು ನಡೆಸಲು ಮುಂದಿನ ದಿನಗಳು ಅಡ್ಡಿಯುಂಟುಮಾಡುವ ಸಾಧ್ಯತೆ ಗಳು ಹಿಂದೆಂದಿಗಿಂತಲೂ ಈಗ ಹೆಚ್ಚಿವೆ. ಏನೇನನ್ನು ಚರ್ಚಿಸಕೂಡದೆಂಬ ಕಟ್ಟುನಿಟ್ಟು ಸೂಚನೆಗಳು ಹೊರಬರಲು ಕಾಲ ಸನ್ನಿಹಿತವಾಗುತ್ತಿದೆಯೆಂಬ ಆತಂಕವೂ ಹಲವರನ್ನು ಬಾಧಿಸುತ್ತಿದೆ. ಎಷ್ಟೋ ವಿಶ್ವವಿದ್ಯಾನಿಲಯಗಳು ಎಚ್ಚರಿಕೆಯಿಂದ ಚರ್ಚೆಗಳ ವ್ಯಾಪ್ತಿಯನ್ನು ಕುಗ್ಗಿಸುತ್ತಿವೆ ಕೂಡ. ತಮಾಷೆ ಮತ್ತು ವ್ಯಂಗ್ಯದ ಮಾತುಗಳನ್ನು ಸರ್ವಥಾ ಸಹಿಸಲಾಗುವುದಿಲ್ಲವೆಂಬ ಕೂಗು ದೆಹಲಿಯಿಂದ ಕೇಳಿಬರುವುದು ಒಂದು ಕಡೆಯಾದರೆ, ಕ್ರಿಕೆಟ್ ದಾಂಡುಗಳಿಂದ ಅಧಿಕಾರಿಗಳನ್ನು ಥಳಿಸುವ ಹೊಸ ಸಂಪ್ರದಾಯವು ಇನ್ನೊಂದು ಮಗ್ಗುಲಲ್ಲಿ ಮೊಳಕೆ ಒಡೆಯುತ್ತಿದೆ. ಅದು ಹೆಮ್ಮರವಾಗಿ ಬೆಳೆಯುವ ಘೋರ ಭವಿಷ್ಯವನ್ನು ಕಲ್ಪಿಸಿಕೊಳ್ಳುವುದು ಮಾನಸಿಕ ಭ್ರಮೆಯೆಂದು ತಳ್ಳಿಹಾಕುವ ಪ್ರಮೇಯವಿಲ್ಲ. ಬೌದ್ಧಿಕ ಚಟುವಟಿಕೆಗಳನ್ನು ನಿಯಂತ್ರಿಸುವ ತೆವಲು ಸ್ಪಷ್ಟವಾಗಿ ತೋರಿಬರುತ್ತಿದೆ. ಆಳುವ ಮಂದಿಯ ಆಣತಿಗೆ ತಲೆಬಾಗಿ ಸಂಶೋಧನೆಗಳನ್ನು ವಿಕೃತಗೊಳಿಸುವ ವಿದ್ವಾಂಸರನೇಕರು ನಮ್ಮಲ್ಲಿ ವಿಜೃಂಭಿಸುತ್ತಿದ್ದಾರೆ.

ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ವಿಭಾಗವು ಇತ್ತೀಚೆಗಷ್ಟೆ "ಭಾರತ ಶಿಕ್ಷಾ ಮಂಡಲಿ" ಎಂಬುದನ್ನು ರಚಿಸಿದೆ. ಅದರ ಪರಮೋದ್ದೇಶವೆಂದರೆ "ವೈದಿಕ ಮತ್ತು ಆಧುನಿಕ ಅಧ್ಯಯನಗಳನ್ನು ಸಮ್ಮಿಳಿತಗೊಳಿಸುವುದು" ಎನ್ನಲಾಗಿದೆ. ಬಹುಶಃ ಋಗ್ವೇದದ ಕಾಲದಲ್ಲಿ, ಅಂದರೆ ಸುಮಾರು ನಾಲ್ಕು ಸಾವಿರ ವರ್ಷಗಳ ಹಿಂದೆ, ನಮ್ಮ ಪೂರ್ವಜರು ಆಧುನಿಕ ತಂತ್ರಾಂಶಗಳನ್ನೆಲ್ಲಾ ಕರಗತ ಮಾಡಿಕೊಂಡಿದ್ದರೆಂಬ ಐತಿಹ್ಯಕ್ಕೆ ಪುರಾವೆಗಳನ್ನು ಒದಗಿಸುವ ಸಂಶೋಧನಾ ಪಟುಗಳನ್ನು ತಯಾರಿಸಲು ಈ ಮಂಡಲಿಯು ಕ್ರಿಯಾಶೀಲವಾಗುತ್ತದೇನೊ. ಈ ಸಂಶೋಧನಾ ಚತುರರು ನೀಡುವ ಮಾಹಿತಿಯ ಹಿನ್ನೆಲೆಯಲ್ಲಿ "ನೆಹರು ಸಂಪ್ರದಾಯದ ಕಾಣ್ಕೆ"ಗಳನ್ನು ತಿದ್ದುವ ಕೆಲಸ ಆರಂಭವಾಗಬೇಕೆಂಬ ಉತ್ಸಾಹವೇ ಸಂಶೋಧನೆಗೆ ನೀರು-ಗೊಬ್ಬರ ಒದಗಿಸೀತು! ಎರಡು ವರ್ಷಗಳ ಹಿಂದೆ ಅಖಿಲ ಭಾರತ ವಿಜ್ಞಾನ ಸಮಾವೇಶವು ಮುಂಬೈಯಲ್ಲಿ ಜರುಗಿದಾಗ ಪ್ರಾಚೀನ ಭಾರತದ ಅಮೂಲ್ಯ ವಿಜ್ಞಾನದ ಸಾಹಸಗಳನ್ನು ಒಂದು ಗೋಷ್ಠಿಯು ತೆರೆದಿಟ್ಟಿದ್ದಿತಲ್ಲ, ಅಂತಹ ಮೂರ್ಖತನದ ಸಂಪ್ರದಾಯ ಬೆಳೆಯದಿದ್ದರೆ ಅದೇ ಭಾಗ್ಯ.

ನಮ್ಮ ದೇಶದ ಮುಂದಿರುವ ಸವಾಲುಗಳು ಚಿರಪರಿಚಿತವಾದವು : ರೈತರ ಬವಣೆ, ಬುಡಕಟ್ಟು ಜನರ ನಿರ್ನಾಮ, ಕಾಡುಗಳ ನಾಶ, ಮತಧಾರ್ಮಿಕ ಅಟ್ಟಹಾಸ ಮತ್ತು ಹಿಂಸೆ, ಉದ್ಯೋಗ ರಹಿತ ತಥಾಕಥಿತ ಆರ್ಥಿಕ-ಔದ್ಯಮಿಕ ಬೆಳವಣಿಗೆ, ಪುಂಡು ಗುಂಪುಗಳಿಂದ ನಡೆಯುತ್ತಿರುವ ಅಸಹನೀಯ ಗೂಂಡಾಗಿರಿ, ದೇಶವನ್ನು ನ್ಯಾಟೋ ಕೂಟಕ್ಕೆ ಸೇರಿಸಿ ಅಮೆರಿಕಾದ ಸೈನ್ಯಕ್ಕೆ ನೆಲೆ ಕಲ್ಪಿಸುವುದು, ಸಾರ್ವಜನಿಕ ಆಸ್ತಿಯ ಲೂಟಿ, ಹೀಗೆ ಒಂದೇ ಎರಡೇ. ಇಂದಿನ ಕೇಂದ್ರ ಸರ್ಕಾರವು ಇವುಗಳಲ್ಲಿ ಹಲವನ್ನು ಸವಾಲುಗಳೆಂದು ಭಾವಿಸುವುದಿಲ್ಲ, ಏಕೆಂದರೆ ಅವು ಅದರದೇ ನಿರ್ಮಿತಿ. ಜೊತೆಗೆ ಆ ಸರ್ಕಾರದ ಆದ್ಯತೆಗಳೇ ಬೇರೆ. ಅಂತರರಾಷ್ಟ್ರೀಯ ಯೋಗ ದಿನ ಆಚರಿಸುವಂತೆ ಮಾಡಿದರೆ ಭಾರತೀಯ ಸಂಸ್ಕೃತಿಯು ಉಜ್ವಲವಾಗಿ ಕಂಗೊಳಿಸುತ್ತದಲ್ಲಾ, ಹಾಗೆ. ನೈಜ ಸಮಸ್ಯೆಗಳನ್ನು ಮುಚ್ಚಿಹಾಕಿ ಭಾವೋದ್ರೇಕವನ್ನು ಹಿಗ್ಗಿಸುವುದು ಅದಕ್ಕೆ ಸುಲಭ ಮಾರ್ಗ. ಮಿಥ್ಯಾ ಪ್ರಜ್ಞೆಯನ್ನು ಜನಸಮುದಾಯದಲ್ಲಿ ಬೆಳೆಸಿದರೆ ಸಾರ್ವಜನಿಕ ಸಂಪತ್ತಿನ ಲೂಟಿಯು ಅವಿರತವಾಗಿ ನಡೆಯಲು ಅಡ್ಡಿ ಇರುವುದಿಲ್ಲ. ಮುಂದಿನ ಬೆಳವಣಿಗೆಗಳನ್ನು ಈ ಹಿನ್ನೆಲೆಯಲ್ಲಿ ಕಂಡುಕೊಳ್ಳುವುದು ವಿವೇಕ.

ಸವಾಲುಗಳನ್ನು ಗುರುತಿಸುವಷ್ಟೇ ಸುಲಭವಾಗಿ ಸಾಧ್ಯತೆಗಳನ್ನು ನಿರೂಪಿಸಲು ಬರುವುದಿಲ್ಲ. ಈಗ ಹತ್ತು ವರ್ಷಗಳ ಹಿಂದೆ ಯಾರೂ ಸಾರ್ವಜನಿಕವಾಗಿ "ಮುಸಲ್ಮಾನ ಮಹಿಳೆಯರ ಮೇಲೆ ಅತ್ಯಾಚಾರ ನಡೆಸಿರಿ" ಎಂದು ಹೇಳಿಕೆ ಕೊಟ್ಟುದಿಲ್ಲ. ಆದರೆ ಈಗ ಒಬ್ಬ ಲೋಕಸಭಾ ಸದಸ್ಯೆ ಅಂತಹ ಹೀನಾಯ ಕರೆ ಕೊಟ್ಟಿದ್ದಾರೆ. ಅಂತಹ ಮನಸ್ಸುಗಳು ದೇಶದ ಆಡಳಿತ ಸೂತ್ರ ತಮ್ಮಲ್ಲಿರಿಸಿಕೊಂಡಿರುವಾಗ ಸಾಧ್ಯತೆಗಳನ್ನು ನಿಷ್ಪಕ್ಷವಾಗಿ ಊಹಿಸಲಾದೀತೆ! ದೇಶದಲ್ಲಿ ಯೋಜನಾ ಆಯೋಗವನ್ನು ಕಿತ್ತೆಸೆದು ಅದರ ಜಾಗದಲ್ಲಿ 'ನೀತಿ ಆಯೋಗ'ವನ್ನು ಸ್ಥಾಪಿಸಲಾಯಿತು. ಈವರೆಗೆ ಆ

**ಡಾ॥ ಜಿ. ರಾಮಕೃಷ್ಣ**

ಆಯೋಗವು ದೃಢವಾಗಿ ಯಾವ ನೀತಿಯನ್ನೂ ರೂಪಿಸಿದಂತೆ ಕಾಣುವುದಿಲ್ಲ. ಸಾರ್ವಜನಿಕ ಸಂಪತ್ತನ್ನು ಖಾಸಗಿ ವಲಯಕ್ಕೆ ಹಸ್ತಾಂತರಿಸುವ ಅನೀತಿಯನ್ನು ಅದು ಪುರಸ್ಕರಿಸಿದೆ, ಅಷ್ಟೆ. ತನ್ನೆಲ್ಲ ಕೊರತೆಗಳ ಹೊರತಾಗಿಯೂ ಯೋಜನಾ ಆಯೋಗವು ಏನೋ ಒಂದಿಷ್ಟು ಮಾರ್ಗದರ್ಶಿಯಾಗಿತ್ತು; ಈಗ ಅದಾನಿ-ಅಂಬಾನಿಗಳು ಮಾತ್ರವೇ ಮಾರ್ಗದರ್ಶಿಗಳು. ಬೆಂಗಳೂರಿನ "ಅಭಿವೃದ್ಧಿ"ಗೆ ಕಂಟ್ರಾಕ್ಟರುಗಳು ಮಾತ್ರವೇ ಮಾರ್ಗದರ್ಶಿಗಳಾಗಿದ್ದಾರಲ್ಲ, ಹಾಗೆ. ಅವರು ಗುರುತಿಸಿದ ರಸ್ತೆಗೆ ಬಿಳಿ ಪದರ, ಅವರು ಹೇಳಿದ ಉದ್ಯಾನಕ್ಕೆ ಹೊಸ ಹೊಳಪಿನ ಹಳೆಯ ಸಿಮೆಂಟ್ ಬಿಲ್ಲೆಗಳು. ಜೊತೆಗೆ ಮೇಲ್ಸೇತುವೆ – ಕೆಳಮಾರ್ಗಗಳು! ಮೂರು ತಿಂಗಳ ಹಿಂದೆ ಖ್ಯಾತ ಇತಿಹಾಸತಜ್ಞೆ ರೋಮಿಲಾ ಥಾಪರ್ ಬಂದಿದ್ದರು. ಕೇಂದ್ರ ಸರ್ಕಾರವು ಬಂಧನಕ್ಕೀಡುಮಾಡಿರುವ ಕಾರ್ಯಕರ್ತರ ಪರವಾಗಿ ಆಗ ತಾನೆ ಸರ್ವೋಚ್ಚ ನ್ಯಾಯಾಲಯದಲ್ಲಿ ಸಾರ್ವಜನಿಕ ಹಿತದ ಅರ್ಜಿಯನ್ನು ರೋಮಿಲಾ ಸಲ್ಲಿಸಿದ್ದರು. ಅದರ ಫಲಶ್ರುತಿಯ ಸಾಧ್ಯತೆಗಳೇನೆಂದು ಕೇಳಲಾಗಿ "ಇಂದಿನ ಸನ್ನಿವೇಶದಲ್ಲಿ ಯಾವುದೂ ನಿಶ್ಚಿತವಲ್ಲ" ಎಂದಿದ್ದರು. ನಮ್ಮ ನಾಳಿನ ಬಗೆಗಿನ ಸಾಧ್ಯತೆಗಳೂ ಸಹ ತೀರಾ ಅನಿಶ್ಚಿತವೇ. ಬೌದ್ಧಿಕ ಚರ್ಚೆಗಳನ್ನು ನಡೆಸುವ ವಿದ್ವದ್ಗೋಷ್ಠಿಗಳ ಭವಿಷ್ಯ ಸಹ ಅನಿಶ್ಚಿತ.

ಕೇಂದ್ರ ಸರ್ಕಾರ ಮತ್ತು ಅದರ ಸಂಸ್ಥೆಗಳು ನೀಡುವ ವರದಿಗಳು ಯಾವ ಮಟ್ಟಕ್ಕೆ ಕುಸಿದಿವೆಯೆಂದರೆ ಯಾವ ದತ್ತಾಂಶವನ್ನೂ ನಿಜವೆಂದು ಭಾವಿಸುವಂತಿಲ್ಲ. ದೇಶದ ಒಟ್ಟು ಉತ್ಪಾದನೆಯ ಅಂಕಿ-ಅಂಶಗಳನ್ನು ಸಹ ತಿರುಚುವುದು ಸರ್ಕಾರದ ಅಂಗೀಕೃತ ನೀತಿಯಾಗಿದೆ. ರಿಸರ್ವ್ ಬ್ಯಾಂಕಿನ ಗವರ್ನರ್ ಆಗಿದ್ದ ಮಹಾನುಭಾವ ಊರ್ಜಿತ್ ಪಟೇಲ್ ಇದ್ದಾಗ ನೋಟಿನ ಅಮಾನ್ಯೀಕರಣ ಜರುಗಿತು. ಬ್ಯಾಂಕಿನ ಹುದ್ದೆಗೆ ರಾಜೀನಾಮೆ ನೀಡಿ ನಿರ್ಗಮಿಸಿದ ನಂತರ ಆತ ಹೇಳುತ್ತಾನೆ, "ಆ ನೀತಿ ಸರಿಯಾಗಿರಲಿಲ್ಲ" ಎಂದು. ಅಂದರೆ, ರಿಸರ್ವ್ ಬ್ಯಾಂಕನ್ನು ಸಹ ಕೇಳದೆ ದೆಹಲಿಯ ಪ್ರಭು ಸ್ವಯಂ ನೀತಿ ನಿರ್ಧಾರಕನೆಂದರ್ಥ. ಪುಲ್ವಾಮ ಇನ್ನೊಂದು ಉದಾಹರಣೆ: ಪ್ರಭು ಹೇಳುವುದೇ ಒಂದು, ಕೆಲವು ಸೈನ್ಯಾಧಿಕಾರಿಗಳು ಹೇಳುವುದೇ ಬೇರೆ. ಅರ್ಥಾತ್, ಸರ್ಕಾರ ನೀಡುವ ಮಾಹಿತಿ, ಅಂಕಿ-ಅಂಶ, ಮುಂತಾದುವನ್ನು ಮಾಪನ ಮಾಡುವುದು ಕೂಡ ಸಾಧ್ಯವಿಲ್ಲ; ಸುಳ್ಳು ಮಾಹಿತಿ ನೀಡುವುದು ಒಂದು ನೀತಿಯಾಗಿಬಿಟ್ಟಿದೆ.

ಯಾವುದೇ ವಿಷಯಕ್ಕೆ ಸಂಬಂಧಿಸಿದ ಪುರಾವೆಗಳನ್ನು ಎಷ್ಟು ಎಚ್ಚರಿಕೆಯಿಂದ ಮಾಪನ ಮಾಡಬೇಕೆಂಬುದು ಇತಿಹಾಸದ ಅಧ್ಯಯನದಲ್ಲಿ ಒಂದು ವಿಶಿಷ್ಟ ಶಿಸ್ತಿನ ಭಾಗವಾಗಿದೆ. ಖ್ಯಾತ ಚರಿತ್ರೆಕಾರ ಕೆ. ಎ. ನೀಲಕಂಠ ಶಾಸ್ತ್ರಿ ೧೯೩೭ರಲ್ಲಿ ಭಾರತೀಯ ಇತಿಹಾಸ ಅಧಿವೇಶನದ ಅಧ್ಯಕ್ಷರಾಗಿ ಇತಿಹಾಸಕಾರರಿಗೆ ಒಂದು ಕಿವಿಮಾತು ಹೇಳಿದ್ದರು: "ಒಂದು ಸಾವಿರ ವರ್ಷಗಳ ಹಿಂದಿನ ಒಂದು ತಾಮ್ರಪತ್ರ ಅಥವಾ ಶಾಸನ ದೊರೆಯಿತೆನ್ನಿ; ಅದರಲ್ಲಿ ಅಂದಿನ ಸಂದರ್ಭದ ವಾಸ್ತವದ ಸೂಚನೆಯನ್ನು ನಿರೀಕ್ಷಿಸುತ್ತೇವೆ. ತಾಮ್ರಪತ್ರದಲ್ಲಿ ಒಂದು ವಾಕ್ಯ ಹೀಗಿರಬಹುದು: 'ರಾಜನ ಅರಮನೆಗೆ ಚಿನ್ನದ ಬಾಗಿಲುಗಳನ್ನು ಇರಿಸಲಾಗಿದೆ.' ಹೌದೆಂದು ನಾವು ಸ್ವೀಕರಿಸ ಬಾರದು. ಆ ವಾಕ್ಯದಿಂದ ಎರಡು ತೀರ್ಮಾನಗಳು ಮಾತ್ರ ಅಂಗೀಕಾರಾರ್ಹ. ಅವು ಯಾವುವೆಂದರೆ, (ಅ) ಆ ಕಾಲದ ಅರಮನೆಗಳಿಗೆ ಬಾಗಿಲುಗಳು ಇರುತ್ತಿದ್ದವು, ಮತ್ತು (ಆ) ಆ ಕಾಲದ ಜನರಿಗೆ ಚಿನ್ನವೆಂಬ ಲೋಹದ ಪರಿಚಯವಿದ್ದಿತು." ಇಂದಿನ ನಮ್ಮ ಕೇಂದ್ರ ಸರ್ಕಾರವು ನೀಡುವ ದಾಖಲೆಗಳನ್ನು ಆ ರೀತಿ ಪರಾಮರ್ಶಿಸಿ ಅದರ ಹಿಂದಿನ ಸತ್ಯದ ಶೋಧನೆಯಾಗಬೇಕಿದೆ. ಉದ್ಯೋಗಾವಕಾಶಗಳ ಹೆಚ್ಚಳ, ಸಾಲ ಮನ್ನಾ, ಶೈಕ್ಷಣಿಕ ಬೆಳವಣಿಗೆ, ಕೃಷಿ ಉತ್ಪನ್ನ, ಇತ್ಯಾದಿಗಳ ಬಗೆಗಿನ ಮಾಹಿತಿಯಲ್ಲಿ ಸತ್ಯವೆಷ್ಟಿದೆ ಎಂಬುದರ ಸಂಶೋಧನೆಗೆಂದೇ ಒಂದು ಪ್ರತ್ಯೇಕ ಆಯೋಗವನ್ನು ರಚಿಸಬೇಕಾದಂತಹ ಸನ್ನಿವೇಶ ಸೃಷ್ಟಿಯಾಗಿದೆ.

ಆದ್ದರಿಂದ ಇಂದಿನ ಸನ್ನಿವೇಶದ ಮೂಲಭೂತ ಅಂಶವೇನೆಂದರೆ 'ಕಾರ್ಗತ್ತಲು ಎಷ್ಟು ಗಾಢವಾಗಿದೆ' ಮತ್ತು 'ಜಾಜ್ವಲ್ಯಮಾನವಾದ ಪ್ರಕಾಶ ಎಷ್ಟು ನೈಜವಾದ್ದು' ಎಂಬುದೇ ಆಗಿದೆ. ಕೆಲವು ತಿಂಗಳುಗಳ ಹಿಂದೆ ಅನೇಕ ಸಾಮಾಜಿಕ ಕಾರ್ಯಕರ್ತರನ್ನು 'ದೇಶ ದ್ರೋಹ ಮಾಡಿರುವವರು' ಎಂಬ ಆಪಾದನೆ ಹೊರಿಸಿ ಬಂಧನಕ್ಕೆ ಗುರಿಮಾಡಲಾದ್ದು ಎಲ್ಲರಿಗೂ ತಿಳಿದಿದೆ. ಆ ಸಂದರ್ಭದಲ್ಲಿ ಹೈದರಾಬಾದಿನಲ್ಲಿರುವ 'ಇಂಗ್ಲಿಷ್ ಮತ್ತು ವಿದೇಶಿ ಭಾಷೆಗಳ ವಿಶ್ವವಿದ್ಯಾನಿಲಯ'ದ ಪ್ರಾಧ್ಯಾಪಕರೊಬ್ಬರ ಮನೆಯನ್ನು ವಿಶ್ವವಿದ್ಯಾನಿಲಯದ ಆವರಣದಲ್ಲಿ ತನಿಖೆಗೆ ಒಳಪಡಿಸಲಾಗಿತ್ತು. ಆತನ ಪುಸ್ತಕ ಭಂಡಾರವನ್ನೆಲ್ಲಾ ಶೋಧಿಸಲಾಯಿತಂತೆ. ಅಲ್ಲಿ ಕಾರ್ಲ್ ಮಾರ್ಕ್ಸ್‌ನ ಕೆಲವು ಗ್ರಂಥಗಳೂ ಇದ್ದವು. ಪೊಲೀಸ್ ಅಧಿಕಾರಿಯು ಪ್ರಾಧ್ಯಾಪಕನಿಗೆ ಹೇಳಿದನಂತೆ: "ನಿನ್ನಂತಹ ಪ್ರಾಧ್ಯಾಪಕನೊಬ್ಬ ಇಂತಹ ಗ್ರಂಥಗಳನ್ನು ಹೊಂದಿರುವುದೇ? ಶಿಷ್ಟರಿಗೆ ಅದು ಶೋಭಿಸುವುದಿಲ್ಲ, ಬಿಡು." ಬಹುಶಃ ವಾತ್ಸ್ಯಾಯನನ 'ಕಾಮಸೂತ್ರ' ಗ್ರಂಥ ಇರಿಸಿಕೊಂಡಿರಬೇಕೆಂದು ಸದರಿ ಅಧಿಕಾರಿ ಅಪೇಕ್ಷಿಸಿದ್ದನೋ ಏನೋ! ನಮ್ಮ ದೇಶದ ಇಂದಿನ ಬೌದ್ಧಿಕ – ಸಾಂಸ್ಕೃತಿಕ ಅಂಧಕಾರಕ್ಕೆ ಇದೊಂದು ಚಿಕ್ಕ ಉದಾಹರಣೆ, ಅಷ್ಟೆ. ಈ ಪ್ರಾಧ್ಯಾಪಕನ ಸಂದರ್ಭದಲ್ಲಿ 'ಪ್ರಕಾಶವು' ಹೇಗೆ ಕಾಣಬೇಕಿತ್ತು? "ಅವನ ಪಾಡು ಅದು, ಹೋಗಲಿ. ಅಂತಹ ಪುಸ್ತಕಗಳನ್ನು ಹೇರಿಕೊಂಡು ಅದೇನು ಕಲಿಯುತ್ತಾನೋ ಕಲಿಯಲಿ, ನೋಡೋಣಂತೆ" ಎಂದಿದ್ದರೆ ಸಾಕಿತ್ತು. ಮಾರ್ಕ್ಸ್‌ನ 'ಬಂಡವಾಳ' ಗ್ರಂಥದ ಬದಲು ಪಿಕೆಟ್ಟಿಯ 'ಬಂಡವಾಳ' ಎಂಬ ಗ್ರಂಥವನ್ನು ಹೊಂದುವುದು ಹೆಚ್ಚು ಗೌರವಯುತವಾದದ್ದೆಂದು ಭಾವಿಸಬೇಕೆ? ಅಷ್ಟಕ್ಕೂ, ಪಿಕೆಟ್ಟಿ ಸಹ ಮಾರ್ಕ್ಸ್‌ನ ಗ್ರಂಥವನ್ನು ಬಿಸುಡಿ ಎಂದು ಹೇಳಿಲ್ಲ, ಅದರಿಂದ ಕಲಿಯೋಣವೆಂದೇ ಹೇಳುತ್ತಾನೆ. 'ಭೂಮಾ' (ಹೆಚ್ಚಿನದು) ಎಂಬುದರಲ್ಲಿ ಶೋಭೆ ಇದೆಯೆಂದು ಹೇಳುತ್ತಾ, 'ಅದೇ ಸುಖ' ಎಂದು ನಮ್ಮ ಒಂದು ಉಪನಿಷತ್ತು ಹೇಳುತ್ತದೆ. ಅದು ದೆಹಲಿಯ ಪ್ರಭುಗಳ ತಲೆಗೇಕೆ ಹತ್ತುವುದಿಲ್ಲವೋ ತಿಳಿಯದು. ಮುಂದೊಂದು ದಿನ ಯಾವನೋ ತನ್ನ ಮನೆಯಲ್ಲಿ ಅಲ್-ಬರೂನಿ ಬರೆದ 'ಭಾರತ' ಎಂಬ ಪುಸ್ತಕ ಇರಿಸಿಕೊಂಡಿರುವುದು ತಿಳಿಯುತ್ತದೆನ್ನಿ. ಇಸ್ಲಾಂ ಪಂಥದವನು ಬರೆದ ಪುಸ್ತಕವನ್ನು ಓದುವುದೇ ಎಂದು ಸರ್ಕಾರದ ಪ್ರತಿನಿಧಿ ಹೌಹಾರಿಯಾನು. ಆದರೆ ಅಲ್ – ಬರೂನಿ ನಮ್ಮ ವರಾಹಮಿಹಿರ, ಬ್ರಹ್ಮಗುಪ್ತ, ಮೊದಲಾದ ಖಗೋಳಶಾಸ್ತ್ರಜ್ಞರ ಬಗ್ಗೆ ಹೇಳಿರುವುದೆಲ್ಲಾ ಎಷ್ಟು ಅಮೂಲ್ಯವೆಂದು ಈ ಪ್ರಭೃತಿಗಳಿಗೆ ತಿಳಿಸಿಕೊಡುವವರು ಯಾರು!

ಒಟ್ಟಿನಲ್ಲಿ, 'ಸವಾಲು' ಮತ್ತು 'ಸಾಧ್ಯತೆ' ಇವುಗಳ ನಿಜ ತಾತ್ಪರ್ಯ ಇದು: ಉದ್ದೇಶ ಅಥವಾ ಆಶಯದ ಅಭಿವ್ಯಕ್ತಿ ಮತ್ತು ಮೂರ್ತ ನಿರ್ವಹಣೆ, ಇವುಗಳ ವಿಶ್ಲೇಷಣೆಯು ನಮ್ಮ ಇಂದಿನ ಮತ್ತು ಮುಂದಿನ ಸಂದರ್ಭವನ್ನು ವ್ಯಾಖ್ಯಾನಿಸಲು ನಮಗಿರುವ ಸಾಧನ. ಕೆಲವು ಉದಾಹರಣೆಗಳ ಮೂಲಕ ಇದನ್ನು ಸಾಕಷ್ಟು ಸ್ಪಷ್ಟವಾಗಿ ತಿಳಿಯಲು ಸಾಧ್ಯ.. ಆಶ್ಚರ್ಯಕರವೆನ್ನಬೇಕೋ ಅಥವಾ ನಾಚಿಕೆಗೇಡು ಎನ್ನಬೇಕೋ, ಅಂತೂ ನಮ್ಮ ಸಮಕಾಲೀನ ಸನ್ನಿವೇಶ ಮತ್ತು ಸವಾಲುಗಳು ಎಷ್ಟೋ ವೇಳೆ ಪ್ರಾಚೀನ ಮತ್ತು ಮಧ್ಯಕಾಲೀನ ಭಾರತದ ಊಳಿಗಮಾನ್ಯ ವ್ಯವಸ್ಥೆಯನ್ನು ನೆನಪಿಸುತ್ತವೆ. ಏಕಸ್ವಾಮ್ಯ ಬಂಡವಾಳಶಾಹಿ ಪಾತಕಗಳ ಒಟ್ಟಿಗೆಯೇ ಅರೆ-ಊಳಿಗಮಾನ್ಯ ಪದ್ಧತಿಯ ಪಿಡುಗುಗಳೂ ನಮ್ಮಲ್ಲಿ ವ್ಯಾಪಕವಾಗಿ ಉಳಿದಿವೆ ಮತ್ತು ಬೆಳೆಯುತ್ತಿವೆ. ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ನಡೆಯಬಹುದಾದ ಪಾತಕಗಳು ಲಕ್ನೋ – ಭೋಪಾಲ್‌ನಂತಹ ಮಹಾನಗರಗಳಲ್ಲಿ ಇಂದಿಗೂ ನಡೆಯುತ್ತಿವೆಯೆಂದರೆ ನಮ್ಮ ಸಾಂಸ್ಕೃತಿಕ ಮನೋಭೂಮಿಕೆಯು ಎಷ್ಟು ಕಲುಷಿತವಾಗಿ ಉಳಿದಿವೆಯೆಂಬುದರ ಅರಿವನ್ನು ಮೂಡಿಸುತ್ತವೆ. ನಮ್ಮ ರಾಜ್ಯದ ಗುಂಡ್ಲುಪೇಟೆಯ ಬಳಿ ಒಬ್ಬ ದಲಿತ ಯುವಕನ ಬೆತ್ತಲೆ ಮೆರವಣಿಗೆ ನಡೆದು ಹೋಯಿತು. ಅದನ್ನು ಮುಚ್ಚಿಹಾಕಲು ಆಪಾದಿತನೊಬ್ಬ ಆ ಯುವಕನನ್ನು ಜೈನಮುನಿ ಎಂದು ಭಾವಿಸಿದುದಾಗಿ ಪೊಲೀಸರಿಗೆ ನೀಡಿರುವ ಹೇಳಿಕೆಯಲ್ಲಿ ದಾಖಲಿಸಿದ್ದಾನೆ. ಆದರೆ 'ಜೈನಮುನಿ'ಯನ್ನು ಹಿಗ್ಗಾಮುಗ್ಗಾ ಹೊಡೆದಿದ್ದೇಕೆ ಮತ್ತು ಅವನನ್ನು ಹಗ್ಗದಿಂದ ಕಟ್ಟಿದ್ದುದೇಕೆ ಎಂಬುದನ್ನು ಪೊಲೀಸರು ತನಿಖೆ ಮಾಡುವುದಿಲ್ಲವೆ? ತಾವು ಉಚ್ಚಜಾತಿಯವರಾದ್ದರಿಂದ ದಲಿತನೊಬ್ಬನ ಮೇಲೆ ದೈಹಿಕ ಮತ್ತು ಮಾನಸಿಕ ಹಲ್ಲೆ ನಡೆಸುವ ಹಕ್ಕು ತಮಗುಂಟು ಎಂಬ ಕುತ್ಸಿತ ಭಾವನೆ ಹೋಗಿಲ್ಲವಲ್ಲ! ಸ್ವಾತಂತ್ರ್ಯ ಪಡೆದ ಎಪ್ಪತ್ತೆರಡು ವರ್ಷಗಳ ತರುವಾಯದಲ್ಲಿ ನಮ್ಮ 'ಸಂಸ್ಕೃತಿ' ಹೀಗೆ ಘೋರಕೃತ್ಯಗಳನ್ನು ಮನ್ನಿಸುತ್ತಿದೆ ಎಂದರ್ಥ. ಉತ್ತರ ಪ್ರದೇಶದ ಒಂದು ದೊಡ್ಡ ಊರಿನಲ್ಲಿ ಒಬ್ಬ ದಲಿತ ಯುವಕನ ಮದುವೆ; ಬೇರೆ ಜಾತಿಯವರಂತೆ ತಾನೂ ಕುದುರೆಯ ಮೇಲೆ ಕೂತು ಹೋಗುವ ಆಸೆ ಅವನಿಗೆ. ಉಚ್ಚ ಜಾತಿಯ ನೀಚರು ಅವನನ್ನು ಕುದುರೆಯಿಂದ ಕೆಳಕ್ಕೆ ತಳ್ಳಿ ಮನಸೋ ಇಚ್ಛೆ ಥಳಿಸಿದ್ದಾರೆ. ಅಲ್ಲಿ ಗುಂಪುಗೂಡಿದ್ದವರಾರೂ ಅದಕ್ಕೆ ಅಡ್ಡಿಯೊಡ್ಡಲಿಲ್ಲ. ಅವರೆಲ್ಲಾ ದಲಿತನನ್ನು ನಿಕೃಷ್ಟವಾಗಿ ನಡೆಸಿಕೊಂಡವರ ಪರವಾಗಿ ನಿಂತರು. ಅದೇ ಶ್ರೀರಾಮನ ರಾಜ್ಯದ ಇನ್ನೊಂದು ಹಳ್ಳಿ; ಯಾವುದೋ ಮದುವೆಯ ಸಂಭ್ರಮ. ಅಲ್ಲಿಯ ಔತಣಕೂಟಕ್ಕೆ ದಲಿತನೊಬ್ಬ ಆಹ್ವಾನದ ಮೇರೆಗೆ ಹೋಗಿ ಊಟಕ್ಕೆ ಕುಳಿತಿದ್ದಾನೆ. ಎದುರಿನ

ಸಾಲಿನಲ್ಲಿದ್ದ ಒಬ್ಬ ವ್ಯಕ್ತಿ ಇವನನ್ನು ನೋಡಿದುದಕ್ಕೆ ಪ್ರತಿಯಾಗಿ ತಾನೂ ನೋಡಿದ್ದಾನೆ. ಕೂಡಲೆ ಅವನು ಎದ್ದು ಬಂದು ಅಷ್ಟು ಅತಿಥಿಗಳ ಸಮ್ಮುಖದಲ್ಲಿ ಇವನನ್ನು ಚೆನ್ನಾಗಿ ಚಚ್ಚಿದ್ದಾನೆ. ಯಾರೂ ಅದನ್ನು ಪ್ರಶ್ನಿಸುವ ಗೋಜಿಗೆ ಹೋಗಿಲ್ಲ.

ಆರ್ಥಿಕ – ಸಾಮಾಜಿಕ ಸನ್ನಿವೇಶವು ಸಮಾನತೆಯ ಭಾವವನ್ನು ಎಳ್ಳಷ್ಟೂ ಮೂಡಿಸಲಿಲ್ಲವೇಕೆ? ಸಂಸ್ಕೃತಿಯನ್ನು ಕುರಿತು ಎಗ್ಗಿಲ್ಲದೆ ಆರ್ಭಟಿಸುವವರಿಗೆ ಇದರ ಪರಿಜ್ಞಾನ ಬೇಕಿಲ್ಲವೆಂಬುದು ಸ್ಪಷ್ಟವಾಗಿದೆ. ತಮ್ಮ ವಿರೋಧಿಗಳ ಮೇಲೆ ಹಲ್ಲೆ ನಡೆಸಲು ಇದೇ ಯುವಕರನ್ನು ಬಳಸಿಕೊಳ್ಳಲು ಅವರಿಗೆ ಅಂಜಿಕೆ ಇರುವುದಿಲ್ಲ! ಇತ್ತೀಚಿನ ಒಂದು ಲೇಖನದಲ್ಲಿ (ದಿ ಹಿಂದು, ೧೩–೦೬–೨೦೧೮) ಖ್ಯಾತ ಸಾಹಿತಿ ಮತ್ತು ಚಿಂತಕ ಮಿಲನ್ ಕುಂದೇರನ ಒಂದು ವಾಕ್ಯವನ್ನು ಉದ್ಧರಿಸಲಾಗಿತ್ತು: "ಅಧಿಕಾರ ಅಥವಾ ಪ್ರಾಬಲ್ಯದ ವಿರುದ್ಧದ ಮಾನವನ ಹೋರಾಟವೆಂದರೆ ಮರೆಗುಳಿಕೆಯ ವಿರುದ್ಧ ಸ್ಮೃತಿಯ ಹೋರಾಟವೆಂದರ್ಥ." ಇಂದು ದೌರ್ಜನ್ಯಕ್ಕೆ ತುತ್ತಾಗುವ ಅನುಭವ ಇಲ್ಲದೆಯೂ ನೆನಪು ಗತಕಾಲದ ದೌರ್ಜನ್ಯವನ್ನು ಮನಸ್ಸಿನಿಂದ ಅಳಿಸಿಹಾಕುವುದಿಲ್ಲ; ಅಂತಹುದರಲ್ಲಿ, ಅನುಭವ ಸಹ ಮರುಕಳಿಸು ವಂತಿದ್ದರೆ ದಬ್ಬಾಳಿಕೆಗೆ ಗುರಿಯಾದವರು ಎಲ್ಲಿ ಮತ್ತು ಹೇಗೆ ತಮ್ಮನ್ನು ಗುರುತಿಸಿಕೊಳ್ಳಬೇಕು? ಅವ್ಯಕ್ತ ಭಾವನೆಗಳು ಮೂಟೆಗಟ್ಟಲೆ ತುಂಬಿರುವಾಗ ಸಹಜ ಸಂಬಂಧಗಳನ್ನು ಬೆಸೆಯುವುದೆಂತು? ವಾಸ್ತವವನ್ನು ಅವಗಣಿಸಿ ಭಾವನಾತ್ಮಕ ಐಕ್ಯವನ್ನು ಬೋಧಿಸುವುದು ಸವಾಲಿಗೆ ಪರಿಹಾರವನ್ನು ಒದಗಿಸಬಲ್ಲುದೆ? ನೆಲದ ಮೇಲೆ ಬಿಸಾಡಿದ ರೊಟ್ಟಿಯ ಚೂರುಗಳನ್ನು ಆಯ್ದುತಿನ್ನುವ ಕೆಲಮಂದಿ ಇರುತ್ತಾರೆ; ಅವರನ್ನು ತಣಿಸಿ ಅವರ ಮೂಲಕ ಒಂದು ಸಾಮಾಜಿಕ ವಿಭಾಗವನ್ನು ಮಣಿಸುವ ಯೋಜನೆ ಎಷ್ಟು ಕಾಲ ಫಲದಾಯಕವಾಗಿ ಉಳಿದೀತು? ಇದನ್ನು ದಲಿತರು ಹಾಗೂ ಅವರನ್ನು ಸ್ವಂತದ ಏಳಿಗೆಗೆ ಬಳಸಿಕೊಳ್ಳುವವರು, ಇಬ್ಬರೂ ಗಂಭೀರವಾಗಿ ಪರಿಗಣಿಸಬೇಕಾದ ಅಗತ್ಯವಿದೆ. ನಿಜ ಜೀವನಾನುಭವವು ಗುಣಾತ್ಮಕವಾಗಿ ಬದಲಾಗದಿದ್ದರೆ ಆಗಾಗ ನೀಡಲಾಗುವ ಸಾಂತ್ವನ ಮತ್ತು ಭರವಸೆಯ ಮಾತುಗಳು ಬಹುಕಾಲ ಯಾರನ್ನೂ ರಂಜಿಸುವುದಿಲ್ಲ, ತೃಪ್ತಿ ನೀಡುವುದಿಲ್ಲ, ಸಮಾನತೆಯ ಭಾವವನ್ನು ಮೂಡಿಸುವುದಿಲ್ಲ. ಆದ್ದರಿಂದಲೇ ಆಮೂಲಾಗ್ರ ಸಂರಚನೆಯ ಬದಲಾವಣೆಯು ನಮ್ಮ ಕಾರ್ಯಸೂಚಿ ಯಾಗಬೇಕಿದೆ. ವ್ಯವಸ್ಥೆಯಲ್ಲಿ ಬೇರುಬಿಟ್ಟಿರುವ ವಂಚನೆ ಮತ್ತು ಅದಕ್ಕೆ ಪ್ರತೀಕಾರದ ಭಾವನೆ ಮೈಗೂಡಿಸಿಕೊಂಡ ಮನಸ್ಸು ಎಷ್ಟು ಕಾಲ ಸಹಬಾಳ್ವೆ ನಡೆಸಲು ಶಕ್ಯ?

"ಇತಿಹಾಸದಲ್ಲಿ ಜರುಗಿಹೋದ ತಪ್ಪುಗಳನ್ನು ಸರಿಪಡಿಸಬೇಕು" ಎಂಬುದು ಮಧ್ಯಕಾಲೀನ ಮಸೀದಿಯೊಂದನ್ನು ಉರುಳಿಸಲು ಸಮರ್ಥನೆ ಆಗುವುದಾದರೆ, ನಮ್ಮ ಸಮಾಜದಲ್ಲಿ ಶತಮಾನಗಳ ಕಾಲ ನಿರಂತರವಾಗಿ ದೌರ್ಜನ್ಯಕ್ಕೊಳಗಾಗಿರು ವವರು ಯಾವ ರೀತಿಯಲ್ಲಿ "ಇತಿಹಾಸದ ತಪ್ಪನ್ನು" ಸರಿಪಡಿಸಿಕೊಳ್ಳಬೇಕು? ದೌರ್ಜನ್ಯಗಳಿಗೆ ಗುರಿಮಾಡಿದವರನ್ನು ಉರುಳಿಸುವುದರಿಂದಲೇ ಅಥವಾ ಸಮಾನತೆಗಾಗಿ ನಡೆಸಬೇಕಾದ ಹೋರಾಟದಿಂದಲೆ? ದೌರ್ಜನ್ಯಗಳನ್ನೆಸಗಿದ ಮತ್ತು ಎಸಗುತ್ತಿರುವ ವರ್ಗ ಹಾಗೂ ದೌರ್ಜನ್ಯಗಳಿಗೆ ಬಲಿಯಾಗುತ್ತಲೇ ಬಂದ ವರ್ಗ, ಎರಡೂ ಇದನ್ನು ಪರಾಮರ್ಶೆ ಮಾಡಿಕೊಳ್ಳುವುದು ನಮ್ಮ ಮುಂದಿನ ಒಂದು ಸವಾಲು.

"ಇತಿಹಾಸದ ತಪ್ಪುಗಳನ್ನು ಸರಿಪಡಿಸುವ" ಮಂದಿಗೆ ಒಂದು ಪ್ರಾಥಮಿಕ ತಿಳಿವಳಿಕೆಯ ಕೊರತೆ ಇದೆ; ಎಂದಿನದೋ ತಪ್ಪನ್ನು ಇಲ್ಲವಾಗಿಸುವುದು ಇಂದು ಸಾಧ್ಯವಿಲ್ಲ ಎಂಬ ತಿಳಿವು ಅದು. ಮುಂದೆ ಅದೇ ತಪ್ಪು ಮುಂದುವರಿಯದಿರುವಂತೆ ಮಾಡಲು ಯತ್ನಿಸಬಹುದು, ಆದರೆ ಹಿಂದೆ ಘಟಿಸಿ ಇತಿಹಾಸದ ಪುಟಗಳಲ್ಲಿ ಸೇರಿಹೋಗಿರುವ ಸಂಗತಿಗಳನ್ನು ಇಲ್ಲವಾಗಿಸಲಾಗುವುದಿಲ್ಲ. ಪಠ್ಯಪುಸ್ತಕಗಳನ್ನು ಸ್ವೇಚ್ಛೆಯಿಂದ ಬದಲಿಸಿ ಬರೆದುಕೊಳ್ಳಬಹುದು, ನಿಜ; ಆದರೆ ಇತಿಹಾಸವು ಬದಲಾಗುವುದಿಲ್ಲ. ಅಂದಿನ ತೇಜೋವಧೆ, ವೀರೋಚಿತ ಸಾಧನೆ, ದ್ರೋಹ, ಎಲ್ಲವೂ ನೆನಪಿನ ಉಗ್ರಾಣದಲ್ಲಿ ಇದ್ದೇ ತೀರುತ್ತವೆ; ಆದರೆ ಅದಕ್ಕೆ ಇಂದು ಪ್ರತೀಕಾರವು ಆಗದ ಮಾತು. ಏಕೆಂದರೆ, ಅದಕ್ಕೆ ಕಾರಣವಾದವರು ಇಂದು ನಮ್ಮ ಮುಂದಿಲ್ಲ. ವರ್ಣ ಮತ್ತು ಮತಧರ್ಮದ ಆಧಾರದ ಮೇಲೆ "ತಪ್ಪು ಮಾಡಿದ್ದವರನ್ನು" ಇಂದು ಗುರುತಿಸಹೋಗುವುದು ಯಾವುದೋ ಒಂದು ಕ್ಷೇತ್ರಕ್ಕೆ ಸೀಮಿತವಾಗುವುದಿಲ್ಲ. ಹಿಂದಿನ ಊಳಿಗಮಾನ್ಯ ಪ್ರಭುಗಳ ಸಂತತಿಯನ್ನು ಗುರುತಿಸಿ ಇಂದು ಅವರಿಗೆ ಶಿಕ್ಷೆ ನೀಡುತ್ತೇವೆಯೇ? ಅಷ್ಟೇಕೆ, ಸುಮಾರು ನಾಲ್ಕು ನೂರು ವರ್ಷಗಳ ಕಾಲ ನಮ್ಮ ದೇಶವನ್ನು ಲೂಟಿಮಾಡಿ, ನಂತರ ದೇಶವನ್ನು ವಿಭಜಿಸಿ ತೊಲಗಿದ ಬ್ರಿಟಿಷರು ಎಸಗಿದ್ದ ತಪ್ಪುಗಳನ್ನು ಸರಿಪಡಿಸುವ ಕೆಲಸ ಮಾಡಹೊರಟಿದ್ದೇವೆಯೆ?



ಇನ್ನೊಂದು ವಿಪರ್ಯಾಸವನ್ನು ಗಮನಿಸೋಣ: ನಮ್ಮ ದೇಶವು ಗಣರಾಜ್ಯವಾಗಿ ಸಂವಿಧಾನವೊಂದನ್ನು ಅಂಗೀಕರಿಸಿದ ತರುವಾಯದಲ್ಲಿ ಅವಕಾಶ ವಂಚಿತರಿಗೆ ಸಮಾನಾವಕಾಶ ಮತ್ತು ಸಾಮಾಜಿಕ ನ್ಯಾಯ ಇನ್ನು ಮುಂದಾದರೂ ದೊರೆಯುವಂತಾಗಲೆಂಬ ದೃಷ್ಟಿಯಿಂದ ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿಯನ್ನು ಕಲ್ಪಿಸಲಾಯಿತು. ೧೯೭೦ರ ದಶಕದಲ್ಲಿ ಇದನ್ನು ತೀವ್ರವಾಗಿ ವಿರೋಧಿಸಿ ಚಳುವಳಿಯನ್ನು ಹಮ್ಮಿಕೊಳ್ಳಲಾಗಿತ್ತು. ಒಂದು ಆತ್ಮಾಹುತಿಯನ್ನು ಸಹ ಆಯೋಜಿಸಿಬಿಟ್ಟರು. ಅಂದಿನ ಚರ್ಚೆಯಲ್ಲಿ 'ಅವಕಾಶ ವಂಚಿತರು' ಎಂಬ ಮಾತು ಬಂದಾಗ ಮೀಸಲಾತಿ ವಿರೋಧಿಗಳ ವಾದ ಹೀಗಿತ್ತು: "ಎಂದೋ ವಂಚನೆ ಯಾಗಿದ್ದರೆ ಈಗೇಕೆ ಅದರ ಭಾರವನ್ನು ನಾವು ಹೊರಬೇಕು? ಅಂದು ಅವರಿಗೆ ಅವಕಾಶ ದೊರೆಯದಿದ್ದದಕ್ಕೆ ನಾವು ಬಾಧ್ಯರೆ?" ಈ ಮಾತನ್ನಾಡಿದವರೇ "ಇತಿಹಾಸದ ತಪ್ಪುಗಳನ್ನು ಸರಿಪಡಿಸಲು" ಮಸೀದಿಯನ್ನು ಉರುಳಿಸಿದ್ದು, ಕೋಮುಗಲಭೆಗಳನ್ನು ವ್ಯಾಪಕವಾಗಿ ಆಯೋಜಿಸಿದ್ದು. ಅಂದರೆ, ಸಾಮಾಜಿಕ ಸಾಮರಸ್ಯಕ್ಕೆ ಧಕ್ಕೆಯುಂಟುಮಾಡುವಂತಹ ಕ್ರಿಯೆಗಳು ಸದಾಕಾಲ ನಡೆಯುತ್ತಿವೆ. ಅದರ ನಿವಾರಣೆಯೊಂದು ಸವಾಲು.

"ರಾಷ್ಟ್ರೀಯತೆ"ಯ ಪರಿಕಲ್ಪನೆಯ ಸಂದರ್ಭದಲ್ಲಿ ಸಹ ಘರ್ಷಣೆಗಳು ನಡೆಯುತ್ತವೆ. ದೆಹಲಿಯ ಜವಾಹರಲಾಲ್ ನೆಹರು ವಿಶ್ವವಿದ್ಯಾನಿಲಯದ ಆವರಣದಲ್ಲಿ ಹಿಂದೊಮ್ಮೆ ಯುದ್ಧದಲ್ಲಿ ಶತ್ರುವಿನ ಟ್ಯಾಂಕ್‌ಗಳನ್ನು ವಶಪಡಿಸಿ ಕೊಂಡಿದ್ದೆವಲ್ಲಾ, ಅವನ್ನು ತಂದು ನಿಲ್ಲಿಸಲಾಗಿದೆ. ಪ್ರತಿನಿತ್ಯ ವಿದ್ಯಾರ್ಥಿಗಳು ಅವನ್ನು ನೋಡುತ್ತಾ ರಾಷ್ಟ್ರಪ್ರೇಮವನ್ನು ಹೆಚ್ಚಿಸಿಕೊಳ್ಳುತ್ತಾರೆಂಬ ನಿರೀಕ್ಷೆ ಇದೆ. ಸಂದಿಗ್ಧತೆ ಇರುವುದು ದೇಶಭಕ್ತಿಯ ಬಗೆಗಲ್ಲ, ಬದಲಾಗಿ ಯಾವುದು ದೇಶಭಕ್ತಿ ಎಂಬುದರ ಬಗೆಗೆ. ದೇಶದ ಜನರನ್ನು ಆದರಿಸದೆ ನಾವು ಅದೆಂತಹ ರಾಷ್ಟ್ರೀಯತೆಯನ್ನು ಪೋಷಿಸುತ್ತೇವೆ? ಬೇರೊಂದು ದೇಶವನ್ನು ಶತ್ರುವೆಂದು ಗುರುತಿಸದಿದ್ದರೆ ದೇಶಭಕ್ತಿ ಉಕ್ಕಲಾರದೇನು? "ನಾಗರಿಕ ಸಮಾಜದ ನಾವೆಲ್ಲರೂ ಸಮಾನರು" ಎಂಬ ಧೋರಣೆಯನ್ನು ವ್ಯಾಪಕವಾಗಿ ಹಬ್ಬಿಸಿ ರಾಷ್ಟ್ರೀಯತೆಯನ್ನು ಭವ್ಯವಾಗಿಸಲಾಗದೆ? ಜೊತೆಗೆ ನಮ್ಮ ಪಾರಂಪರಿಕ ಬಹುತ್ವವನ್ನು ಮಾನ್ಯ ಮಾಡಿದರೆ ರಾಷ್ಟ್ರೀಯತೆಯ ಅಡಿಪಾಯವು ಇನ್ನೂ ಹೆಚ್ಚು ಸುಭದ್ರವಾಗುತ್ತದೆ. ಸಮಾನತೆ – ಬಹುತ್ವ – ಅಭಿವೃದ್ಧಿ – ಎಲ್ಲರನ್ನೂ ಒಳಗೊಳ್ಳುವಿಕೆ, ಈ ನಾಲ್ಕು ರಾಷ್ಟ್ರೀಯತೆಗೆ ನಾಲ್ಕು ಸ್ತಂಭಗಳು. ಅವನ್ನು ತಳ್ಳಿಹಾಕಿ, ಮತಧಾರ್ಮಿಕ ಜಡ್ಡುತನವನ್ನು ಆಧರಿಸಿ ರಾಷ್ಟ್ರೀಯತೆಯನ್ನು ಬಲಗೊಳಿಸಹೊರಡುವುದು ಮೂರ್ಖತನದ ಪರಮಾವಧಿ ಮತ್ತು ವಿಚ್ಛಿದ್ರಕಾರಕ ಅನಿಷ್ಟ. ನಮಗೆ ವೈಚಾರಿಕ ನೆಲೆಯ ರಾಷ್ಟ್ರೀಯತೆಯ ಆಲಂಬನ ಸಾಧುವೇ ವಿನಾ ಭಾವೋದ್ರೇಕದ ರಾಷ್ಟ್ರೀಯತೆಯಲ್ಲ. ದೆಹಲಿಯ ಇತಿಹಾಸ ಪ್ರಾಧ್ಯಾಪಕ ಇರ್ಫಾನ್ ಹಬೀಬ್ ಕಳೆದ ವರ್ಷ "ರಾಷ್ಟ್ರೀಯತೆ" ಎಂಬ ಗ್ರಂಥವೊಂದನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಅದರಲ್ಲಿ ಬಂಕಿಂ ಚಂದ್ರರಿಂದ ಹಿಡಿದು ಇಂದಿನವರೆಗಿನ ಜನಪ್ರತಿನಿಧಿಗಳನೇಕರು ರಾಷ್ಟ್ರೀಯತೆಯನ್ನು ಕುರಿತು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಕ್ರೋಢೀಕರಿಸಲಾಗಿದೆ. ಆಚಾರ್ಯ ಪ್ರಫುಲ್ಲ ಚಂದ್ರ ರೇ, ರವೀಂದ್ರನಾಥ ಟಾಗೋರ್, ಸುಭಾಷ್ ಚಂದ್ರ ಬೋಸ್, ಭಗತ್ ಸಿಂಗ್, ಲಾಲಾ ಲಜಪತ ರಾಯ್, ಅಂಬೇಡ್ಕರ್, ಮುಂತಾದವರ ಚಿಂತನೆಗಳನ್ನು ಆ ಸಂಕಲನದಿಂದ ತಿಳಿಯಬಹುದು. ಒಬ್ಬೊಬ್ಬರೂ ದೇಶದ ಬಗ್ಗೆ ಕಾಳಜಿ ಹೊಂದಿದ್ದವರೇ, ಅವರಾರೂ ಭಾವೋದ್ರೇಕವನ್ನು ರಾಷ್ಟ್ರೀಯತೆಯ ಭದ್ರಕೋಟೆ

ಆಗಬಲ್ಲುದೆಂದು ಭ್ರಮಿಸಿಲ್ಲ. ಬರ್ಟ್ರಂಡ್ ರಸೆಲ್ ಬ್ರಿಟನ್ನಿನ ಶ್ರೇಷ್ಠ ತತ್ತ್ವಶಾಸ್ತ್ರಜ್ಞ; "ರಾಷ್ಟ್ರೀಯತೆಯೆಂಬುದು ಸಾಮೂಹಿಕ ಸನ್ನಿಗೆ ಇನ್ನೊಂದು ಹೆಸರು" ಎಂದು ಆತ ಉದ್ಗರಿಸಿದ್ದ. ಮೊದಲ ಮಹಾಯುದ್ಧದಲ್ಲಿ ತನ್ನ ದೇಶದ ಭಾಗವಹಿಸುವಿಕೆ ಯನ್ನು ತೀವ್ರವಾಗಿ ವಿರೋಧಿಸಿದ್ದಕ್ಕೆ ರಸೆಲ್ ಕಾರಾಗೃಹಕ್ಕೆ ತಳ್ಳಲ್ಪಟ್ಟಿದ್ದ. ಅವನ ರಾಷ್ಟ್ರಪ್ರೇಮವನ್ನು ಎಂದೂ, ಯಾರೂ, ಶಂಕಿಸಲಿಲ್ಲ. ಆ ರೀತಿಯ ವೈಚಾರಿಕತೆಯ ಬುನಾದಿಯು ರಾಷ್ಟ್ರೀಯತೆಗೆ ಬೇಕು.

ಈಗಂತೂ ಭಾಷಾ ರಾಷ್ಟ್ರೀಯತೆಯು ಭೂತದಂತೆ ಎದ್ದು ನಿಂತಿದೆ. ಬೇರೆಲ್ಲಾ ಭಾಷೆಗಳನ್ನು ಹೊಸಕಿಹಾಕಿ ಹಿಂದಿಯನ್ನು ಹೇರಿಕೊಳ್ಳುವುದೇ ಉನ್ನತ ರಾಷ್ಟ್ರೀಯತೆ ಎಂಬ ಅನ್ಯಾಕ್ರಮಣ ಶೀಲ ಭಾವನೆಯನ್ನು ಪೋಷಿಸಲಾಗುತ್ತಿದೆ. ಬಹುತ್ವವನ್ನು ಧಿಕ್ಕರಿಸುವ ಮನೋಜಾಡ್ಯ ಇದು. ಇತ್ತೀಚೆಗಷ್ಟೆ ಪಿ. ಎಲ್. ರಾವ್ ಎಂಬ ಬಹುಮುಖೀ ವ್ಯಕ್ತಿತ್ವದ ಹಿರಿಯರೊಬ್ಬರು ತಮ್ಮ ಆತ್ಮಕತೆಯನ್ನು ಪ್ರಕಟಿಸಿದ್ದಾರೆ. ಅವರಿಗೆ ೯೦ ವರ್ಷ ವಯಸ್ಸು. ನಮ್ಮ ದೇಶದ ಮೂಲೆಮೂಲೆಗಳಲ್ಲಿ ಅವರು ಇಂಜಿನಿಯರ್ ಆಗಿ ಕೆಲಸ ಮಾಡಿ ಬಂದಿದ್ದಾರೆ. ಕಾಶ್ಮೀರದ ಉರಿ ವಿಭಾಗದಲ್ಲಿ ವಿದ್ಯುಚ್ಛಕ್ತಿ ಕೇಂದ್ರವನ್ನು ಸ್ಥಾಪಿಸಲು ಅಲ್ಲೇ ಹಲವು ವರ್ಷಗಳಿದ್ದು ದುಡಿದಿದ್ದಾರೆ. ಸಾವಿನ ದವಡೆಯಿಂದ ಎರಡು – ಮೂರು ಬಾರಿ ಹೇಗೋ ಉಳಿದುಬಂದಿದ್ದಾರೆ. ಅವರ ಆತ್ಮಕಥನಕ್ಕೆ "ಎಲ್ಲಿಗೂ ಅಲ್ಲದ ಯಾತ್ರೆ" ಎಂಬ ಶೀರ್ಷಿಕೆ ನೀಡಿದ್ದಾರೆ. ಕಾಶ್ಮೀರದ ಉದ್ವಿಗ್ನ ವಾತಾವರಣದಲ್ಲಿ ಎಂಟು – ಹತ್ತು ವರ್ಷಗಳನ್ನು ಸವೆಸಿದ ರಾವ್ ಒಂದೆಡೆ ಹೇಳುತ್ತಾರೆ, "ನಮ್ಮ ಇಂದಿನ ಸಮಸ್ಯೆಯು ಹಿಂದುಗಳು – ಮುಸಲ್ಮಾನರು ಸದಾ ಪರಸ್ಪರ ಸಂಘರ್ಷದಿಂದಿರುವುದಲ್ಲ; ನಮ್ಮ ನಿಜವಾದ ಸಮಸ್ಯೆಯು ಅಭದ್ರತೆಯ ಭಯ ಮತ್ತು ಅನಾಥಪ್ರಜ್ಞೆ" ಎಂದು. ಪ್ರತ್ಯೇಕೀಕರಣಕ್ಕೆ ತೆತ್ತುಕೊಂಡು ಪ್ರಜ್ಞೆ ಮತ್ತು ರಾಷ್ಟ್ರೀಯತೆ ಎಂದಿಗೂ ಜೊತೆಯಾಗಿ ಹೆಜ್ಜೆ ಹಾಕಲಾರವು.




ಸವಾಲುಗಳ ಪೈಕಿ ಪ್ರಸ್ತುತ ಸಂದರ್ಭದಲ್ಲಿ ಮಹತ್ವದ ಸಂಗತಿಯೊಂದಿದೆ: ನಮ್ಮ ದೇಶದ ಶಾಸನ ಸಭೆ ಮತ್ತು ಲೋಕಸಭೆಗಳನ್ನು ಗಮನಿಸಿದರೆ ಕಣ್ಣು ಕುಕ್ಕುವಂತಹ ಕೇಡಿನ ಅಂಶವೊಂದು ಕಂಡುಬರುತ್ತದೆ. ಆ ಸಭೆಗಳಿಗೆ ಚುನಾಯಿತರಾಗಿ ಬಂದಿರುವವರ ಸರಾಸರಿ ಆಸ್ತಿ ೧೫೦ರಿಂದ ೨೦೦ ಕೋಟಿ ರೂಪಾಯಿಗಳಷ್ಟಿದೆ. ಇಷ್ಟು ಬೃಹತ್ತಾದ ಸಂಪತ್ತನ್ನುಳ್ಳವರು ನಮ್ಮ ಪ್ರತಿನಿಧಿಗಳು. ಜನಸಾಮಾನ್ಯರನ್ನು ಚುಡಾಯಿಸಲು ಅವರು ತಮ್ಮನ್ನು ತಾವು 'ಚೌಕೀದಾರರು' ಎಂದು ಬಣ್ಣಿಸಿಕೊಳ್ಳಲು ಅಡ್ಡಿಯಿಲ್ಲ. ಅವರ 'ಅಭಿವೃದ್ಧಿ' ಕಲ್ಪನೆ ಹೇಗಿದ್ದೀತು? ಯಾರ ಅಭಿವೃದ್ಧಿಯನ್ನವರು ಬಯಸುತ್ತಾರೆ ಮತ್ತು ಎಂತಹ ಆರ್ಥಿಕ – ಸಾಮಾಜಿಕ ನೀತಿಗಳನ್ನು ಅವರು ಬೆಂಬಲಿಸುತ್ತಾರೆ? ಅವರ ನೈತಿಕ ದೃಷ್ಟಿ ಮತ್ತು ಆದ್ಯತೆಗಳೇನಿರಬಹುದು? ಸಾರ್ವಜನಿಕ ಆಸ್ತಿಯನ್ನು ವಿಲೇವಾರಿ ಮಾಡಿ ಸಾಧ್ಯವಾದಷ್ಟನ್ನು ಅವರದನ್ನಾಗಿಸಿ ಕೊಳ್ಳಲು ತುದಿಗಾಲ ಮೇಲೆ ನಿಲ್ಲುವ ಮಂದಿ ಇವರು ಎನ್ನಬಹುದೆ? ನಮ್ಮ ರಾಜ್ಯವು ಭದ್ರಾವತಿ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಯ ಉದಾಹರಣೆಯನ್ನು ನೋಡಬಹುದು: ನಮ್ಮ ರಾಜ್ಯವು ಒಂದು ರೂಪಾಯಿಗೆ ಅದನ್ನು ಭಾರತೀಯ ಉಕ್ಕು ಪ್ರಾಧಿಕಾರಕ್ಕೆ ಬಿಟ್ಟುಕೊಟ್ಟಿತು. ಬಂಡವಾಳ ಹೂಡಿ ಕಾರ್ಖಾನೆಯನ್ನು ಆಧುನಿಕ ವಾಗಿಸುವ ಭರವಸೆ ನೀಡಲಾಗಿತ್ತು. ಈಗ ಅದನ್ನು ಒಂದು ಕಾಸಿಗೆ ಮಾರಿ ನೀರು ಕುಡಿಯುವ ಕಾಲ ಬಂದಿದೆ. ಇದರ ನೀತಿ ನಿರೂಪಕರು ಯಾರು? ಇಂತಹ ನೂರಾರು ದೃಷ್ಟಾಂತಗಳಿವೆ. ರಾಜ್ಯದ ಜನಪ್ರಿಯ ರಾಜಕಾರಣಿಯೆಂದು ಬಿಂಬಿಸಲಾದ ದಿವಂಗತ ಅನಂತಕುಮಾರ್ ಕೇಂದ್ರ ಸಚಿವರಾಗಿದ್ದಾಗ ಸಾರ್ವಜನಿಕ ವಲಯ ದಲ್ಲಿದ್ದ ಅಶೋಕ ಹೊಟೇಲ್‌ಗಳನ್ನು ಬಿಡಿಗಾಸಿಗೆ ಮಾರಿ ತಮ್ಮ ಸಂಪತ್ತು ಮತ್ತು ವರ್ಚಸ್ಸನ್ನು ಹಿಗ್ಗಿಸಿಕೊಂಡದ್ದು ಇತಿಹಾಸ. ಅವರ ಪ್ರತಿರೂಪಗಳು ಇಂದು ನೂರಾರಿವೆ.

ಜ಼ೆಕ್ ಗಣರಾಜ್ಯದ ತತ್ತ್ವಶಾಸ್ತ್ರಜ್ಞ ಜ಼ೇಜ಼ೆಕ್ ಜನಸಾಮಾನ್ಯರ ಸ್ಥಿತಿಯನ್ನು ವರ್ಣಿಸುವಾಗ ಅವರದು "ಅಸಹಾಯಕತೆಯ ಎದೆಗಾರಿಕೆ" ಎಂದಿದ್ದ. ಅಸಹಾಯಕತೆಗೆ ಬಲಿಯಾದವರು ಕಡೆಗೆ ಕೆಚ್ಚನ್ನು ಪ್ರದರ್ಶಿಸಿ ಮುನ್ನಡೆಯುವುದು ಅನಿವಾರ್ಯವೆಂಬುದು ಅವನ ಇಂಗಿತ. ಬಳ್ಳಾರಿ ಜಿಲ್ಲೆಯ ರೈತರು ಇತ್ತೀಚೆಗೆ ತಮ್ಮ ಮಾತಿನಲ್ಲಿ ಆ ಕೆಚ್ಚನ್ನು ಪ್ರದರ್ಶಿಸಿದ್ದಾರೆ. ಅಪ್ರಕಟಿತ ಒಳಸಂಚಿನ ಪರಿಣಾಮವಾಗಿ ಜಿಂದಾಲ್ ಕಂಪನಿಗೆ ಖನಿಜಯುಕ್ತವಾದ ನೂರಾರು ಎಕರೆ ಸರ್ಕಾರಿ ಜಮೀನನ್ನು ಎಕರೆಗೆ ೧.೩ ಲಕ್ಷ ರೂಪಾಯಿಯಂತೆ ಹಸ್ತಾಂತರಿಸುವ ಉಪಕ್ರಮಕ್ಕೆ ಸಿದ್ಧತೆ ನಡೆದಿದೆ. ಅಲ್ಲಿಯ ರೈತರು ಹೇಳಿದರು: "ನಮಗೆ ನೂರಾರು ಎಕರೆ ಸರ್ಕಾರಿ ಜಮೀನು ಬೇಡ, ಜಿಂದಾಲ್‌ಗೆ ನೀಡುವ ಬೆಲೆಗೆ ನಮಗೆ ತಲಾ ಮೂರು ಎಕರೆ ಜಮೀನು ಕೊಡಿ." ಕೋಟಿಗಟ್ಟಲೆ ಸಂಪತ್ತಿನ ಒಡೆಯರು ಈವರೆಗೆ ಅದಕ್ಕೆ ಸ್ಪಂದಿಸಿಲ್ಲ, ಸ್ಪಂದಿಸುವುದೂ ಇಲ್ಲ. ಸಾರ್ವಜನಿಕ ಆಸ್ತಿಯನ್ನು 'ಅಭಿವೃದ್ಧಿ'ಯ ಹೆಸರಿನಲ್ಲಿ ಖಾಸಗಿಯವರಿಗೆ ದಾನ ಮಾಡಲು ಕೇಂದ್ರ ಸರ್ಕಾರವು ಒಂದು ನೀತಿಯನ್ನು ಪ್ರಕಟಿಸಿದೆ. ಅದು ಇಂದಿನ ವೈಭವೋಪೇತ ಭಾರತೀಯ ಸಂಸ್ಕೃತಿ!

ನಮ್ಮ ಘೋಷಿತ ಯೋಜನೆಗಳ ಅನುಷ್ಠಾನದ ಫಲ ಅಲ್ಲಿಗೆ ಬಂದುನಿಂತಿದೆ. ನಿರುದ್ಯೋಗಿಗಳ ಸೈನ್ಯವು ಹಿಂದೆಂದೂ ಇಲ್ಲದಷ್ಟು ಪ್ರಮಾಣವನ್ನು ಮುಟ್ಟಿದೆ. ಆ ಸೈನ್ಯಕ್ಕೆ ಮತ್ತು ಬರಿಸುವ ಮತೀಯ ವಿಷವನ್ನು ಉಣಿಸಲಾಗಿದೆ. ಕಾರ್ಖಾನೆಗಳನ್ನು ಮುಚ್ಚಿದ ನಂತರ ಅವರಿಗೆ ಉಳಿದಿರುವ ಉದ್ಯೋಗ ಗೋರಕ್ಷಣೆ, ಮುಂತಾದವು. ಇಂಗ್ಲಿಷಿನಲ್ಲಿ ಅವರನ್ನು 'ಲಂಪನ್ ಎಲಿಮೆಂಟ್ಸ್' ಎಂದು ಕರೆಯುವುದು ರೂಢಿಯಾಗಿದೆ. ಮೂಲತಃ ಅದು ಬೈಗುಳ ಪದವಲ್ಲ, 'ನಾಜೂಕಿಲ್ಲ ದವರು' ಎಂದಷ್ಟೇ ಅದರರ್ಥ. ಆದರೆ ಕುಬುದ್ಧಿಯ ರಾಜಕಾರಣಿಗಳ ಹಾಗೂ ಮತೀಯ ಹಗೆತನವನ್ನು ಬೋಧಿಸುವ ಸಂಸ್ಥೆಗಳ ಕಾಲಾಳುಗಳಾಗಿ ಪರಿವರ್ತನೆ ಹೊಂದುವ ಸಾಧ್ಯತೆ ಅವರಿಗೆ ತೆರೆದಿಡಲಾಗಿದೆ. ನಮ್ಮ ಯುವಕ – ಯುವತಿಯರಿಗೆ ನೀಡಬೇಕಾದ ಉಡುಗೊರೆ ಇದೇ ಏನು? ಅವರಲ್ಲಿ ಅಂತಸ್ಥವಾಗಿರುವ ಆಕಾಂಕ್ಷೆ ಮತ್ತು ಕ್ರಿಯಾಶಕ್ತಿಯನ್ನು ಚಿವುಟಿಹಾಕಿ ಅವರ ಮಿದುಳಿಗೆ ವಿಷ ಮತ್ತು ಹಿಂಸಾಪ್ರವೃತ್ತಿಯ ಭಾವನೆಗಳನ್ನು ತುಂಬಲಾಗಿದೆ ಮತ್ತು ತುಂಬಲಾಗುತ್ತಿದೆ. ದೇಶವು ಘೋಷಿಸಿಕೊಳ್ಳುವ ಎಲ್ಲ ಆಶಯಗಳ ವಿರುದ್ಧ ಧ್ರುವದತ್ತ ಚಲಿಸಲು ಇದು ಪ್ರೇರಕ ಶಕ್ತಿಯಾಗುತ್ತದೆ. ಸವಾಲು ಮತ್ತು ಸಾಧ್ಯತೆಗಳೆರಡೂ ಇದರಲ್ಲಿ ಅಡಕಗೊಂಡಿವೆ; ಅಗತ್ಯವಾಗಿರುವುದು ಸೃಷ್ಟ್ಯಾತ್ಮಕ ಮಧ್ಯಪ್ರವೇಶ, ಅಷ್ಟೆ. ಅದು ಜರೂರಾಗಿ ನಡೆಯಲೇಬೇಕಾದ ಪ್ರಕ್ರಿಯೆ ಮತ್ತು ಅದರಲ್ಲಿ ನಾವೆಲ್ಲಾ ಭಾಗಿಗಳು.

೧೯ನೆಯ ಶತಮಾನದ ರಾಬರ್ಟ್ ಬ್ರೌನಿಂಗ್ ಎಂಬ ಆಂಗ್ಲಕವಿ ತನ್ನ ಕವಿತೆ ಯೊಂದರಲ್ಲಿ ಉತ್ಕಟವಾದ ಆಶಾಭಾವನೆಯನ್ನು ಸಾಂದ್ರವಾಗಿ ಪ್ರತಿಫಲಿಸಿದ್ದಾನೆ:

ಅತಿ ಶ್ರೇಷ್ಠವಾದ್ದೊಂದು ಇನ್ನೂ ಆಗಬೇಕಿದೆ:
ಕೊನೆಯದದು;
ಮೊದಲದನ್ನು ಮಾಡಿದ್ದು ಕೊನೆಯದನ್ನು ಪಡೆಯಲೋಸುಗ.

ಈ ಸಾಲುಗಳ ಹಿನ್ನೆಲೆಯಲ್ಲಿ ಕ್ರೈಸ್ತಮತದ ಒಂದು ಪರಿಕಲ್ಪನೆಯುಂಟು. ಮಾನವನಿಗೆ ಮಹತ್ವಾಕಾಂಕ್ಷೆಯೆಂದರೆ ಅಂತಿಮವಾದ ಬಿಡುಗಡೆ ಅಥವಾ ಮುಕ್ತಿಯನ್ನು ಪಡೆಯುವುದು. ಬಿಡುಗಡೆಯನ್ನು ಹೊಂದದಿದ್ದರೆ ಅವನ ಪಾಲಿಗೆ ಅನಿವಾರ್ಯವಾಗಿ ದಕ್ಕುವುದು ಪಾಪಫಲವಷ್ಟೆ. ನಮ್ಮ ದೇಶದ ನಾವು, ಅಂದರೆ ಜನಸಾಮಾನ್ಯರು, ಯಾವ ಪಾಪಕೃತ್ಯಗಳನ್ನೂ ಎಸಗಿಲ್ಲ; ಆದರೂ ಬಹು ಹೆಚ್ಚಿನ ಸಂಖ್ಯೆಯ ನಾವು ಅಂಚಿಗೆ ತಳ್ಳಲ್ಪಟ್ಟಿದ್ದೇವೆ, ನಿರ್ಗತಿಕರಂತಾಗಿದ್ದೇವೆ. ಆದರೆ ಬಿಡುಗಡೆಯು ನಮ್ಮ ಆಕಾಂಕ್ಷೆ ಮತ್ತು ಹಕ್ಕು. ಅದನ್ನು ಪಡೆಯುವುದು ನಮ್ಮೆದುರಿನ ಸವಾಲು. ಕೆಸರಿನಿಂದ ನಮ್ಮನ್ನು ನಾವು ಬಿಡುಗಡೆಗೊಳಿಸಿಕೊಳ್ಳುವ ಸಾಧ್ಯತೆ ಸಾಕಷ್ಟಿದೆ. ನಾವು ನೀತಿ ನಿರೂಪಕರಾಗಬೇಕು, ನೀತಿಯನ್ನು ಅನುಷ್ಠಾನಕ್ಕೆ ತರಲು ಸಾಧನಗಳಾಗಬೇಕು. ಅದೇ ನಮಗೆ ಬೆಳಕಿನ ಹಾದಿ.

*(ಬೆಂಗಳೂರು ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗವು ೧೪–೬–೨೦೧೯ರಂದು ಆಯೋಜಿಸಿದ್ದ "ಸಮಕಾಲೀನ ಭಾರತ : ಸವಾಲುಗಳು ಮತ್ತು ಸಾಧ್ಯತೆಗಳು" ಎಂಬ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ನೀಡಲಾಗಿದ್ದ ಉದ್ಘಾಟನಾ ಉಪನ್ಯಾಸವನ್ನು ಆಧರಿಸಿದ್ದು.)*

**ಡಾ॥ ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೮೫

# ಸ್ವಾತಂತ್ರ್ಯೋತ್ತರ ಭಾರತದ ಅಭಿವೃದ್ಧಿ ಪ್ರಗಾಥೆ: ೧೯೫೦? ಅಥವಾ ೨೦೧೪?

ನಮ್ಮ ದೇಶದಲ್ಲಿ ಚರಿತ್ರೆಯನ್ನು ತಿದ್ದುವ ಕೆಲಸ ನಡೆಯುತ್ತಿದೆ; ಶಾಲಾ ಪಠ್ಯಗಳನ್ನು ತಿದ್ದುವ ಕಾರ್ಯವನ್ನು ಭರದಿಂದ ಕೈಗೊಳ್ಳಲಾಗಿದೆ; ಶಿಕ್ಷಣದ ಕೇಸರೀಕರಣವು ಇಂದು ಆಳುವ ವರ್ಗಕ್ಕೆ ಒಂದು ವ್ಯಸನವಾಗಿ ಬಿಟ್ಟಿದೆ; ಆಳುವ ವರ್ಗಕ್ಕೆ ಅಪಥ್ಯವಾದಾಗ ಅಧಿಕೃತ ವರದಿಗಳನ್ನು, ಸಾಂಖ್ಯಿಕ ಸಂಸ್ಥೆಗಳ ಅಧಿಕೃತ ವಿವರಗಳನ್ನು ತಡೆಹಿಡಿಯುವ ಹೊಸಪರ್ವವೊಂದನ್ನು ಸರ್ಕಾರವು ಆರಂಭಿಸಿದೆ. ಈ ಬಗೆಯ ಅಸಂಬದ್ಧ ಕ್ರಮಗಳಿಗೆ ರೋಸಿಹೋಗಿ ವೃತ್ತಿಪರ ಅರ್ಥಶಾಸ್ತ್ರಜ್ಞರೆಲ್ಲ ಸಾಲುಸಾಲಾಗಿ ಸರ್ಕಾರದ ಸಲಹೆಗಾರ ಸ್ಥಾನಗಳಿಗೆ ಮತ್ತು ವಿವಿಧ ಮಂಡಳಿಗಳ ಸದಸ್ಯತ್ವಕ್ಕೆ ರಾಜೀನಾಮೆ ನೀಡಿ ಹೊರ ನಡೆಯುತ್ತಿದ್ದಾರೆ. ಆದರೆ ಸರ್ಕಾರಿ 'ಅರ್ಥಶಾಸ್ತ್ರಜ್ಞರು' ಇಂತಹ ಸಮಯಕ್ಕೆ ಕಾದಿದ್ದು ಅಧಿಕಾರ ವಹಿಸಿ ಕೊಳ್ಳುತ್ತಿದ್ದಾರೆ (ನೀತಿ ಆಯೋಗದ ರಾಜೀವ್ ಕುಮಾರ್, ಡೇರಿಕ್ ಒಬೆರಾಯ್ ಅಂಥವರು ಇರುತ್ತಾರೆ ತಾನೆ!). ಇದೀಗ ೧೯೫೦ರ ನಂತರದ ೬–೭ ದಶಕದ ಭಾರತದ ಅಭಿವೃದ್ಧಿ ಕಥನವನ್ನೇ ಬದಲಾಯಿಸುವ ಹುಚ್ಚುತನಕ್ಕೆ ಕೇಂದ್ರ ಸರ್ಕಾರ ಮುಂದಾಗಿದೆ. ಎಪ್ಪತ್ತು ವರ್ಷಗಳಿಂದ (೧೯೪೭–೨೦೧೭) ಹಿಂದಿನ ಸರ್ಕಾರಗಳು ಏನು ಮಾಡಿದ್ದಾವೆ ಎಂದು ಪ್ರಧಾನ ಮಂತ್ರಿಯಿಂದ ಹಿಡಿದು ಆಳುವ ಪಕ್ಷದ ಸಾಮಾನ್ಯ ಕಾರ್ಯಕರ್ತನವರೆಗೆ ಎಲ್ಲರೂ ಕೇಳುತ್ತಿದ್ದಾರೆ. ಆಳುವ ವರ್ಗದ ವಕ್ತಾರರ, 'ಸರ್ಕಾರಿ' ಅರ್ಥಶಾಸ್ತ್ರಜ್ಞರ, ವಂದಿಮಾಗಧರ ಪ್ರಕಾರ ಭಾರತದ ಅಭಿವೃದ್ಧಿ ಆರಂಭವಾದುದೇ '೨೦೧೪'ರ ನರೇಂದ್ರ ಮೋದಿ ಪರ್ವದಿಂದ ಎಂಬ ಹೊಸ ಅಭಿವೃದ್ಧಿ ಕಥನವನ್ನು ಕಟ್ಟುವ ಕೆಲಸ ಆರಂಭವಾಗಿದೆ. ಎಪ್ಪತ್ತು ವರ್ಷಗಳಿಂದ ಅಭಿವೃದ್ಧಿಗೆ ಸಂಬಂಧಿಸಿದಂತೆ ಏನೇನೂ ಭಾರತದಲ್ಲಿ ನಡೆದಿಲ್ಲ ಎನ್ನುವ ಅರ್ಥ ಬರುವ ರೀತಿಯಲ್ಲಿ ಜವಾಬ್ದಾರಿ ಸ್ಥಾನದಲ್ಲಿರುವ ಆಳುವ ಪಕ್ಷದ ಸದಸ್ಯರು ಪ್ರಶ್ನೆ ಮಾಡುತ್ತಿದ್ದಾರೆ. ಇದನ್ನು ಹುಚ್ಚುತನ, ಕುಚೋದ್ಯ ಮತ್ತು ಸರ್ವಾಧಿಕಾರಿ ಧೋರಣೆಯ ಅಭಿವ್ಯಕ್ತಿ ಎನ್ನದೆ ವಿಧಿಯಿಲ್ಲ. ಪ್ರಸ್ತುತ ಪ್ರಬಂಧದಲ್ಲಿ ನಿಜಕ್ಕೂ ಇವರು ಹೇಳುವಂತೆ ಭಾರತದ ಅಭಿವೃದ್ಧಿಯ ಕಥನ '೨೦೧೪'ರಲ್ಲಿ ಆರಂಭವಾಯಿತೇ? ಸ್ವಾತಂತ್ರ್ಯೋತ್ತರ ಭಾರತದಲ್ಲಿ ಕಳೆದ ೭೦ ವರ್ಷಗಳಲ್ಲಿ ಅಭಿವೃದ್ಧಿ ಇಲ್ಲಿ ನಡೆದೇ ಇಲ್ಲವೇ? ನಿಜಕ್ಕೂ ೧೯೫೦ರಿಂದ ೨೦೧೪ರವರೆಗೆ ನಮ್ಮ ಆರ್ಥಿಕತೆಯಲ್ಲಿ ನಡೆದ ಜನತಾಂತ್ರಿಕ–ಸಾಮಾಜಿಕ ಅಭಿವೃದ್ಧಿ ಕಥನದ ನಿಜ ಚಿತ್ರವೇನು? 'ನೆಹರೂ ಮಾದರಿ'ಯ ಬಗೆಗಿನ ಪರಿವಾರದ ಅಸಹ್ಯಕಾರಿ ಭಿನ್ನಮತವನ್ನು ಸಾಧಿಸುವ ಉದ್ದೇಶದಿಂದ ಹೀಗೆ 'ನೆಹರೂ' ಪ್ರಣೀತ

ಡಾ॥ ಟಿ. ಆರ್. ಚಂದ್ರಶೇಖರ

ಅಭಿವೃದ್ಧಿ ಕಥನವನ್ನು ತಿದ್ದಲಾಗುತ್ತಿದೆಯೇ? ಸ್ವಾತಂತ್ರ್ಯೋತ್ತರ ಭಾರತದ ಮಹತ್ತರ ಕೊಡುಗೆ ಯಾದ ಡಾ॥ ಬಿ. ಆರ್. ಅಂಬೇಡ್ಕರ್ ಪ್ರಣೀತ ಸಂವಿಧಾನವೂ ಇವರ ತಿರಸ್ಕಾರಕ್ಕೆ ಒಳಗಾಗಿರುವ ಇಂದಿನ ಕಾಲದಲ್ಲಿ ನಾವು ಬದುಕುತ್ತಿದ್ದೇವೆ. ಈ ಬಗೆಯ ಪ್ರಶ್ನೆಗಳು, ಧೋರಣೆಗಳು, ಅನುಮಾನಗಳು ಇಂದು ನಮ್ಮನ್ನು ಕಾಡುತ್ತಿವೆ. ಈ ಬಗ್ಗೆ ಕೆಲವು ಸಂಗತಿಗಳನ್ನು ಚರ್ಚಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಪ್ರಬಂಧದ ಮೊದಲನೆಯ ಭಾಗದಲ್ಲಿ ನೆಹರೂ ಯುಗದ ಅಭಿವೃದ್ಧಿ ಪರ್ವದ ವಿಶಿಷ್ಟತೆಗಳನ್ನು ತುಲನಾತ್ಮಕವಾಗಿ ಗುರುತಿಸಲು ಪ್ರಯತ್ನಿಸಲಾಗಿದೆ. ಎರಡನೆಯ ಭಾಗದಲ್ಲಿ ಸ್ವತಂತ್ರ ಭಾರತದ ಆಚಾರ್ಯಸದೃಶ ಸಾಧನೆಯಾದ 'ನಮ್ಮ ಸಂವಿಧಾನ'ದ ಹೆಗ್ಗುರುತುಗಳನ್ನು ದಾಖಲಿಸಲಾಗಿದೆ. ಮೂರನೆಯ ಭಾಗದಲ್ಲಿ ೨೦೧೪ರ ಪೂರ್ವದಲ್ಲಿ ಲಿಂಗ ಸಮಾನತೆಯ ಸ್ಥಿತಿಗತಿ ಮತ್ತು ನಂತರದ ಮಹಿಳಾ ವಿರೋಧಿ ಪ್ರಣಾಳಿಕೆ ನಡುವಿನ ಕರಾಳ ಭಿನ್ನತೆಯನ್ನು ಅನಾವರಣ ಮಾಡಲಾಗಿದೆ. ಭಾಗ ನಾಲ್ಕರಲ್ಲಿ ಮಾನವ ಅಭಿವೃದ್ಧಿಯಲ್ಲಿ ಭಾರತ ಸಾಧಿಸಿಕೊಂಡಿರುವ ಸಿದ್ಧಿಯನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಕೊನೆಯಲ್ಲಿ ಇಂದು ಅಭಿವೃದ್ಧಿ ಎನ್ನುವುದು ಹೇಗೆ 'ವರಮಾನ ವ್ಯಸನ'ಕ್ಕೆ ಒಳಗಾಗಿದೆ ಮತ್ತು ಜನರ ಬದುಕು–ಬವಣೆ ಎರಡನೆಯ ಸ್ಥಾನಕ್ಕೆ ನೂಕಲ್ಪಟ್ಟು ಜಾನುವಾರುಗಳು, ಜಾನುವಾರು ಕಾಲಾಳುಗಳು, ಧಾರ್ಮಿಕ ಘೋಷಣೆಗಳು, 'ನಾವು – ಅವರು' ಎಂಬ ನಾಗರಿಕರ ನಡುವಿನ ಕೋಮುವಾದಿ ಬಿರುಕು ಮುಂತಾದ ಅಮಾನವೀಯ ಸಂಗತಿಗಳು ೨೦೧೪ರ ನಂತರದ ಅಭಿವೃದ್ಧಿಯ ಅಜೆಂಡಾವನ್ನು ತುಂಬಿಕೊಂಡಿರುವ ಕ್ರಮವನ್ನು ಸ್ಥೂಲವಾಗಿ ಚರ್ಚಿಸಲಾಗಿದೆ.

**ಭಾಗ ೧**

**ನೆಹರು ಮಾದರಿ ಅಭಿವೃದ್ಧಿ ಪರ್ವ : ೧೯೫೦–೨೦೧೪**

ಒಂದು ಮಾತನ್ನು ಮೊದಲೇ ಸ್ಪಷ್ಟಪಡಿಸಿ ಕೊಳ್ಳುವುದು ಅಗತ್ಯ. ಇಂದು ನಮ್ಮ ಆರ್ಥಿಕತೆಯು ಸಮೃದ್ಧತೆಯತ್ತ ನಡೆದಿದ್ದರೆ, ವಿಜ್ಞಾನ–ತಂತ್ರಜ್ಞಾನ ಕ್ಷೇತ್ರಗಳಲ್ಲಿ ಉನ್ನತವಾದುದನ್ನು ಸಾಧಿಸಿದ್ದರೆ, ಹಸಿರು ಕ್ರಾಂತಿ, ಕ್ಷೀರಕ್ರಾಂತಿ, ಮಾಹಿತಿ ತಂತ್ರಜ್ಞಾನ ಕ್ರಾಂತಿ ನಡೆದಿದ್ದರೆ ಅದರ ಕೀರ್ತಿಯು ೧೯೫೦–೬೦ರ ದಶಕಗಳಲ್ಲಿ ನೆಹರೂ ನೇತೃತ್ವದಲ್ಲಿ ಕಟ್ಟಿದ ಬೃಹತ್ ಮೂಲಭೂತ ಸೌಲಭ್ಯಗಳ ಭದ್ರವಾದ ಅಡಿಪಾಯಕ್ಕೆ ಸಲ್ಲಬೇಕು. ಅವು ಉದ್ದಿಮೆಗಳಿರಬಹುದು, ಶೈಕ್ಷಣಿಕ ಸಂಸ್ಥೆಗಳಿರಬಹುದು, ಶಸ್ತ್ರಾಸ್ತ್ರ ಕಾರ್ಖಾನೆಗಳಿರ ಬಹುದು, ನೀರಾವರಿ ಯೋಜನೆಗಳಿರಬಹುದು,

ರಸ್ತೆ–ರೈಲು ಸಾರಿಗೆ ಜಾಲವಿರಬಹುದು – ಹೀಗೆ ನೂರಾರು ರೀತಿಯಲ್ಲಿ ಆರ್ಥಿಕತೆಗೆ ಭದ್ರವಾದ ಅಡಿಪಾಯವನ್ನು ನೆಹರು ಯುಗದಲ್ಲಿ ಸರ್ಕಾರಗಳು ನಿರ್ಮಿಸಿದವು. ಆ ಅಡಿಪಾಯದ ಲಾಭವನ್ನು ಇಂದು ಭಾರತ ಅನುಭವಿಸುತ್ತಿದೆ. ಭಾರತದ ೨೦೧೪ಕ್ಕೆ ಪೂರ್ವದಲ್ಲಿನ ಅಭಿವೃದ್ಧಿಯ ಅಡಿಪಾಯವು ನೆಹರೂ ಮತ್ತು ಅವರ ಸಮಕಾಲೀನರು ರೂಪಿಸಿದ್ದ ವೈಜ್ಞಾನಿಕ–ವೈಚಾರಿಕ ನೆಲೆಗಟ್ಟಿನ ಮೇಲೆ ನಿಂತಿತ್ತು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ನೆಹರೂ ಯುಗವು ಜನತೆಯಲ್ಲಿ 'ವೈಜ್ಞಾನಿಕ ಮನೋಭಾವ'ವನ್ನು ತುಂಬಿತ್ತು. ಈ ದಿಶೆಯಲ್ಲಿ ಭಾರತವು ವೈಜ್ಞಾನಿಕ ಕ್ಷೇತ್ರದಲ್ಲಿ ಯಾವುದೇ ರಾಷ್ಟ್ರಕ್ಕೆ ಕಡಿಮೆಯಿಲ್ಲದಂತೆ ಸಾಧನೆ ಮಾಡಿ ಇಂದು ಜಗತ್ತಿನ ರಾಷ್ಟ್ರಗಳ ಪಟ್ಟಿಯಲ್ಲಿ ಮುಂಚೂಣಿಯಲ್ಲಿ ನಿಂತಿದೆ. ಆದರೆ '೨೦೧೪ರ ನಂತರ ಅಭಿವೃದ್ಧಿ ಆರಂಭವಾಗಿದೆ' ಎನ್ನುವವರು ಇಂದು ವಿಜ್ಞಾನದ ಬಗ್ಗೆ ಮೂರ್ಖತನದ ಮಾತುಗಳನ್ನಾಡುತ್ತಿದ್ದಾರೆ. ಸಂಪ್ರದಾಯವನ್ನು ವೈಭವೀಕರಿಸುವ ಈ ಮಂದಿ ಮೌಢ್ಯವನ್ನು ಸಮಾಜದಲ್ಲಿ ಹರಡುತ್ತಿದ್ದಾರೆ.

### 'ನೆಹರೂ ಮಾದರಿ – ನೆಹರೂ ಯುಗ'

ಈ ನುಡಿಗಳನ್ನು ಇಲ್ಲಿ ಜವಹರಲಾಲ್ ನೆಹರೂ ಅವರಿಗೆ ಮಾತ್ರ ಸಂಬಂಧಿಸಿದಂತೆ ಬಳಸುತ್ತಿಲ್ಲ. ಹಾಗೆ ಬಳಸುವುದು ತಪ್ಪು. ಇದನ್ನು ನೆಹರೂ ಅವರಲ್ಲದೆ ಅವರ ಸಮಕಾಲೀನರಾದ ಇತರೇ ಅನೇಕ ರಾಜಕೀಯ ಮುತ್ಸದ್ದಿಗಳ, ಚಿಂತಕರ, ವಿಜ್ಞಾನಿಗಳ ಒಟ್ಟು ವಿಚಾರ ಪ್ರಣಾಳಿಕೆಗೆ ಸಂಬಂಧಿಸಿದಂತೆ ಬಳಸುವುದು ಅಪೇಕ್ಷಣೀಯ. ಮಹಾತ್ಮ ಗಾಂಧಿ, ರಾಮಮನೋಹರ ಲೋಹಿಯಾ, ಚಕ್ರವರ್ತಿ ರಾಜಗೋಪಾಲಾಚಾರಿ, ಕಾಮರಾಜ್, ಇ. ಎಂ. ಎಸ್. ನಂಬೂದರಿಪಾಡ್, ಪಿ. ಸಿ. ಜೋಷಿ, ಅಜಯ್ ಘೋಷ್, ಮಹಾಲನೋಬಿಸ್, ಸಾರಾಭಾಯ್, ಕಮಲಾದೇವಿ ಚಟ್ಟೋಪಾಧ್ಯಾಯ, ಬಿಜು ಪಟ್ನಾಯಕ್, ಡಾ॥ ಎಸ್. ರಾಧಾಕೃಷ್ಣನ್, ಎಸ್. ನಿಜಲಿಂಗಪ್ಪ, ಮಹಮದ್ ಹಿದಾಯುತುಲ್ಲಾ, ಎಂ. ಸಿ. ಚಾಗಲ, ಜಯಪ್ರಕಾಶ್ ನಾರಾಯಣ್, ಡಾ॥ ಬಿ. ಆರ್. ಅಂಬೇಡ್ಕರ್, ಇಂದಿರಾಗಾಂಧಿ, ಜಗಜೀವನ್‌ರಾಮ್ ಮುಂತಾದವರ ಒಟ್ಟು ವಿಚಾರ ಪ್ರಣಾಳಿಕೆಯನ್ನು ಇಲ್ಲಿ 'ನೆಹರೂ ಮಾದರಿ'-'ನೆಹರೂ ಯುಗ' ಎಂದು ಕರೆಯಲಾಗಿದೆ. ಇವರೆಲ್ಲರೂ ನೆಹರೂವಿನಂತೆ 'ಆಧುನಿಕತೆ'ಯ ಹರಿಕಾರರು. ನೆಹರೂ ಯುಗ ಎನ್ನುವುದು ಅವರ ಸಾವಿನಲ್ಲಿ ಕೊನೆಗೊಳ್ಳುವುದಿಲ್ಲ. ಅದು ೧೯೫೦ರಿಂದ ೨೦೧೪ರವರೆಗೆ ಹರಡಿಕೊಂಡಿದೆ.

ಯಾರು ಏನೇ ಟೀಕಿಸಲಿ–ಕುಹಕದ ಮಾತಾಡಲಿ–ಅಣಕವಾಡಲಿ ಆಧುನಿಕ ಭಾರತದ ರೂವಾರಿ ನೆಹರು. ಉದ್ದಿಮೆಗಳನ್ನು, ನೀರಾವರಿ ಯೋಜನೆಗಳನ್ನು 'ಆಧುನಿಕ ದೇವಾಲಯಗಳು' ಎಂದು ಅವರು ಬಣ್ಣಿಸಿದ್ದರು. ಇಂದು ೨೦೧೪ರ ನಂತರ ಆಳುವ ವರ್ಗಕ್ಕೆ ದೇವಾಲಯಗಳ ನಿರ್ಮಾಣ–ಅವುಗಳಿಗೆ ಭೇಟಿ ನೀಡುವುದು, ಗಂಗೆಗೆ ಆರತಿ ಬೆಳಗುವುದು ಅವೇ ಅಭಿವೃದ್ಧಿಯಾಗಿರುವಂತೆ ಕಾಣುತ್ತದೆ. ನೆಹರೂ ಪರ್ವದಲ್ಲಿ ಅಭಿವೃದ್ಧಿಯ ಆರಾಧನೆ ನಡೆದಿದ್ದರೆ ಇಂದು ೨೦೧೪ರ ನಂತರ ಗುಡಿ ಸಂಸ್ಕೃತಿಯ ವಿಜೃಂಭಣೆಯು ನಡೆದಿದೆ. ಹಾಗಾದರೆ ಭಾರತದಲ್ಲಿ ಅಭಿವೃದ್ಧಿಯು ೧೯೫೦ರಿಂದ ಆರಂಭವಾಯಿತೋ ಅಥವಾ ೨೦೧೪ರಿಂದ ಆರಂಭವಾಯಿತೋ? ವಾಸ್ತವವಾಗಿ ಇಂದು ಅಭಿವೃದ್ಧಿಯು ಮೂಲೆಗುಂಪಾಗಿ ಭಜನೆ, ಯಜ್ಞ–ಯಾಗ, ಕೈ–ಮೈ ಕಸರತ್ತು, ಭೀಷಣ ಭಾಷಣಗಳು, ಕಡಿ–ಬಡಿ, ಕೊಲ್ಲು ಎಂಬ ಘೋಷಣೆಗಳು ತಡೆಬಿಡೆಯಿಲ್ಲದೆ ನಡೆಯುತ್ತಿವೆ. ನೆಹರೂ ಯುಗದಲ್ಲಿ ಸಮಾನತೆ ಆಧಾರದಲ್ಲಿ ಆರ್ಥಿಕತೆಯನ್ನು ಕಟ್ಟುವ ಕೆಲಸ ನಡೆಯಿತು. ಇಂದು ಅಸಮಾನತೆಯು ಬ್ರಹ್ಮರಾಕ್ಷಸನ ರೂಪದಲ್ಲಿ ಬೆಳೆಯುತ್ತಿದೆ.

### ಭಾರತದಲ್ಲಿ ಬ್ರಹ್ಮರಾಕ್ಷಸ ಸ್ವರೂಪಿ ಆರ್ಥಿಕ ಅಸಮಾನತೆ

ಇಂಗ್ಲೆಂಡ್ ಮೂಲದ ಆಕ್ಸ್‌ಫಾಮ್ ಸಂಸ್ಥೆಯ ೨೦೧೮ರ ಭಾರತದಲ್ಲಿ ಸಂಪತ್ತಿನ ಬೆಳವಣಿಗೆ ವರದಿಯಲ್ಲಿ ಆರ್ಥಿಕ ಅಸಮಾನತೆಯು ಯಾವ ಪ್ರಮಾಣದಲ್ಲಿ ಬೆಳೆಯುತ್ತಿದೆ ಎಂಬುದನ್ನು ಅನಾವರಣಗೊಳಿಸಲಾಗಿದೆ.

- ಭಾರತದಲ್ಲಿ ೨೦೧೭ರಲ್ಲಿ ಬಿಲಿಯನ್ನರುಗಳ ಸಂಪತ್ತು: ೩.೨೫.೫ ಬಿಲಿಯನ್ ಡಾಲರುಗಳು.
- ಇದು ೨೦೧೮ರಲ್ಲಿ ೪೪೦.೧ ಬಿಲಿಯನ್ ಡಾಲರುಗಳಿಗೆ ಏರಿಕೆಯಾಗಿದೆ.
- ಬಿಲಿಯನ್ನರುಗಳ ಸಂಪತ್ತಿನ ಬೆಳವಣಿಗೆ ೨೦೧೭-೧೮ರಲ್ಲಿ ಶೇ. ೩೫.೨೧. ಆದರೆ ಭಾರತದ ೨೦೧೭-೧೮ರ ಆರ್ಥಿಕ ಬೆಳವಣಿಗೆ ಪ್ರಮಾಣ ಶೇ. ೬.೬ (೨೦೧೧-೧೨ರ ಸ್ಥಿರ ಬೆಲೆಗಳಲ್ಲಿ, ಭಾರತದ ಆರ್ಥಿಕ ಸಮೀಕ್ಷೆ ೨೦೧೭-೧೮). ಭಾರತದ ವರಮಾನಕ್ಕಿಂತ ವೇಗವಾಗಿ ಬಿಲಿಯನ್ನರುಗಳ ವರಮಾನ ಬೆಳೆಯುತ್ತಿದೆ. ಇಂದು ಭಾರತದಲ್ಲಿನ ಬಿಲಿಯನ್ನರುಗಳ ಸಂಖ್ಯೆ ೧೧೯. ಈ ಸಂಸ್ಥೆಯ ಅಂದಾಜಿನ ಪ್ರಕಾರ:
- ಸಮಾಜದ ಉನ್ನತ ವರಮಾನ ಗುಂಪಿನಲ್ಲಿರುವ ಶೇ. ೧ರಷ್ಟು ಜನರು ಸಮಾಜದ ಒಟ್ಟು ಸಂಪತ್ತಿನಲ್ಲಿ ಪಡೆದಿರುವ ಪಾಲು ಶೇ. ೫೧.೫೩.
- ವರಮಾನದ ಔನ್ನತ್ಯದಲ್ಲಿರುವ ಶೇ. ೧೦ರಷ್ಟು ಘನ ಶ್ರೀಮಂತರು ಒಟ್ಟು ಸಂಪತ್ತಿನಲ್ಲಿ ಪಡೆದಿರುವ ಪಾಲು ಶೇ. ೭೭ .೪
- ಸಮಾಜದ ಕೆಳಸ್ತರದಲ್ಲಿನ ಶೇ. ೬೦ರಷ್ಟು ಜನರು ಒಟ್ಟು ಸಂಪತ್ತಿನಲ್ಲಿ ಪಡೆದಿರುವ ಪಾಲು ಶೇ. ೪.೮. ಈ ಬಗೆಯ ಅಸಮಾನತೆ ಕುರಿತಂತೆ ಈ. ಎಫ್. ಶುಮಾಂಕರ್ ಅವರ 'ಆಗರ್ಭ ಶ್ರೀಮಂತರನ್ನು, ಮಿಲಿಯನ್ನರನ್ನು ಸಾಂಸ್ಕೃತಿಕ ನಾಯಕರೆಂದು ಆರಾಧಿಸುವುದರಿಂದ ಸಮಾಜಕ್ಕೆ ಯಾವುದೇ ಲಾಭವಿಲ್ಲ' ಎಂಬ ವಿವೇಕದ ಮಾತು ಇಲ್ಲಿ ಉಲ್ಲೇಖನೀಯ. (ಸ್ಮಾಲ್ ಈಸ್ ಬ್ಯೂಟಿಫುಲ್, ಪು : ೨೩೭). ಆದರೆ ಇಂದು ಆಳರಸರು 'ಅಂಬಾನಿ-ಅದಾನಿಗಳ ಬಳಿ ಸಂಪತ್ತು ಮಡುಗಟ್ಟಿ ಕೊಂಡಿದ್ದರೆ ಏನಾಯಿತು' ಎಂಬ ಅಸಮಾನತೆ ಬಗ್ಗೆ ಉಡಾಫೆಯ ಮಾತುಗಳನ್ನಾಡುತ್ತಿದ್ದಾರೆ.

*ಮೂಲ : ಕ್ವಾರ್ಟಜ್ ಇಂಡಿಯ ವೆಬ್. ಅನನ್ಯ ಭಟ್ಟಾಚಾರ್ಯ, ಜನವರಿ ೨೦, ೨೦೧೯.*

ಇಂದು ಅಸಮಾನತೆಯನ್ನು ತಡೆಯುವ ಬಗ್ಗೆ ಸರ್ಕಾರಗಳು ಗಮನ ನೀಡುವುದಕ್ಕೆ ಪ್ರತಿಯಾಗಿ ಘನಶ್ರೀಮಂತರನ್ನು ವೈಭವೀಕರಿಸಲಾಗುತ್ತಿದೆ. ಇದು ಇಂದಿನ ಅಭಿವೃದ್ಧಿ ಪರ್ವ. ನೆಹರೂ ಯುಗದಲ್ಲಿ ಅಸಮಾನತೆಯು ಅಸಹ್ಯಕರ ಸಂಗತಿಯಾಗಿತ್ತು. ಅದೊಂದು ಪ್ರತಿಗಾಮಿ ಕೇಡು ಎಂದು ಗುರುತಿಸಲಾಗುತ್ತಿತ್ತು. ಆದರೆ ಇಂದು ಅದೇನು ಅಸಹ್ಯಪಡಬೇಕಾದ ಅಥವಾ ಪೀಡೆ ಎಂಬುದಾಗಿ ಭಾವಿಸುವ ಕ್ರಮವಿಲ್ಲ. ಒಟ್ಟಾರೆ ನೆಹರೂ ಯುಗದ ಅಭಿವೃದ್ಧಿ ಸಾಧನೆಯನ್ನು ಯಾವ ಕಾರಣಕ್ಕೂ ಹೀಗಳೆಯುವುದು ಸಾಧ್ಯವಿಲ್ಲ. ಸ್ವಾತಂತ್ರ್ಯೋತ್ತರ ಭಾರತದ ಅಭಿವೃದ್ಧಿ ಸಾಧನೆಯು ನಿಜಕ್ಕೂ ಅನುಕರಣೀಯವಾದುದೆಂದು ಜಗತ್ತು ಹಾಡಿ ಹೊಗಳುತ್ತಿದೆ. ಇದನ್ನು ಸಹಿಸಲಾರದ ಮನುವಾದಿ ಪ್ರಣೀತ ಚಿಂತನೆಯನ್ನು ಅಪ್ಪಿಕೊಂಡಿರುವ ಜನರು ಅಂದಿನ ಸಣ್ಣ–ಪುಟ್ಟ ಇತಿ–ಮಿತಿಗಳನ್ನು ಮತ್ತು ಸೋಲುಗಳನ್ನು–ವೈಫಲ್ಯಗಳನ್ನು ಇನ್ನಿಲ್ಲದಂತೆ ಉತ್ಪ್ರೇಕ್ಷಿಸಿ ಅದರ ಸಾಧನೆಯನ್ನು ಹೀಗಳೆಯುತ್ತಿದ್ದಾರೆ.

### ಸ್ವತಂತ್ರ ಭಾರತದ ಅಭಿವೃದ್ಧಿ ಬಗ್ಗೆ ದೀಪಕ್ ನಯ್ಯಾರ್ ಅವರ ಪ್ರಮೇಯ

ಭಾರತದ ಪ್ರಸಿದ್ಧ ಅರ್ಥಶಾಸ್ತ್ರಜ್ಞ ದೀಪಕ್ ನಯ್ಯಾರ್ ಅವರು ೨೦೦೬ರ ತಮ್ಮ 'ಎಕನಾಮಿಕ್ ಗ್ರೋಥ್ ಇನ್ ಇಂಡಿಪೆಂಡೆಂಟ್ ಇಂಡಿಯಾ: ಲಂಬರಿಂಗ್ ಎಲಿಂಟ್ ಆರ್ ರನ್ನಿಂಗ್ ಟೈಗರ್?' ಎಂಬ ಪ್ರಬಂಧದಲ್ಲಿ (ಎಕನಾಮಿಕ್

ಆಂಡ್ ಪೊಲಿಟಿಕಲ್ ವೀಕ್ಲಿ, ಏಪ್ರಿಲ್ ೧೫, ೨೦೦೬) ೧೯೫೦-೫೧ರಿಂದ ೨೦೦೪-೦೫ರ ಕಾಲಾವಧಿಯಲ್ಲಿ ಭಾರತವು ಸಾಧಿಸಿಕೊಂಡಿರುವ ಆರ್ಥಿಕ ಬೆಳವಣಿಗೆಯ ಮಾಪನ ಮಾಡಿ ಅನೇಕ ತೀರ್ಮಾನಗಳನ್ನು ರೂಪಿಸಿದ್ದಾರೆ. ಸ್ವಾತಂತ್ರ್ಯೋತ್ತರ ಭಾರತದ (೧೯೫೦-೫೧ರಿಂದ ೨೦೦೪-೦೫) ಜಿಡಿಪಿ (ಒಟ್ಟು ಆಂತರಿಕ ಉತ್ಪನ್ನ) ಬೆಳವಣಿಗೆಯ ಸಾಧನೆಯನ್ನು ಅವರು ೧೯೦೦-೦೧ರಿಂದ ೧೯೪೬-೪೭ರಲ್ಲಿನ ಜಿಡಿಪಿ ವಿವರಗಳ ಎದುರಿಗಿಟ್ಟು ತುಲನೆ ಮಾಡಿದ್ದಾರೆ. ಒಂದು ಅಧ್ಯಯನದ ಪ್ರಕಾರ ಭಾರತದ ಜಿಡಿಪಿ ಮತ್ತು ತಲಾ ಜಿಡಿಪಿಯು ೧೯೦೦-೦೧ರಿಂದ ೧೯೪೬-೪೭ರ ಅವಧಿಯಲ್ಲಿ (೧೯೩೮-೩೯ರ ಸ್ಥಿರ ಬೆಲೆಗಳಲ್ಲಿ) ವಾರ್ಷಿಕ ಕ್ರಮವಾಗಿ ಶೇ. ೧ ಮತ್ತು ಶೇ. ೦.೨ರ ಪ್ರಮಾಣದಲ್ಲಿ ಬೆಳೆದಿದ್ದರೆ ೧೯೫೦-೫೧ರಿಂದ ೨೦೦೪-೦೫ರ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಅವು (೧೯೯೩-೯೪ರ ಸ್ಥಿರ ಬೆಲೆಗಳಲ್ಲಿ) ಕ್ರಮವಾಗಿ ಶೇ. ೪.೨ ಮತ್ತು ಶೇ. ೨ರ ಪ್ರಮಾಣದಲ್ಲಿ ಬೆಳವಣಿಗೆ ಸಾಧಿಸಿಕೊಂಡಿರುವುದನ್ನು ದಾಖಲಿಸಿದ್ದಾರೆ. ಇದಕ್ಕಿಂತ ಮುಖ್ಯವಾಗಿ ಸ್ವತಂತ್ರ ಭಾರತದ ಆರ್ಥಿಕ ಬೆಳವಣಿಗೆಯು ಪಡೆದುಕೊಂಡ ಆಯಕಟ್ಟಿನ ತಿರುವು ಅನೇಕರು ನಂಬಿಕೊಂಡಿರುವಂತೆ ೧೯೯೧ಕ್ಕೆ ಪ್ರತಿಯಾಗಿ ಅಂತಹ ತಿರುವು ೧೯೮೦-೮೧ರಲ್ಲಿ ಸಂಭವಿಸಿದ್ದನ್ನು ಅಂಕಿಅಂಶಗಳ ಆಧಾರದಲ್ಲಿ ನಯ್ಯಾರ್ ಸಿದ್ಧಮಾಡಿದ್ದಾರೆ. ಉದಾಹರಣೆಗೆ ೧೯೫೦-೫೧ರಿಂದ ೧೯೭೯-೮೦ರ ಅವಧಿಯಲ್ಲಿ ಜಿಡಿಪಿ ಮತ್ತು ತಲಾ ಜಿಡಿಪಿ ಬೆಳವಣಿಗೆ ಪ್ರಮಾಣ ಕ್ರಮವಾಗಿ ಶೇ.೩.೫ ಮತ್ತು ಶೇ.೧.೪ರಷ್ಟಿದ್ದರೆ ೧೯೮೦-೮೧ರಿಂದ ೨೦೦೪-೦೫ರ ಅವಧಿಯಲ್ಲಿ ಅವುಗಳ ಬೆಳವಣಿಗೆ ಪ್ರಮಾಣ ಕ್ರಮವಾಗಿ ಶೇ. ೫.೬ ಮತ್ತು ಶೇ. ೩.೬ ಎಂಬ ವಿಶೇಷ ಸಂಗತಿಯನ್ನು ಕಂಡುಹಿಡಿದಿದ್ದಾರೆ. ಅಂದರೆ ೧೯೮೦-೮೧ರಿಂದ ೨೦೦೪-೦೫ರ ಅವಧಿಯಲ್ಲಿನ ಜಿಡಿಪಿ ಬೆಳವಣಿಗೆಯು ೨೦೧೩ರ ನಂತರದ ಅವುಗಳ ಬೆಳವಣಿಗೆ ಪ್ರಮಾಣಕ್ಕೆ ಬಹಳ ಕೆಳಮಟ್ಟದಲ್ಲೇನಿಲ್ಲ. ಭಾರತದ ಜಿಡಿಪಿ ಬೆಳವಣಿಗೆ ಪ್ರಮಾಣ ೨೦೧೪-೧೫ರಿಂದ ೨೦೧೮-೧೯ರ ಅವಧಿಯಲ್ಲಿ ಸರಾಸರಿ ವಾರ್ಷಿಕ ಶೇ. ೭.೫ ಎಂದು ಕೇಂದ್ರ ಸರ್ಕಾರವು ಸಾರುತ್ತಿದೆ (ಕೇಂದ್ರ ಹಣಕಾಸು ಸಚಿವಾಲಯದ ಹಿಂದಿನ ಆರ್ಥಿಕ ಸಲಹೆಗಾರರಾಗಿದ್ದ ಅರವಿಂದ ಸುಬ್ರಮಣಿಯನ್ ಅವರು ಸರ್ಕಾರ ಘೋಷಿಸುತ್ತಿರುವ ಜಿಡಿಪಿ ಪ್ರಮಾಣವು ಉತ್ಪ್ರೇಕ್ಷೆಯಿಂದ ಕೂಡಿದೆಯೆಂದು ಹೇಳಿ ವಾಸ್ತವವಾಗಿ ಭಾರತದ ಜಿಡಿಪಿಯು ೨೦೧೧ರ ನಂತರ ಶೇ. ೪.೫ರ ಪ್ರಮಾಣದಲ್ಲಿ ಬೆಳೆಯುತ್ತಿದೆ ಎಂದಿದ್ದಾರೆ). ಆದ್ದರಿಂದ ಭಾರತದ ಅಭಿವೃದ್ಧಿಯು ನೆಹರೂ ಯುಗದಲ್ಲಿ ಆರಂಭವಾಯಿತೋ ಅಥವಾ ಪರಿವಾರ ಯುಗದಲ್ಲಿ ಆರಂಭವಾಯಿತೋ ಎನ್ನುವುದಕ್ಕೆ ಉತ್ತರವು ಅನುಮಾನಕ್ಕೆ ಎಡೆಯಿಲ್ಲದಂತೆ ಖಚಿತವಿದೆ (ನೆಹರೂ ಯುಗ ವರ್ಸಸ್ ಪರಿವಾರ ಯುಗ).

### ಆರ್ಥಿಕ ಬೆಳವಣಿಗೆ ಮತ್ತು ಆರ್ಥಿಕ ಅಭಿವೃದ್ಧಿ ನಡುವಿನ ಭಿನ್ನತೆ

ಒಟ್ಟು ಆಂತರಿಕ ಉತ್ಪನ್ನ(ಜಿಡಿಪಿ)ವು ಆರ್ಥಿಕತೆಯಲ್ಲಿನ ವರಮಾನದ (ಒಟ್ಟು ಮತ್ತು ತಲಾ) ಬೆಳವಣಿಗೆಯನ್ನು ಮಾಪನ ಮಾಡುವ ಸೂಚಿಯಾಗಿದೆ ಇದನ್ನು ಆರ್ಥಿಕ ಬೆಳವಣಿಗೆ ಎಂದು ಕರೆಯುತ್ತೇವೆ. ಆರ್ಥಿಕ ಅಭಿವೃದ್ಧಿಯು ಇದಕ್ಕಿಂತ ಭಿನ್ನವಾದ ಮತ್ತು ವಿಸ್ತೃತವಾದ ಸೂಚಿಯಾಗಿದೆ. ಇದು ವರಮಾನದ ಬೆಳವಣಿಗೆಯ ಜೊತೆಯಲ್ಲಿ ಸಾಕ್ಷರತೆ, ಶಿಕ್ಷಣ, ಆರೋಗ್ಯ, ಸಾಮಾಜಿಕ ಭದ್ರತೆ, ಬಡತನದ ಸ್ಥಿತಿ, ಮಹಿಳಾ ಸ್ವಾತಂತ್ರ್ಯ, ನೀರು, ಆಹಾರ, ಪರಿಸರ ಮುಂತಾದವುಗಳಲ್ಲಿನ ಬದಲಾವಣೆಗಳನ್ನು ಒಳಗೊಂಡ ಮಾಪನವಾಗಿದೆ. ಪ್ರಸ್ತುತ ಪ್ರಬಂಧದಲ್ಲಿ ಬೆಳವಣಿಗೆಯನ್ನು ವರಮಾನದ ಏರಿಕೆ (ಜಿಡಿಪಿ) ಮತ್ತು ಅಭಿವೃದ್ಧಿಯನ್ನು ವರಮಾನ ಹಾಗೂ ಇತರೆ ಸಾಮಾಜಿಕ ಬದಲಾವಣೆ ಎಂಬ ವಿಸ್ತೃತ ಅರ್ಥದಲ್ಲಿ ಬಳಸಲಾಗಿದೆ.

ನೆಹರೂ ಯುಗದಲ್ಲಿ ಆರ್ಥಿಕತೆಯು ಯಾವ ವೈಫಲ್ಯವನ್ನೂ ಕಂಡಿಲ್ಲ ಅಥವಾ ಅಲ್ಲಿ ವರಮಾನದ ಅಸಮಾನತೆಯಿರಲಿಲ್ಲ ಅಥವಾ ಸಕಲವೂ ವೈಜ್ಞಾನಿಕವಾಗಿಯೇ ಅಲ್ಲಿ ನಡೆದಿತ್ತು ಎಂದು ಹೇಳುವ ಹುಂಬ ಪ್ರಯತ್ನವನ್ನು ಇಲ್ಲಿ ಮಾಡುತ್ತಿಲ್ಲ. ದೀಪಕ್ ನಯ್ಯಾರ್ ತಮ್ಮ ಪ್ರಬಂಧದಲ್ಲಿ ಚರ್ಚಿಸಿರುವಂತೆ ತಾನು ಸಾಧಿಸಿಕೊಂಡ ಆರ್ಥಿಕ ಬೆಳವಣಿಗೆಯನ್ನು ಅಭಿವೃದ್ಧಿಯನ್ನಾಗಿ, ಅಂದರೆ ಜನರ ಶಿಕ್ಷಣವನ್ನಾಗಿ, ಜನರ ಆರೋಗ್ಯವನ್ನಾಗಿ, ಜನರ ಆಹಾರ ಭದ್ರತೆಯನ್ನಾಗಿ, ವಿತರಣಾ ನ್ಯಾಯವಾಗಿ ಪರಿವರ್ತಿಸಿಕೊಳ್ಳುವಲ್ಲಿ ಸೋತಿದ್ದನ್ನು ಸ್ವಾತಂತ್ರ್ಯೋತ್ತರ ಭಾರತದ ದೊಡ್ಡ ವೈಫಲ್ಯ ಎಂದು ಅವರು ಗುರುತಿಸಿದ್ದಾರೆ. ಅವರು ಸ್ವಾತಂತ್ರ್ಯೋತ್ತರ ಭಾರತವು ನೆಹರೂ ಯುಗದಲ್ಲಿ ಸಾಧಿಸಿಕೊಂಡಿರುವ ಮಹತ್ವದ ಸಾಧನೆಯನ್ನು ದಾಖಲಿಸುವ ಜೊತೆಗೆ ಅಲ್ಲಿನ ಮುಖ್ಯ ವೈಫಲ್ಯವನ್ನು ಗುರುತಿಸಿದ್ದಾರೆ. ಇದೇ ರೀತಿಯಲ್ಲಿ ಪ್ರಸಿದ್ಧ ಇತಿಹಾಸಜ್ಞ ಬಿಪಿನ್ ಚಂದ್ರ ಮತ್ತು ಇತರರು ರಚಿಸಿರುವ 'ಇಂಡಿಯಾ ಆಫ್ಟರ್ ಇಂಡಿಪೆಂಡೆನ್ಸ್: ೧೯೪೭-೨೦೦೦' (ಪೆಂಗ್ವಿನ್ ಬುಕ್ಸ್, ೨೦೦೨) ಕೃತಿಯಲ್ಲಿ ನೆಹರೂ ಯುಗದ ಸಾಧನೆಯನ್ನು ಪಟ್ಟಿ ಮಾಡುವುದರ ಜೊತೆಜೊತೆಯಲ್ಲಿ ಅಲ್ಲಿನ ಇತಿಮಿತಿಗಳನ್ನು ಪಟ್ಟಿ ಮಾಡಿದ್ದಾರೆ. ಇಂದು ಹೇಗೆ ನೆಹರೂ ಯುಗವನ್ನು ಅಕರಾಳವಿಕರಾಳ ರೀತಿಯಲ್ಲಿ ಟೀಕಿಸಲಾಗುತ್ತಿದೆಯೋ ಅದೇ ರೀತಿಯಲ್ಲಿ ಸ್ವಾತಂತ್ರ್ಯೋತ್ತರ ಭಾರತದ ಏಕತೆ-ಸಮಗ್ರತೆ, ಸ್ವಾತಂತ್ರ್ಯ-ಸೌಹಾರ್ದತೆಗಳನ್ನು ಕಾಯ್ದುಕೊಳ್ಳುವ ಬಗ್ಗೆ ಅನುಮಾನವನ್ನು ವ್ಯಕ್ತಪಡಿಸಿ ಅನೇಕ ವಿದೇಶಿ ವಿದ್ವಾಂಸರು, ಪತ್ರಕರ್ತರು, ರಾಜಕೀಯ ವಿಶ್ಲೇಷಕರು ೧೯೫೦ರ ಸಂದರ್ಭದಲ್ಲಿ ಟೀಕೆ ಮಾಡಿದ್ದರು. ಭಾರತವು ಪ್ರಜಾಪ್ರಭುತ್ವವಾಗಿ ಉಳಿಯುವುದು ಅನುಮಾನ ಎಂದೂ, ಅದು ತನ್ನ ಏಕತೆ-ಸಮಗ್ರತೆಯನ್ನು ಕಾಯ್ದುಕೊಳ್ಳುವುದು ಸಾಧ್ಯವಿಲ್ಲವೆಂದೂ ಅನೇಕರು ಭಾರತದ ಬಗ್ಗೆ ಭವಿಷ್ಯ ನುಡಿದಿದ್ದರು. ಅವೆಲ್ಲವನ್ನೂ ಸುಳ್ಳಾಗಿಸಿ ಭಾರತವು ನೆಹರೂ ಯುಗದಲ್ಲಿ ಪ್ರಜಾಪ್ರಭುತ್ವವನ್ನು ಬಲಪಡಿಸುವಲ್ಲಿ, ಜಾತ್ಯತೀತತೆ ಮೌಲ್ಯವನ್ನು ಗಟ್ಟಿಗೊಳಿಸುವಲ್ಲಿ, ಸ್ವಾತಂತ್ರ್ಯವನ್ನು ಸಂರಕ್ಷಿಸಿಕೊಳ್ಳುವಲ್ಲಿ ಯಶಸ್ವಿಯಾಯಿತು.

## ಸ್ವಾತಂತ್ರ್ಯೋತ್ತರ ಭಾರತದ ಅಭಿವೃದ್ಧಿ ಬಗ್ಗೆ ದೀಪಕ್ ನಯ್ಯಾರ್ ಒಳನೋಟಗಳು

ದೀಪಕ್ ನಯ್ಯಾರ್ ಪ್ರಕಾರ ೨೦ನೆಯ ಶತಮಾನದ ನೂರು ವರ್ಷಗಳನ್ನು ಪರಿಗಣಿಸಿದರೆ (೧೯೦೦-೨೦೦೦) ಭಾರತದ ಜಿಡಿಪಿ ಬೆಳವಣಿಗೆಯ ಅಥವಾ ರಾಜಕೀಯ ಬದಲಾವಣೆಯ ದೃಷ್ಟಿಯಿಂದ ಆಯಕಟ್ಟಿನ ತಿರುವು ೧೯೫೦-೫೧ರಲ್ಲಿ ಉಂಟಾಯಿತು. ಸ್ವಾತಂತ್ರ್ಯೋತ್ತರ ಭಾರತವನ್ನು ಪರಿಗಣಿಸಿದರೆ (೧೯೫೦-೨೦೦೫) ಆಯಕಟ್ಟಿನ ತಿರುವು ೧೯೮೦-೮೧ರಲ್ಲಿ ಸಂಭವಿಸಿತು (ಅನೇಕರು ನಂಬಿರುವಂತೆ ಇದು ೧೯೯೦-೯೧ರಲ್ಲಿ ಅಲ್ಲ). ಇವೆರಡು ತಿರುವುಗಳ ನಡುವಿನ ಭಿನ್ನತೆಗಳು ಅತ್ಯಂತ ಮಹತ್ವದ ಸಂಗತಿಗಳಾಗಿವೆ.

೧. ಮೊದಲನೆಯ ತಿರುವಿನ ಸಂದರ್ಭದಲ್ಲಿ ಬದಲಾವಣೆಗಳು ಆರ್ಥಿಕ ಮತ್ತು ರಾಜಕೀಯ ಎರಡೂ ಕ್ಷೇತ್ರಗಳನ್ನು ಒಳಗೊಂಡಿದ್ದವು. ಆದರೆ ಎರಡನೆಯ ತಿರುವಿನಲ್ಲಿನ ಬದಲಾವಣೆಯು ಕೇವಲ ಆರ್ಥಿಕವಾದುದಾಗಿತ್ತು. ಮೊದಲನೆಯ ತಿರುವಿನ ಕಾಲಾವಧಿಯಲ್ಲಿ ಒತ್ತು ಸಂಪತ್ತಿನ ಕೇಂದ್ರೀಕರಣವನ್ನು ತಡೆಗಟ್ಟುವುದು ಮತ್ತು ಸಂಪತ್ತಿನ ಮರುವಿತರಣೆಗಳ ಮೇಲಿತ್ತು. ಎರಡನೆಯ ತಿರುವುವಿನ ಸಂದರ್ಭದಲ್ಲಿ ಇವುಗಳನ್ನು ಪೂರ್ಣವಾಗಿ ಕೈಬಿಡದಿದ್ದರೂ ಅವುಗಳ ಬಗ್ಗೆ ಕೇವಲ ಮೇಲು ಮೇಲಿನ ಔಪಚಾರಿಕ ಒಲವು-ಒತ್ತು ಕಂಡುಬರುತ್ತಿದೆ.

೨. ಎರಡನೆಯ ತಿರುವಿನ ಸಂದರ್ಭದಲ್ಲಿ ಬಡತನದ ನಿವಾರಣೆ ಮತ್ತು ಅಸಮಾನತೆಯನ್ನು ತೊಡೆದು ಹಾಕುವ ಗುರಿಗಳು ಕಡೆಗಣನೆಗೆ ಒಳಗಾಗದಿದ್ದರೂ ಅವುಗಳನ್ನು ಆರ್ಥಿಕ ಬೆಳವಣಿಗೆಯ ಉಪಉತ್ಪನ್ನವಾಗಿ ಅದರ ಅಂತರ್ಗತ ಸಂಗತಿಯನ್ನಾಗಿ ಪರಿಗಣಿಸಲಾಯಿತು. ಜನರ ಬದುಕನ್ನು ಉತ್ತಮಪಡಿಸಲು ಆರ್ಥಿಕ ಬೆಳವಣಿಗೆಯ ಗತಿಯನ್ನು ತೀವ್ರಗೊಳಿಸುವುದು ಏಕೈಕ ಸಾಧನ ಎಂಬ ನಂಬಿಕೆ ಇಲ್ಲಿದೆ.

೩. 'ಸರ್ಕಾರ'ದ ಪಾತ್ರವನ್ನು ಪ್ರಜ್ಞಾಪೂರ್ವಕವಾಗಿ ಸಂಕುಚಿತಗೊಳಿಸುವ ಕ್ರಮಗಳು ಜಾರಿಗೆ ಬಂದವು. ಸರ್ಕಾರಕ್ಕೆ ಪ್ರತಿಯಾಗಿ ಮಾರುಕಟ್ಟೆ ಶಕ್ತಿಗಳ ಮೇಲಿನ ಅವಲಂಬನೆಯು ನಿರ್ಣಾಯಕವಾಗಿಬಿಟ್ಟಿತು.

೪. ಕೊನೆಯದಾಗಿ ಆರ್ಥಿಕತೆಯನ್ನು ಮುಕ್ತಗೊಳಿಸುವ ಕ್ರಮಗಳಿಗೆ ಎಲ್ಲಿಲ್ಲದ ಆದ್ಯತೆ ದೊರೆಯಿತು. ದೇಶದ ಆರ್ಥಿಕತೆಯನ್ನು ಜಗತ್ತಿನ ಮಾರುಕಟ್ಟೆಯಲ್ಲಿ ವಿಲೀನಗೊಳಿಸುವ ದಿಶೆಯಲ್ಲಿ ಅನೇಕ ಕ್ರಮಗಳು ಜಾರಿಗೆ ಬಂದವು. ಈ ವಿಲೀನ ಪ್ರಕ್ರಿಯೆಯಲ್ಲಿ ವಿದೇಶಿ ಬಂಡವಾಳ ಮತ್ತು ವಿದೇಶಿ ತಂತ್ರಜ್ಞಾನ ಸಕ್ರಿಯ ಪಾತ್ರ ವಹಿಸುತ್ತವೆ ಎಂಬುದು ಇಲ್ಲಿನ ನೀತಿಯಾಯಿತು.

### ಭಾಗ ೨
### ನಮ್ಮ ಸಂವಿಧಾನ ನಮ್ಮ ಸಾಧನೆ

ಸ್ವಾತಂತ್ರ್ಯೋತ್ತರ ಭಾರತದ ಅತಿದೊಡ್ಡ ಸಾಧನೆ ಡಾ॥ ಬಿ. ಆರ್. ಅಂಬೇಡ್ಕರ್ ಪ್ರಣೀತ ಸಂವಿಧಾನದ ರಚನೆ. 'ಭಾರತದಲ್ಲಿ ಅಭಿವೃದ್ಧಿ ಪರ್ವವು ೨೦೧೪ರಿಂದ ಆರಂಭವಾಯಿತು' ಎಂದು ಮತ್ತು ಕಳೆದ ೭೦ ವರ್ಷಗಳಿಂದ ಭಾರತದಲ್ಲಿ ಅಭಿವೃದ್ಧಿಯು ಏನೇನೂ ನಡೆದಿಲ್ಲ ಎನ್ನುವ ಮಬ್ಬು ಮಂದಿ(ಇವರನ್ನು ಅನೇಕರು ಭಕ್ತರು ಎಂದು ಕರೆಯುತ್ತಾರೆ) ಇಂದು ನಮ್ಮ ಸಂವಿಧಾನದ ವಿರುದ್ಧ ಬೆಂಕಿ ಕಾರುತ್ತಿದ್ದಾರೆ. ಅದರಲ್ಲಿ ಪ್ರಜೆಗಳಿಗೆ (ಸಂವಿಧಾನದ ಮೂರನೆಯ ಭಾಗದ ಪರಿಚ್ಛೇದಗಳು) 'ಹಕ್ಕು'ಗಳನ್ನು (ಸಮಾನತೆ–ಪರಿಚ್ಛೇದ ೧೪, ತಾರತಮ್ಯ ವಿರೋಧಿ ಕ್ರಮಗಳು–ಪರಿಚ್ಛೇದ ೧೫, ಅಸ್ಪೃಶ್ಯತೆ ರದ್ದತಿ–ಪರಿಚ್ಛೇದ ೧೭ ಮತ್ತು ಸಾರ್ವಜನಿಕ ವಲಯದ ಉದ್ಯೋಗದಲ್ಲಿ ಸಮಾನ ಅವಕಾಶಗಳು–ಪರಿಚ್ಛೇದ ೧೬ ಮುಂತಾದವುಗಳು) ನೀಡಿದ್ದು ಭಾರತೀಯ ಪರಂಪರೆಗೆ ವಿರುದ್ಧವಾದುದು ಎಂದು ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರೊಬ್ಬರು ಅಬ್ಬರಿಸಿದ್ದಾರೆ (ಜಸ್ಟೀಸ್ ಎಂ. ರಾಮ ಜೋಯಿಸ್, ಹತ್ತನೆಯ ದುರ್ಗಾ ದಾಸ್ ಬಸು ಸ್ಮಾರಕ ಉಪನ್ಯಾಸ, ಕೊಲ್ಕತ್ತಾ, ಫೆಬ್ರವರಿ ೧೧, ೨೦೧೭, ಪು. ೩೫). ಅವರ ಮಾತುಗಳು ಹೀಗಿವೆ: ಹಕ್ಕು ಗಳನ್ನು ಸಾಮಾಜಿಕ ಜೀವನದ ಅಡಿಪಾಯವನ್ನಾಗಿ ಮಾಡಿ ಹಕ್ಕು ಪ್ರಣೀತ ಸಮಾಜವನ್ನು ಸ್ಥಾಪಿಸುವುದಕ್ಕೆ ಪ್ರತಿಯಾಗಿ ಈ ನೆಲದ ಪ್ರಾಚೀನ ತತ್ವಶಾಸ್ತ್ರಜ್ಞರು ಕರ್ತವ್ಯ ಪ್ರಣೀತ ಸಮಾಜವನ್ನು, ಎಲ್ಲಿ ಕರ್ತವ್ಯವನ್ನು ನಿರ್ವಹಿಸುವುದೇ ಹಕ್ಕಾಗಿರುತ್ತದೋ ಅಂತಹ ಸಮಾಜವನ್ನು ಕಟ್ಟುವ ಒಲವನ್ನು ಹೊಂದಿದ್ದರು'. (ಇವರು ಬಿಜೆಪಿಯಿಂದ ಆಯ್ಕೆಯಾದ ರಾಜ್ಯಸಭಾ ಸದಸ್ಯರಾಗಿದ್ದರು).

ಮಾನವ ಹಕ್ಕುಗಳು ಮತ್ತು ಮೂಲಭೂತ ಸ್ವಾತಂತ್ರ್ಯಗಳು ಭಾರತೀಯ ಸಂವಿಧಾನದ ಅವಿಭಾಜ್ಯ ಅಂಗಗಳಾಗಿವೆ. ಇದು ಸ್ವಾತಂತ್ರ್ಯೋತ್ತರ ಭಾರತದ ಸಾಧನೆಯಾಗಿದ್ದರೆ ೨೦೧೪ರ ನಂತರ ಅದನ್ನು ಬದಲಾಯಿಸಬೇಕು, ಮನುವಾದಿ ಸಂವಿಧಾನವನ್ನು ಅದರ ಸ್ಥಾನದಲ್ಲಿ ಸ್ಥಾಪಿಸಬೇಕು ಎಂಬ ಪ್ರತಿಗಾಮಿ ಪ್ರಣಾಳಿಕೆಯ ರೂಪರೇಷೆಯನ್ನು ಆಳುವ ವರ್ಗವು ಸಿದ್ಧಪಡಿಸುತ್ತಿದೆ. ವಾಸ್ತವವಾಗಿ ಸ್ವಾತಂತ್ರ್ಯೋತ್ತರ ಭಾರತದ ಒಂದು ಸಾತ್ವಿಕ ಸಾಧನೆಯಾದ ನಮ್ಮ ಸಂವಿಧಾನವನ್ನು, ನ್ಯಾಯ, ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವವನ್ನು ಮೂಲ ಆಶಯವನ್ನಾಗಿ ಮಾಡಿಕೊಂಡಿರುವ ನಮ್ಮ ಸಂವಿಧಾನವನ್ನು, ಅಸ್ಪೃಶ್ಯತೆಯನ್ನು, ಎಲ್ಲ ಬಗೆಯ ತಾರತಮ್ಯಗಳನ್ನು ನಿಷೇಧಿಸಿರುವ ನಮ್ಮ ಸಂವಿಧಾನವನ್ನು, ಶತಶತಮಾನಗಳಿಂದ ಶೋಷಣೆ, ಸಾಮಾಜಿಕ ಹೊರಗಣತನ, ಅವಮಾನ ಅನುಭವಿಸಿಕೊಂಡು ಬರುತ್ತಿದ್ದ ಪ. ಜಾ. ಮತ್ತು ಪ. ಪಂ. ಜನ ವರ್ಗಕ್ಕೆ ಸಕಾರಾತ್ಮಕ ತಾರತಮ್ಯ ಅಭಿವೃದ್ಧಿ ನೀತಿಗಳ ಮೂಲಕ ಬಿಡುಗಡೆ ನೀಡಿದ ನಮ್ಮ ಸಂವಿಧಾನವನ್ನು 'ಶುದ್ಧೀಕರಿಸುವ' ಮಾತುಗಳು ೨೦೧೪ರ ನಂತರ ದೊಡ್ಡದಾಗಿ ಕೇಳಿಬರುತ್ತಿವೆ (ಅಸ್ಪೃಶ್ಯ ಸಮುದಾಯಕ್ಕೆ ಸೇರಿದ್ದ ಡಾ॥ ಬಿ. ಆರ್. ಅಂಬೇಡ್ಕರ್ ಸಂವಿಧಾನವನ್ನು ರಚಿಸಿದ ಕಾರಣಕ್ಕೆ ಅದನ್ನು 'ಶುದ್ಧೀಕರಣ' ಕ್ಕೆ ಒಳಪಡಿಸಬೇಕು ಎಂಬ ಅಭಿಪ್ರಾಯ–ನಿಲುವು ವ್ಯಕ್ತವಾಗುತ್ತಿರಬಹುದು!).

ನೆಹರೂ ಯುಗದಲ್ಲಿ ಸಂವಿಧಾನಕ್ಕೆ ಅಪಚಾರ ಮಾಡುವಂತಹ ಕೆಲಸ ನಡೆದಿರಲಿಲ್ಲ. ನಮ್ಮ ಸಂವಿಧಾನವು ಸಮಾಜದಲ್ಲಿನ ದುರ್ಬಲರನ್ನು, ಮಹಿಳೆಯರನ್ನು, ಮಕ್ಕಳನ್ನು, ಅಲ್ಪಸಂಖ್ಯಾತರನ್ನು ಕಾಪಿಡುವ ಒಂದು ಪ್ರಣಾಳಿಕೆಯಾಗಿದೆ. ಅದು ನಮ್ಮ ಪರಂಪರೆಯ ಸಂಗತಿಗಳನ್ನು ಒಳಗೊಂಡಿಲ್ಲವೆಂದು ಅದನ್ನು ಕಿತ್ತು ಹಾಕುವ ಬಗ್ಗೆ ಪರಿವಾರದಲ್ಲಿ ಮಾತುಗಳು ಕೇಳಿಬರುತ್ತಿದೆ. ಸಂವಿಧಾನವನ್ನು ಟೀಕಿಸುವುದು ಬೇರೆ, ಅದನ್ನು ತಿದ್ದುಪಡಿ ಮಾಡುವುದು ಬೇರೆ. ಅದನ್ನು ಸುಟ್ಟು ಹಾಕುವುದು, ಅದರ ಸ್ಥಳದಲ್ಲಿ ಅಮಾನವೀಯವೂ, ಮಹಿಳಾ ವಿರೋಧಿಯೂ, ಚಾತುರ್ವರ್ಣ್ಯ ಪ್ರಣೀತ ಅಸಮಾನತೆಯ ಪ್ರಣಾಳಿಕೆಯೂ ಆದ ಮನುಧರ್ಮ ಶಾಸ್ತ್ರವನ್ನು ಸಂವಿಧಾನವನ್ನಾಗಿ ಮಾಡಬೇಕೆಂಬ ಮಾತುಗಳು ೨೦೧೪ರ ನಂತರ ಉಗ್ರ ರೀತಿಯಲ್ಲಿ ಕೇಳಿ ಬರುತ್ತಿವೆ. ಮಹಾತ್ಮ ಗಾಂಧಿ, ನೆಹರು, ಪಟೇಲ್, ರಾಜಾಜಿ, ಅಂಬೇಡ್ಕರ್ ಮುಂತಾದವರು ಕಟ್ಟಿದ 'ಭಾರತ ಎಂಬ ಭಾವಿಸಿದ ಆಶಯ'ಕ್ಕೆ (ದಿ ಐಡಿಯಾ ಆಫ್ ಇಂಡಿಯಾ) ಇದು ಸಂಪೂರ್ಣವಾಗಿ ವಿರೋಧಿಯಾಗಿದೆ. ನೆಹರೂ ಯುಗದ (೧೯೫೦–೨೦೧೪) ಭಾರತಕ್ಕಿಂತ ೨೦೧೪ರ ನಂತರದ ಭಾರತ ಭಿನ್ನವಾಗಿದ್ದರೆ ಅದು ಸಹಜ ಮತ್ತು ಸಾಮಾನ್ಯ. ಆದರೆ ಅದಕ್ಕೆ ವಿರುದ್ಧವಾದ ಭಾರತವನ್ನು ಕಟ್ಟುತ್ತೇವೆನ್ನುವ ಕೆಲಸವೇನಿದೆ ಇದು ಜನವಿರೋಧಿ ಕ್ರಮವಾಗುತ್ತದೆ.

ಸ್ವಾತಂತ್ರ್ಯಾನಂತರ ನೆಹರೂ ಯುಗದ ಆಳ್ವಿಕೆಯು ಇಲ್ಲದೆ ಹೋಗಿದ್ದರೆ ಹಕ್ಕುಗಳಿಂದ ನಮ್ಮನ್ನು ವಂಚಿಸಲಾಗುತ್ತಿತ್ತು ಎಂಬುದರ ಬಗ್ಗೆ ಅನುಮಾನವಿರಲು ಸಾಧ್ಯವಿಲ್ಲ. ವಾಸ್ತವವಾಗಿ ನೆಹರೂ ಯುಗದಲ್ಲಿ ಹಕ್ಕುಗಳ ಪರಿಭಾಷೆಯಲ್ಲಿ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವ ಕ್ರಮವು ಆರಂಭವಾಯಿತು. ಇಂದು ಭಾರತೀಯರು ಆಹಾರದ ಹಕ್ಕನ್ನು (ಫುಡ್ ಸೆಕ್ಯುರಿಟಿ ಆಕ್ಟ್), ಶಿಕ್ಷಣದ ಹಕ್ಕನ್ನು (ಆರ್‌ಟಿಇ ಆಕ್ಟ್), ಉದ್ಯೋಗದ ಹಕ್ಕನ್ನು (ಎಂಜಿಎನ್‌ಆರ್‌ಇಜಿ ಆಕ್ಟ್) ಅನುಭವಿಸುತ್ತಿದ್ದರೆ ಇದು ಸ್ವಾತಂತ್ರ್ಯೋತ್ತರ ಭಾರತದ ಸಾಧನೆಯಾಗಿದೆ. ಭಾರತದಲ್ಲಿ 'ಅಭಿವೃದ್ಧಿ ಪರ್ವ ೨೦೧೪ರಿಂದ ಆರಂಭವಾಯಿತು' ಎನ್ನುವವರಿಗೆ ನಾವು ಗರ್ವದಿಂದ ಸ್ವತಂತ್ರ ಭಾರತದ ಆಚಾರ್ಯ ಸದೃಶ ಸಾಧನೆಯೆಂದರೆ 'ಡಾ॥ ಬಿ. ಆರ್. ಅಂಬೇಡ್ಕರ್ ಪ್ರಣೀತ ಸಂವಿಧಾನ' ಎಂದು ಹೇಳಬೇಕಾಗಿದೆ. ಸ್ವಾತಂತ್ರ್ಯೋತ್ತರ ಭಾರತದ ನೆಹರೂ ಯುಗದ ಸಾಧನೆಯೇನು ಎಂದು ಯಾರಾದರೂ ಕೇಳಿದರೆ 'ಸಂವಿಧಾನಾತ್ಮಕ ಅಸ್ಪೃಶ್ಯತೆಯ ನಿಷೇಧ' ಎಂದು ಎದೆತಟ್ಟಿಕೊಂಡು ಹೇಳಬಹುದು. ನಮ್ಮ ಚಾತುರ್ವರ್ಣ್ಯ ಪ್ರಣೀತ ಸಮಾಜವು ಅನೂಚಾನವಾಗಿ ಶತಶತಮಾನಗಳಿಂದ ಪೋಷಿಸಿಕೊಂಡು ಬಂದ ಒಂದು ಸಾಮಾಜಿಕ ಕೇಡು ಎಂದರೆ ಅಸ್ಪೃಶ್ಯತೆ. ಆದರೆ 'ಭಾರತದಲ್ಲಿ ಅಭಿವೃದ್ಧಿ ಆರಂಭವಾದುದೇ ೨೦೧೪ರಿಂದ' ಎಂದು ಎದೆತಟ್ಟಿಕೊಂಡು ಹೇಳುತ್ತಿರುವವರು ಇಂದಿಗೂ ಪ್ರಚ್ಛನ್ನವಾಗಿ ಅಸ್ಪೃಶ್ಯತೆಯನ್ನು ಆಚರಿಸಿಕೊಂಡು ಬರುತ್ತಿದ್ದಾರೆ (ಉದಾಹರಣೆ: ದೇವಾಲಯದೊಳಗೆ ಮಹಿಳೆಯರ ಪ್ರವೇಶದ ಮೇಲೆ ನಿಷೇಧ ಹೇರುವುದು ಅಸ್ಪೃಶ್ಯತೆಯ ಆಚರಣೆಗೆ ಸಮ ಎಂಬ ಸರ್ವೋಚ್ಚ ನ್ಯಾಯಾಲಯದ ೨೮.೦೯.೨೦೧೮ರ ತೀರ್ಪಿನ ವಿರುದ್ಧ ನಡೆಯುತ್ತಿರುವ ಶಬರಿಮಲೆ ಪ್ರತಿಭಟನೆ).

ನಮ್ಮ ಪರಂಪರೆಯಲ್ಲಿ ನಾಡಿನ ಪ. ಜಾ. ಮತ್ತು ಪ. ಪಂ. ಜನಸಮುದಾಯಗಳನ್ನು ಪ್ರಧಾನ ಧಾರೆ ಸಾಮಾಜಿಕ ಚೌಕಟ್ಟಿನಿಂದ ಹೊರಗಿಡಲಾಗಿತ್ತು. ನಮ್ಮ ದೇಶದಲ್ಲಿ ೨೦೧೧ರ ಜನಗಣತಿ ಪ್ರಕಾರ ಪ. ಜಾ. ಜನಸಂಖ್ಯೆ ೨೦.೧೪ ಕೋಟಿಯಿದ್ದರೆ (ಶೇ. ೧೬.೬೩) ಪ. ಪಂ. ಜನಸಂಖ್ಯೆ ೧೦.೪೨ ಕೋಟಿಯಿದೆ (ಶೇ. ೮.೬೧). ಒಟ್ಟಾರೆ ೩೦ ಕೋಟಿಗೂ ಮಿಕ್ಕು ಜನರು ಸಾಮಾಜಿಕ ಹೊರಗಣತನವನ್ನು ಅನುಭವಿಸುತ್ತಿದ್ದರು. ಬೃಹತ್ ಜನಸ್ತೋಮವನ್ನು ಸಾಮಾಜಿಕ ಚೌಕಟ್ಟಿನಿಂದ ಹೊರಗಿಟ್ಟು ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವುದಾದರೂ ಹೇಗೆ? ಎಂದೇ ನಮ್ಮ ಸಂವಿಧಾನದಲ್ಲಿ ಈ ಜನವರ್ಗದ ಅಭಿವೃದ್ಧಿಗಾಗಿ 'ಸಕಾರಾತ್ಮ ತಾರತಮ್ಯ' (ಅಫರ್‌ಮೇಟಿವ್ ಆಕ್ಷನ್) ಕ್ರಮಗಳನ್ನು ಶಿಕ್ಷಣ, ಉದ್ಯೋಗ ಮತ್ತು ಶಾಸನಾತ್ಮಕ ಸಂಸ್ಥೆಗಳಲ್ಲಿ (ಸಂಸತ್ತನ್ನು ಬಿಟ್ಟು) ಇವರಿಗೆ ಪ್ರಾತಿನಿಧ್ಯ ನೀಡುವುದಕ್ಕಾಗಿ ಮೀಸಲಾತಿ ನೀತಿಗಳನ್ನು ಅಳವಡಿಸಿಕೊಳ್ಳಲಾಯಿತು. ಇದು ಕೂಡ ಸ್ವಾತಂತ್ರ್ಯೋತ್ತರ ಭಾರತದ ದೊಡ್ಡ ಸಾಧನೆಯಾಗಿದೆ. ಈ ಕ್ರಮಗಳಿಗೆ ಇಂದು ಕಂಟಕ ಉಂಟಾಗಿದೆ. ಜಾತಿ, ಅಸ್ಪೃಸ್ಯತೆ, ಸಾಮಾಜಿಕ ಹೊರಗಣತನಗಳ ಆಧಾರದಲ್ಲಿ ಸಂವಿಧಾನದಲ್ಲಿ ಮೀಸಲಾತಿ ನೀಡುವ ಕ್ರಮವಿದೆ. ಆದರೆ ಇದನ್ನು ಭ್ರಷ್ಟಗೊಳಿಸಿ ೨೦೧೪ರ ನಂತರ ವರಮಾನ ಕೊರತೆಯನ್ನು ಆಧಾರ ಮಾಡಿಕೊಂಡು ಮುಂದುವರಿದ ಜಾತಿಗಳಲ್ಲಿನ ಹಿಂದುಳಿದ ವರ್ಗಕ್ಕೆ ಮೀಸಲಾತಿಯನ್ನು (ಶೇ. ೧೦) ವಿಸ್ತರಿಸುವಂತಹ ನಮ್ಮ ಸಂವಿಧಾನ ವಿರೋಧಿ ಕ್ರಮಗಳನ್ನು ಜಾರಿಗೊಳಿಸಲಾಗುತ್ತಿದೆ.

ಅಭಿವೃದ್ಧಿಯಿಂದ ವಂಚಿತರಾಗಿದ್ದ ಪ. ಜಾ. ಮತ್ತು ಪ. ಪಂ. ಜನಸಮುದಾಯಗಳ ಅಭಿವೃದ್ಧಿಗಾಗಿ ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆಗಳನ್ನು ೧೯೭೦ರ ದಶಕದಲ್ಲಿ ಹಮ್ಮಿಕೊಳ್ಳಲಾಯಿತು. ಆದರೆ ೨೦೧೪ರ ನಂತರ ಈ ಯೋಜನೆಗಳನ್ನು ಹಕ್ಕಿನ ಪರಿಭಾಷೆಯಲ್ಲಿ ಪರಿಭಾವಿಸಿಕೊಳ್ಳುವದಕ್ಕೆ ಪ್ರತಿಯಾಗಿ 'ಕ್ಷೇಮಾಭ್ಯುದಯ-ಹಂಗಿನ' ನೆಲೆಯಲ್ಲಿ ಪರಿಭಾವಿಸಿಕೊಳ್ಳುವ ಕ್ರಮವನ್ನು ಜಾರಿಗೆ ತರಲಾಗಿದೆ. ಹಕ್ಕಿನ ಪರಿಭಾಷೆಯ ಬಗ್ಗೆ ೨೦೧೪ರ ನಂತರ ಒಂದು ರೀತಿಯಲ್ಲಿ ತಿರಸ್ಕಾರವನ್ನು ಬೆಳೆಸಲಾಗುತ್ತಿದೆ. ಹಂಗಿನ ಪರಿಭಾಷೆಯ ಅಭಿವೃದ್ಧಿ ಕ್ರಮವನ್ನು ಅಮರ್ತ್ಯ ಸೇನ್ 'ಪೇಷೆಂಟ್ಸ್ ಅಪ್ರೋಚ್' ಎಂದೂ ಹಕ್ಕಿನ ಪರಿಭಾಷೆಯ ಅಭಿವೃದ್ಧಿ ಕಾರ್ಯತಂತ್ರವನ್ನು 'ಏಜೆನ್ಸಿ ಅಪ್ರೋಚ್' ಎಂದು ಕರೆಯುತ್ತಾನೆ. ಮೊದಲನೆಯ ಅಪ್ರೋಚಿನಲ್ಲಿ ಜನರು ಕೇವಲ ಫಲಾನುಭವಿಗಳಾಗಿದ್ದರೆ ಎರಡನೆಯ ಕ್ರಮದಲ್ಲಿ ಜನರನ್ನು ಅಭಿವೃದ್ಧಿಯ ಕರ್ತೃಗಳಾಗಿ ನೋಡಲಾಗುತ್ತದೆ. ಅಭಿವೃದ್ಧಿಯಲ್ಲಿ ಜನರು ಫಲಾನುಭವಿಗಳು ಮಾತ್ರವಲ್ಲ ಅವರು ಅಭಿವೃದ್ಧಿಯ ಕರ್ತೃಗಳು. ಹಾಗಾದರೆ ಜನಮುಖಿ ಅಭಿವೃದ್ಧಿಯು ನೆಹರೂ ಯುಗದಲ್ಲಿ ಆರಂಭವಾಯಿತೋ ಅಥವಾ ಅದು ೨೦೧೪ರಿಂದ ಆರಂಭವಾಯಿತೋ ಎನ್ನುವ ಪ್ರಶ್ನೆಯೇ ಅಸಂಬದ್ಧ. ಈ ಪ್ರಶ್ನೆಗೆ ಯಾವುದೇ ಅರ್ಥವಿಲ್ಲ. ಏಕೆಂದರೆ ಒಂದು ದೇಶದ ಚರಿತ್ರೆಯಲ್ಲಿ ೭೦ ವರ್ಷವೇನೂ ಕಡಿಮೆ ಕಾಲಾವಧಿಯಲ್ಲ. ಈ ಅವಧಿಯಲ್ಲಿ ಏನೇನೂ ನಡೆದಿಲ್ಲ ಎನ್ನುವುದು ಮೂರ್ಖತನ. ಅಲ್ಲಿ ಅನೇಕ ದೌರ್ಬಲ್ಯಗಳಿದ್ದಿರಬಹುದು. ಅನೇಕ ದೋಷಗಳಿದ್ದಿರಬಹುದು. ಆದರೆ ಅಲ್ಲಿ ಜನರಿಗೆ ಅನುಕೂಲ ಒದಗಿಸುವಂತಹದ್ದು ಕೆಲಸ ಏನೂ ನಡೆದಿಲ್ಲ ಎಂದರೆ ಅದು ಹುಚ್ಚುತನದ ಹೇಳಿಕೆ ಎನ್ನಬೇಕಾಗುತ್ತದೆ.

**ಭಾಗ ೩**

### ಲಿಂಗ ಸಮಾನತೆ - ಸ್ವತಂತ್ರ ಭಾರತದ ಮಹತ್ವದ ಸಾಧನೆ

ಮೂಲತಃ ನಮ್ಮದು ಪುರುಷ ಪ್ರಧಾನ ಸಮಾಜ. ನಮ್ಮದು ಲಿಂಗ ಅಸಮಾನತೆಯ ಪರಂಪರೆಯಾಗಿದೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಸಾಮಾಜಿಕವಾಗಿ ಮಹಿಳೆಯರ ಸ್ಥಾನಮಾನ ನಿಕೃಷ್ಟವಾದುದಾಗಿತ್ತು. ಆಕೆಯನ್ನು ಧಾರ್ಮಿಕ ಚೌಕಟ್ಟಿನಿಂದ ಹೊರಗಿಡಲಾಗಿತ್ತು. ಅಕ್ಷರ ಭಾಗ್ಯದಿಂದ, ಆಸ್ತಿ ಮಾಲೀಕತ್ವದಿಂದ ಅವಳನ್ನು ವಂಚಿತಳನ್ನಾಗಿ ಮಾಡಲಾಗಿತ್ತು. ನಮ್ಮ ಸಮಾಜದಲ್ಲಿ 'ಸ್ವಾತಂತ್ರ್ಯಕ್ಕೆ ಮಹಿಳೆಯರು ಅರ್ಹರಲ್ಲ' ಎಂಬ ಧಾರ್ಮಿಕ ನಿಯಮ ಅಸ್ತಿತ್ವದಲ್ಲಿತ್ತು. ಈ ಬಗೆಯಲ್ಲಿ ಮಹಿಳೆಯರನ್ನು ಕುರಿತ ಸೂತ್ರಗಳು ಇಂದಿಗೂ ಆಚರಣೆಯಲ್ಲಿವೆ. ಇದಕ್ಕೆ ಅಪ್ಪಟ ನಿದರ್ಶನವೆಂದರೆ ಶಬರಿಮಲೆಯಲ್ಲಿನ ಅಯ್ಯಪ್ಪ ದೇವಾಲಯದೊಳಗೆ ಮಹಿಳೆಯರ ಪ್ರವೇಶದ ಮೇಲಿದ್ದ ನಿಷೇಧವನ್ನು ಸರ್ವೋಚ್ಚ ನ್ಯಾಯಾಲಯದ ಸಂವಿಧಾನ ಪೀಠವು




ಸೆಪ್ಟೆಂಬರ್ ೨೮, ೨೦೧೮ರಂದು ನೀಡಿದ ೪:೧ ಬಹುಮತ ತೀರ್ಪಿನಲ್ಲಿ ರದ್ದುಪಡಿಸಿತ್ತು. ಅದರ ವಿರುದ್ಧ 'ಭಾರತದಲ್ಲಿ ಅಭಿವೃದ್ಧಿ ಪರ್ವ ಆರಂಭವಾಗಿರುವುದೇ ೨೦೧೪ರಿಂದ' ಎಂದು ಬೊಬ್ಬೆ ಹೊಡೆಯುತ್ತಿರುವ ರಾಷ್ಟ್ರೀಯ ರಾಜಕೀಯ ಪಕ್ಷವೊಂದು ಅದರ ವಿರುದ್ಧ ಪ್ರತಿಭಟನೆ ನಡೆಸುತ್ತಿದೆ).

ಅನೂಚಾನವಾಗಿ ನಮ್ಮ ದೇಶದಲ್ಲಿ ಹರಿದುಕೊಂಡು ಬರುತ್ತಿದ್ದ ಪ್ರಬಲ ಮಹಿಳಾ ವಿರೋಧಿ ಪರಂಪರೆಯನ್ನು ನೆಹರೂ ಯುಗದಲ್ಲಿ ಬದಲಾಯಿಸಲು ಪ್ರಜ್ಞಾಪೂರ್ವಕ ಪ್ರಯತ್ನ ನಡೆಸಲಾಯಿತು. ಅಮೆರಿಕ, ಯುರೋಪ್ ದೇಶಗಳಲ್ಲಿ ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡುವುದಕ್ಕೆ ೨೦ನೆಯ ಶತಮಾನದಲ್ಲಿಯೂ ಮೀನಮೇಷ ಎಣಿಸುತ್ತಿದ್ದ ಕಾಲದಲ್ಲಿ ಭಾರತವು ಮಹಿಳೆಯರಿಗೆ ಮತದಾನದ ಹಕ್ಕನ್ನು ನೀಡಿತು. ನಮ್ಮ ದೇಶದಲ್ಲಿ ೨೦೧೪ರ ನಂತರದಲ್ಲಿ ಕಂಡುಬರುತ್ತಿರುವ ಕಡುಸಾಂಪ್ರದಾಯಿಕತೆಯು ೧೯೫೦ರ ನಂತರದ ಸ್ವತಂತ್ರ ಭಾರತದಲ್ಲಿದ್ದಿದ್ದರೆ ಮಹಿಳೆಯರಿಗೆ ಮತದಾನದ ಹಕ್ಕು ದೊರೆಯುತ್ತಿತ್ತು ಎಂಬುದರ ಬಗ್ಗೆ ನನಗೆ ಅನುಮಾನವಿದೆ. ಅದರ ವಿರುದ್ಧವೂ ಸಂಪ್ರದಾಯವಾದಿಗಳು ಪ್ರತಿಭಟನೆ ನಡೆಸುತ್ತಿದ್ದರೇನೋ!

ಕೌಟುಂಬಿಕ ದೌರ್ಜನ್ಯದ ವಿರುದ್ಧ, ವರದಕ್ಷಿಣೆ ವಿರುದ್ಧ ಮತ್ತು ಬಾಲ್ಯ ವಿವಾಹದ ವಿರುದ್ಧ ಅನೇಕ ರೀತಿಯ ಶಾಸನಗಳನ್ನು ಜಾರಿಗೆ ತರಲಾಗಿದೆ. ನಮ್ಮ ಸಮಾಜದಲ್ಲಿ ಅಕ್ಷರ ಸಂಪತ್ತಿನಿಂದ ವಂಚಿತರಾಗಿದ್ದ ಮಹಿಳೆಯರಿಗೆ ನೆಹರೂ ಅಭಿವೃದ್ಧಿ ಮಾದರಿಯಲ್ಲಿ ಶಿಕ್ಷಣದ ಅವಕಾಶ ನೀಡಲಾಯಿತು. ಉದ್ಯೋಗದಲ್ಲಿ ಮೀಸಲಾತಿ ನೀಡಲಾಯಿತು. ಮನೆಯೊಳಗೆ ಕುಟುಂಬ ನಿರ್ವಹಣೆ ಮಹಿಳೆಯರ ಜವಾಬ್ದಾರಿ ಎಂಬ ಭಾರತೀಯ ಸಾಂಪ್ರದಾಯಿಕ ಮೌಢ್ಯದ ವಿರುದ್ಧ ನೆಹರೂ ಯುಗದಲ್ಲಿ ಮನೆಯ ಹೊರಗಿನ ಉದ್ಯೋಗಗಳನ್ನು ಮಹಿಳೆಯರಿಗೆ ನೀಡುವ ಕ್ರಮ ತೆಗೆದುಕೊಳ್ಳಲಾಯಿತು. ಮಹಿಳೆಯರಿಗೆ ಪಾಲಕರ ಆಸ್ತಿಯಲ್ಲಿ ಸಮಾನ ಪಾಲನ್ನು ನೀಡುವ ಕ್ರಮವನ್ನು ೧೯೫೦ರ ದಶಕದಲ್ಲಿಯೇ ತೆಗೆದುಕೊಳ್ಳಲಾಯಿತು. ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿಗಾಗಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಮೂಲಕ ೧೯೭೫ರಲ್ಲಿ ಅಂಗನವಾಡಿ ಕೇಂದ್ರಗಳನ್ನು ತೆರೆಯಲಾಯಿತು. ಮಹಿಳಾ ಸಬಲೀಕರಣ ಯೋಜನೆಯ ಮೂಲಕ ಮಹಿಳೆಯರು ತಮ್ಮ ಕಾಲ ಮೇಲೆ ತಾವು ನಿಂತುಕೊಳ್ಳುವಂತಹ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಯಿತು. ಗಂಡು-ಹೆಣ್ಣಿಗೆ ಸಮಾನ ವೇತನವಿರುವ ಎಂಜಿಎನ್ಆರ್ಇಜಿಎ ಉದ್ಯೋಗ ಕಾರ್ಯಕ್ರಮವನ್ನು ೨೦೦೬ರಲ್ಲಿ ಆರಂಭಿಸಲಾಯಿತು.

ನಿಜ, ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮಹಿಳೆಯರ ಶಾರೀರಿಕ ಭದ್ರತೆ, ಸಮಗ್ರತೆ, ಸ್ವಾಯತ್ತತೆಯನ್ನು ಸಾಧಿಸಿಕೊಳ್ಳುವುದು ಸಾಧ್ಯವಾಗಿಲ್ಲ. ಆದರೆ ಲಿಂಗ ಸಮಾನತೆ ಮೌಲ್ಯಕ್ಕೆ ೨೦೧೪ಕ್ಕೆ ಪೂರ್ವದಲ್ಲಿ ಗೌರವವಿತ್ತು. ಆದರೆ ೨೦೧೪ರ ನಂತರ ಅನೇಕ ರೀತಿಯಲ್ಲಿ ಮಹಿಳೆಯರನ್ನು ಸಾಂಪ್ರದಾಯಿಕ ಕೂಪಕ್ಕೆ ತಳ್ಳುವ ಕಾರ್ಯ ನಡೆದಿದೆ. ರಾಷ್ಟ್ರೀಯ ರಾಜಕೀಯ ಪಕ್ಷವೊಂದರ ತಾಯಿಸಂಸ್ಥೆಯ ಮುಖ್ಯಸ್ಥರು ಮೇಲಿಂದ ಮೇಲೆ ಮಹಿಳೆಯರ ಕಾರ್ಯಕ್ಷೇತ್ರವೇನಿದ್ದರೂ ಮನೆ, ಕುಟುಂಬ, ಮಕ್ಕಳು, ಗಂಡ ಎಂಬ ಸಂಗತಿಯನ್ನು ಒತ್ತಿ ಒತ್ತಿ ಹೇಳುತ್ತಿರುತ್ತಾರೆ. ಆದರೆ ಇಂತಹ ಸಂಗತಿಗಳಿಗೆ ೨೦೧೪ಕ್ಕೆ ಪೂರ್ವದಲ್ಲಿ ಮನ್ನಣೆ ಇರಲಿಲ್ಲ. ಒಟ್ಟಾರೆ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮಹಿಳಾ ಸ್ವಾತಂತ್ರ್ಯದ ಬಗ್ಗೆ ಸಕಾರಾತ್ಮಕ ಧೋರಣೆ ವ್ಯಕ್ತವಾಗುತ್ತಿತ್ತು. ಆದರೆ ಇಂದು ಅದಕ್ಕೆ ಕುತ್ತು ಬಂದಿದೆ. ಮಹಿಳೆಯನ್ನು ಒಬ್ಬ ಜವಾಬ್ದಾರಿಯುತ ವ್ಯಕ್ತಿಯನ್ನಾಗಿ ಪರಿಗಣಿಸುವುದಕ್ಕೆ ಪ್ರತಿಯಾಗಿ 'ಕುಟುಂಬ'ವೊಂದರ ಸದಸ್ಯೆಯನ್ನಾಗಿ ಬಿಂಬಿಸಲಾಗುತ್ತಿದೆ. ಮಹಿಳೆಯನ್ನು ವ್ಯಕ್ತಿಯನ್ನಾಗಿ ಪರಿಭಾವಿಸಿಕೊಳ್ಳುವುದಕ್ಕೆ ಪ್ರತಿಯಾಗಿ ಅವಳನ್ನು ತಾಯಿಯನ್ನಾಗಿ, ಹೆಂಡತಿಯಾಗಿ ಪರಿಭಾವಿಸಿಕೊಳ್ಳುವ ಕ್ರಮವು ೨೦೧೪ರ ನಂತರ ಬಲಿಷ್ಠವಾಗುತ್ತಿದೆ.

**ಭಾಗ ೪**

### ಸ್ವಾತಂತ್ರ್ಯೋತ್ತರ ಭಾರತದ ಅಭಿವೃದ್ಧಿಯ ವಿಶಾಲ ವ್ಯಾಪ್ತಿ

ಚೌಕಟ್ಟು ೧ರಲ್ಲಿ ನಿರ್ವಚಿಸಿರುವಂತೆ ಅಭಿವೃದ್ಧಿ ಎನ್ನುವುದು ಬೆಳವಣಿಗೆಗಿಂತ ವಿಸ್ತೃತವಾದ ಸೂಚಿಯಾಗಿದೆ. ಸ್ವಾತಂತ್ರ್ಯೋತ್ತರ ಭಾರತದ ಸಾಧನೆಯನ್ನು ಕೇವಲ ಜಿಡಿಪಿ ಬೆಳವಣಿಗೆಗೆ ಸೀಮಿತಗೊಳಿಸಿದರೆ ಅದು ಅದ್ಭುತವಾಗಿ ಕಾಣುವುದಿಲ್ಲ. ಸಾಕ್ಷರತೆ, ಶಿಕ್ಷಣ, ಆರೋಗ್ಯ, ಮಹಿಳೆಯರ ಸ್ಥಿತಿಗತಿ, ಪ. ಜಾ. ಮತ್ತು ಪ. ಪಂ. ಸಮುದಾಯಗಳ ಜೀವನದ ಮಟ್ಟ, ಆಹಾರ ಭದ್ರತೆ ಮುಂತಾದ ಕ್ಷೇತ್ರದಲ್ಲಿನ ಸಿದ್ಧಿ-ಸಾಧನೆಗಳ ಮೂಲಕ ಅಭಿವೃದ್ಧಿಯ ಮೌಲ್ಯಮಾಪನ ಮಾಡಿದರೆ ಸ್ವಾತಂತ್ರ್ಯೋತ್ತರ

ಭಾರತದ ಸಾಧನೆಯು ಅಸಾಧಾರಣವಾದುದು ಎಂದು ಹೇಳಲಾಗದಿದ್ದರೂ ಅದು ಸಾಧಾರಣಕ್ಕಿಂತ ಉತ್ತಮವಾಗಿತ್ತು ಎಂದು ಹೇಳಲು ಯಾವದೇ ಅಳುಕು ಬೇಕಾಗಿಲ್ಲ.

ನೆಹರೂ ಯುಗದ ವೈಜ್ಞಾನಿಕ ಧೋರಣೆಯಿಂದಾಗಿ ಕುಟುಂಬ ಯೋಜನೆಯಂತಹ ಸೀಮಿತ ಕಾರ್ಯಕ್ರಮದ ಜೊತೆಯಲ್ಲಿ ಮಹಿಳೆಯರ ಸಾಕ್ಷರತೆಯನ್ನು ಹೆಚ್ಚಿಸುವುದರ ಮೂಲಕ, ಮಹಿಳಾ ಸಬಲೀಕರಣದ ಮೂಲಕ ಸ್ವಾತಂತ್ರ್ಯೋತ್ತರ ಭಾರತವು ಜನಸಂಖ್ಯೆಯ ಬೆಳವಣಿಗೆಯನ್ನು ತಡೆಯುವುದರಲ್ಲಿ ಯಶಸ್ವಿಯಾಗಿದೆ. ಕೇರಳ, ತಮಿಳುನಾಡು, ಗೋವಾ, ಕರ್ನಾಟಕ ಮುಂತಾದ ರಾಜ್ಯಗಳಲ್ಲಿ ಜನಸಂಖ್ಯೆಯ ವಾರ್ಷಿಕ ಬೆಳವಣಿಗೆ ಪ್ರಮಾಣ ಶೇ. ೨ಕ್ಕಿಂತ ಕಡಿಮೆಯಾಗಿದೆ. ಜನಸಂಖ್ಯೆಯ ಗುಣಮಟ್ಟವು ಉತ್ತಮವಾಗುತ್ತಿದೆ. ಜನರ ಆರೋಗ್ಯ ಸ್ಥಿತಿಗತಿಯು ಸುಧಾರಿಸುತ್ತಿದೆ. ಶಿಶು ಮರಣ ಪ್ರಮಾಣ, ತಾಯಂದಿರ ಮರಣ ಪ್ರಮಾಣ, ಮಹಿಳೆಯರಲ್ಲಿ ಮತ್ತು ಮಕ್ಕಳಲ್ಲಿ ಅನೀಮಿಯ ಪ್ರಮಾಣ ಕಡಿಮೆಯಾಗುತ್ತಿದೆ (ಎನ್‌ಎಫ್‌ಎಚ್‌ಎಸ್ ೪: ೨೦೧೫–೧೬).

ಅಮರ್ತ್ಯ ಸೇನ್ ತನ್ನ ಅಧ್ಯಯನಗಳ ಮೂಲಕ (ಪಾವರ್ಟಿ ಆಂಡ್ ಫ್ಯಾಮೈನ್ಸ್: ಅನ್ ಎಸ್ಸೆ ಆನ್ ಎನ್‌ಟೈಟಲ್‌ಮೆಂಟ್ ಆಂಡ್ ಡಿಪ್ರೈವೇಶನ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ (ಈಎನ್‌ಬಿಎಸ್), ಆಕ್ಸ್‌ಫರ್ಡ್, ೧೯೮೧) ಕಂಡುಕೊಂಡಿರುವಂತೆ ಪ್ರಜಾಪ್ರಭುತ್ವ ವ್ಯವಸ್ಥೆಯು ಎಲ್ಲಿ ಬಲವಾಗಿರುತ್ತದೋ ಅಲ್ಲಿ ಬರಗಾಲ ಸಂಬಂಧಿ ಸಾವು–ನೋವುಗಳು ಸಂಭವಿಸುವುದು ಸಾಧ್ಯವಿಲ್ಲ. ಇದಕ್ಕೆ ಸ್ವಾತಂತ್ರ್ಯೋತ್ತರ ಭಾರತವು ಒಂದು ಅದ್ಭುತ ಉದಾಹರಣೆಯಾಗಿದೆ.

ಆರ್ಥಿಕ ಬೆಳವಣಿಗೆಯ ಮಾಪನವಾದ ಜಿಡಿಪಿಗೆ ಪ್ರತಿಯಾಗಿ ಅಭಿವೃದ್ಧಿಯ ಮಾಪನಕ್ಕೆ ರೂಪುಗೊಂಡಿರುವ ಪರಿಭಾವನೆ ಮಾನವ ಅಭಿವೃದ್ಧಿ ಸೂಚ್ಯಂಕ (ಎಚ್‌ಡಿಐ). ಯುಎನ್‌ಡಿಪಿ ಸಂಸ್ಥೆಯ ನೇತೃತ್ವದಲ್ಲಿ ಅಮರ್ತ್ಯ ಸೇನ್ ರೂಪಿಸಿದ ಧಾರಣ ಸಾಮರ್ಥ್ಯ ಸಿದ್ಧಾಂತದ ನೆಲೆಯಲ್ಲಿ ಮೆಹಬೂಬ್ ಉಲ್ ಹಕ್ ಅವರು ಆರೋಗ್ಯ, ಶಿಕ್ಷಣ ಮತ್ತು ವರಮಾನ ಮೂರು ಸೂಚಿಗಳನ್ನು ಒಳಗೊಂಡ ಸಂಯುಕ್ತ ಸೂಚಿ ಮಾನವ ಅಭಿವೃದ್ಧಿ ಸೂಚ್ಯಂಕವೊಂದನ್ನು ೧೯೯೦ರಲ್ಲಿ ರಚಿಸಿದರು. ಜಿಡಿಪಿಯು ಏಕಮಾನ ಸೂಚಿಯಾಗಿದ್ದರೆ ಎಚ್‌ಡಿಐ ಸಂಯುಕ್ತ ಸೂಚಿಯಾಗಿದೆ. ಇದರಲ್ಲಿ ಭಾರತದ ಸಾಧನೆ ನಿರ್ಲಕ್ಷಿಸುವಂತಹದ್ದೇನಲ್ಲ. ಯುಎನ್‌ಡಿಪಿ ಪ್ರಕಟಿಸುವ ಮಾನವ ಅಭಿವೃದ್ಧಿ ವರದಿಗಳ ಪ್ರಕಾರ ೧೯೯೦ರಿಂದ ೨೦೧೭ರವರೆಗೆ ಭಾರತದ ಎಚ್‌ಡಿಐ ಮೌಲ್ಯವು ಏರುತ್ತಲೇ ನಡೆದಿದೆ (ಎಚ್‌ಡಿಐ ಮೌಲ್ಯ ೧೯೯೦ರಲ್ಲಿ: ೦.೪೨೭. ಒಟ್ಟು ೧೦೮ ದೇಶಗಳ ಪಟ್ಟಿಯಲ್ಲಿ ಭಾರತದ ಸ್ಥಾನ: ೭೧. ಎಚ್‌ಡಿಐ ಮೌಲ್ಯ ೨೦೦೦ದಲ್ಲಿ ೦.೪೮೩, ಒಟ್ಟು ೧೭೪ ದೇಶಗಳಲ್ಲಿ ಪಟ್ಟಿಯಲ್ಲಿ ಭಾರತದ ಸ್ಥಾನ: ೧೨೮. ಎಚ್‌ಡಿಐ ಮೌಲ್ಯ ೨೦೧೭ರಲ್ಲಿ ೦.೬೪೦. ಒಟ್ಟು ೧೮೯ ದೇಶಗಳಲ್ಲಿ ಭಾರತದ ಸ್ಥಾನ: ೧೩೦). ಎಚ್ ಡಿ ಐ ನಲ್ಲಿ ೧೯೯೦ರಿಂದ ೨೦೧೭ರ ಅವಧಿಯಲ್ಲಿ ಶೇ. ೪೯.೮೮ರಷ್ಟು ಏರಿಕೆಯಾಗಿದೆ. ಭಾರತದ ಸ್ಥಾನವನ್ನು ಬೇರೆ ಅವಧಿಗೆ ಸಂಬಂಧಿಸಿದಂತೆ ತುಲನೆ ಮಾಡುವುದಕ್ಕೆ ಬರುವುದಿಲ್ಲ. ಏಕೆಂದರೆ ಒಟ್ಟು ದೇಶಗಳ ಸಂಖ್ಯೆಯು ವರ್ಷ ವರ್ಷವೂ ಬದಲಾಗುತ್ತಿರುತ್ತದೆ. ಆದರೆ ಎಚ್‌ಡಿಐ ಮೌಲ್ಯವು ಏರುತ್ತಾ ನಡೆದಿರುವುದನ್ನು ಗುರುತಿಸಬಹುದು (ಯುಎನ್‌ಡಿಪಿ ಸಂಸ್ಥೆಯ ಸಂಬಂಧಿಸಿದ ವರ್ಷಗಳ ಮಾನವ ಅಭಿವೃದ್ಧಿ ವರದಿಗಳು).

**ಸ್ವಾತಂತ್ರ್ಯೋತ್ತರ ಭಾರತ–ಬಹುತ್ವ ಭಾರತ**

ಸ್ವಾತಂತ್ರ್ಯೋತ್ತರ ಭಾರತದ ಮತ್ತೊಂದು ಅತಿದೊಡ್ಡ ಸಾಧನೆಯೆಂದರೆ ಅದು ತನ್ನ 'ಬಹುತ್ವ' ಸಂಸ್ಕೃತಿಯನ್ನು ಕಾಯ್ದುಕೊಂಡು ಬಂದಿರುವುದು. ಭಾರತೀಯ ಬಹುತ್ವಕ್ಕೆ ಅನೇಕ ಮುಖಗಳಿವೆ. ಅದು ಭಾಷಾ ಬಹುತ್ವ (ಭಾಷಾವಾರು ಪ್ರಾಂತಗಳ ರಚನೆ), ರಾಜಕೀಯ ಬಹುತ್ವ (ಒಕ್ಕೂಟ ವ್ಯವಸ್ಥೆ–ಕೇಂದ್ರ, ರಾಜ್ಯ, ಸ್ಥಳೀಯ ಸರ್ಕಾರಗಳು, ಬಹುಪಕ್ಷೀಯ ಪ್ರಜಾಪ್ರಭುತ್ವ), ಸಾಮಾಜಿಕ ಬಹುತ್ವ (ವಿವಿಧ ಸಮುದಾಯಗಳು, ಅಲ್ಪಸಂಖ್ಯಾತರು, ವಿವಿಧ ಸಂಸ್ಕೃತಿ ಇತ್ಯಾದಿ) ಮತ್ತು ಸಾಂಸ್ಕೃತಿಕ ಬಹುತ್ವ(ಸಂಗೀತ–ಹಿಂದೂಸ್ಥಾನಿ, ಕರ್ನಾಟಕಿ, ನಾಟಕ–ವೃತ್ತಿ, ಹವ್ಯಾಸಿ, ಕಲೆ, ಜಾನಪದ ಇತ್ಯಾದಿ) ಮುಂತಾದವು. ಸ್ವಾತಂತ್ರ್ಯೋತ್ತರ ಭಾರತವು ಅತ್ಯಂತ ಜವಾಬ್ದಾರಿಯುತವಾಗಿ ಸಂರಕ್ಷಿಸಿಕೊಂಡು ಬಂದಿರುವ ಬಹುತ್ವ ಮೌಲ್ಯಕ್ಕೆ ೨೦೧೪ರ ನಂತರ ದೊಡ್ಡ ಅಪಾಯ ತಟ್ಟಿದೆ. ಭಾಷಾ ಬಹುತ್ವವನ್ನು

---

# ಮೂರಂಕದ ಸ್ವತಂತ್ರ ಕವನ

**ಅಂಕ ಒಂದು**

**ಹೂ**ಡ ಬನ್ನಿ ಹಾಡ ಬನ್ನಿ
ಓ ಭಾರತ ಭಾಗ್ಯ ವಿಧಾತೃರೆ
ಕೆಂಪು ಕೋಟೆಯ ವಾಣಿ ಇದು
ಓ ವಿಶ್ವ ವಣಿಜ ಬಾಂಧವರೆ

ಹೂಡ ಬನ್ನಿ ಹಾಡ ಬನ್ನಿ
ಮೇಡಿನ್ನಿಂಡಿಯಾ ಹೇಳಬನ್ನಿ
ಡಿಜಿಟಲ್ ಇಂಡಿಯಾ ಮಾಡಬನ್ನಿ
ಕಾಮ್ ತುಮಾರಾ ನಾಮ್ ಹಮಾರಾ
ಬಚ್ಚಾ ತುಮಾರಾ ಲೇಬಲ್ ಹಮಾರಾ
ಭಾವ ನಿಮ್ಮದು ರಾಗ ನಮ್ಮದು
ಮೇಡಿನ್ನಿಂಡಿಯಾ ಹೇಳಬನ್ನಿ
ಡಿಜಿಟಲ್ ಇಂಡಿಯಾ ಮಾಡಬನ್ನಿ

ಚನ್ನಮ್ಮನಿಲ್ಲ, ಟಿಪ್ಪೂ ಇಲ್ಲ
ಭಗತ್ ಇಲ್ಲ, ಗಾಂಧಿ ಇಲ್ಲ
ಅಸಹಕಾರ ಮೊದಲೇ ಇಲ್ಲ
ಮನೆಯಲಿ ಮನೆಯೊಡೆಯನೇ ಇಲ್ಲ
'ಕ್ವಿಟ್ ಇಂಡಿಯಾ' ಮೂರ್ಖರ ಮಂತ್ರ
'ಕೋಟ್ ಇಂಡಿಯಾ' ಜಾಣರ ತಂತ್ರ
ಹೂಡ ಬನ್ನಿ ಹಾಡ ಬನ್ನಿ
ಮೇಡಿನ್ನಿಂಡಿಯಾ ಹೇಳಬನ್ನಿ
ಡಿಜಿಟಲ್ ಇಂಡಿಯಾ ಮಾಡಬನ್ನಿ

'ಖಂಡವಿದೆ ಮಾಂಸವಿದೆ
ಗುಂಡಿಗೆಯ ಬಿಸಿ ರಕ್ತವಿದೆ'
ಭೂಮಿ ಇದೆ ಭೂಗರ್ಭ ಇದೆ
ಚಿಲ್ಲರೆ ಕಾಸಿಗೆ ಬೆವರೂ ಇದೆ
ಲಾಠಿ ಇದೆ ಚಾಟಿ ಇದೆ
ಸದನದಲ್ಲಿ ಬಲವಿದೆ
ಸಾರೇ ಜಹ್ಞಾಸೆ ಅಚ್ಚಾ
ಹಿಂದೂ ಸತ್ತಾ ಹಮಾರಾ
ಹೂಡ ಬನ್ನಿ ಹಾಡ ಬನ್ನಿ
ಮೇಡಿನ್ನಿಂಡಿಯಾ ಹೇಳಬನ್ನಿ
ಡಿಜಿಟಲ್ ಇಂಡಿಯಾ ಮಾಡಬನ್ನಿ

**ಅಂಕ ಎರಡು**

ಭಾರತದ ಅಂತರಿಕ್ಷಯಾನ ಯಶಸ್ವಿ
ವಿಶ್ವ ವಣಿಜರ ಭಾರತ ಯಾನ
ಪ್ರಗತಿಯತ್ತ
ದೇಶದ ಕೋಟ್ಯಧಿಪತಿಗಳ
ಸಂಪತ್ತಿನಲ್ಲಿ ಹೆಚ್ಚಳ
ವಿಶೇಷ ಸೂಚನೆ :
ಬಡವರ ಸಂಖ್ಯೆ ಹೆಚ್ಚಿದೆ ಅಂದರೆ,
ಅದೇ ದೇಶಪ್ರೇಮವಲ್ಲ.




**ಅಂಕ ಮೂರು**

ಕಣ್ಣು ಸುತ್ತಲಿನ ಕಪ್ಪಿನಲ್ಲಿ
ಕತೆ ಹುಡುಕಬೇಡ ಗೆಳೆಯಾ
ಅಲ್ಲಿರುವುದು ಅಪೌಷ್ಟಿಕತೆ...

**ಡಾ|| ಸಿದ್ದನಗೌಡ ಪಾಟೀಲ**
೧೫, 'ಹೊಸತು', ಎಂಬೆಸಿ ಸೆಂಟರ್
ಬೆಂಗಳೂರು – ೫೬೦ ೦೦೧

ಇಂದು ಆಳುವ ಪಕ್ಷವು ಪ್ರಶ್ನೆ ಮಾಡುತ್ತಿದೆ, ಅದು 'ಒಂದು ರಾಷ್ಟ್ರ ಭಾಷೆ' ಎಂಬ ಮಾತನ್ನಾಡುತ್ತಿದೆ. ಶಾಲಾ-ಕಾಲೇಜುಗಳಲ್ಲಿನ ಪ್ರವೇಶಕ್ಕೆ ಇಡೀ ದೇಶಕ್ಕೆಲ್ಲ ಒಂದೇ ಪರೀಕ್ಷೆ ಎಂದು ಅದು ಹೇಳುತ್ತಿದೆ (ನೀಟ್ ಇದಕ್ಕೆ ಅಪ್ಪಟ ನಿದರ್ಶನ), ದೇಶಕ್ಕೆಲ್ಲ ಒಂದೇ ಬ್ಯಾಂಕು ಎಂಬುದು ಅದು ಅನುಸರಿಸುತ್ತಿರುವ ಮತ್ತೊಂದು ಕೇಂದ್ರೀಕರಣ ಕ್ರಮ. ಹೀಗೆ ರಾಜ್ಯಗಳ ಅನನ್ಯತೆ-ಅಸ್ಮಿತೆಯನ್ನು ನಾಶ ಮಾಡುವ ಕ್ರಮಗಳನ್ನು ಅದು ವ್ಯವಸ್ಥಿತವಾಗಿ ತೆಗೆದುಕೊಳ್ಳುತ್ತಿದೆ. ಒಕ್ಕೂಟ ವ್ಯವಸ್ಥೆಗೆ ವಿವಿಧ ರೀತಿಯಲ್ಲಿ ಧಕ್ಕೆ ಉಂಟುಮಾಡಲಾಗುತ್ತಿದೆ, 'ಅಲ್ಪಸಂಖ್ಯಾತರು' ಎಂಬ ಪದ ಬಳಕೆಯ ಬಗ್ಗೆ ಅದಕ್ಕೆ ವಿರೋಧವಿದೆ. ವಿಕೇಂದ್ರೀಕರಣ ತತ್ವಕ್ಕೆ ೨೦೧೩ರ ನಂತರ ಒಂದು ರೀತಿಯಲ್ಲಿ ತಿಲಾಂಜಲಿ ನೀಡಲಾಗಿದೆ. ಕನ್ನಡದ ಮಹತ್ವದ ಕೃತಿ ಕವಿರಾಜ ಮಾರ್ಗವು ಪ್ರತಿಪಾದಿಸಿರುವ ಬಹುತ್ವ ಮತ್ತು ಒಕ್ಕೂಟ ತತ್ವವನ್ನು ಒಳಗೊಂಡ 'ವಸುಧಾ ವಲಯ ವಿಲೀನ ವಿಶದ ವಿಷಯ ವಿಶೇಷಂ' ಎಂಬ ಸೂತ್ರಕ್ಕೆ ಇಂದು ಅಪಾಯ ಉಂಟಾಗಿದೆ. ವಸುಧೆಯೊಳಗೆ ವಿಲೀನವಾಗಿದ್ದರೂ ರಾಜ್ಯವು ತನ್ನ ವಿಶಿಷ್ಟತೆಯನ್ನು ಕಾಯ್ದುಕೊಳ್ಳುತ್ತದೆ' ಎಂಬ ಅರ್ಥ ಬರುವ ಈ ಕಂದ ಪದ್ಯವು ಪ್ರತಿಪಾದಿಸುತ್ತಿರುವ ಆಶಯವು ಒಕ್ಕೂಟ ತತ್ವವೇ ಆಗಿದೆ. ರಾಜ್ಯಗಳ ವಿಶಿಷ್ಟತೆಯನ್ನು ನಿರ್ಲಕ್ಷಿಸಿ ಎಲ್ಲವನ್ನೂ ಕೇಂದ್ರೀಕೃತಗೊಳಿಸುವ ಕ್ರಮಗಳನ್ನು ೨೦೧೩ರ ನಂತರ ಪ್ರಜ್ಞಾಪೂರ್ವಕವಾಗಿ ಕೇಂದ್ರ ಸರ್ಕಾರವು ತೆಗೆದುಕೊಳ್ಳುತ್ತಿದೆ. ಈ ಕೇಂದ್ರೀಕರಣದ ಕ್ರಮ ಎಲ್ಲಿಯವರೆಗೆ ಹೋಗಿದೆ ಎಂಬುದನ್ನು 'ಒಂದು ದೇಶ; ಒಂದು ಚುನಾವಣೆ' ಎನ್ನುವ ಒಕ್ಕೂಟ-ಪ್ರಜಾತಂತ್ರ ವಿರೋಧಿ ಘೋಷಣೆಯಲ್ಲಿ ಕಾಣಬಹುದು (ಇದು ಮುಂದೆ 'ಒಂದು ದೇಶ, ಒಂದೇ ಚುನಾವಣೆ, ಒಂದೇ ಪಕ್ಷ' ಎನ್ನುವ ವರೆವಿಗೂ ಹೋದರೆ ಆಶ್ಚರ್ಯವಿಲ್ಲ !).

**ಕೊನೆಯದಾಗಿ**

ಅತ್ಯಂತ ಕ್ರೂಡಾಗಿ ಮತ್ತು ಬ್ಲಂಟಾಗಿ ಹೇಳಬೇಕೆಂದರೆ ೧೯೫೦ರಿಂದ ೨೦೧೩ರವರೆಗಿನ ಅಭಿವೃದ್ಧಿ ಮಾದರಿಯು ಸೀಮಿತ ಚೌಕಟ್ಟಿನಲ್ಲಿ ಗಾಂಧಿ-ನೆಹರೂ-ಪಟೇಲ್ ಪ್ರಣೀತವಾಗಿದ್ದರೆ ೨೦೧೩ರ ನಂತರದ್ದು 'ನಾಥೂರಾಮ್ ಗೋಡ್ಸೆ' ಪ್ರಣೀತವಾಗಿರುವಂತೆ ಕಾಣುತ್ತದೆ. ಇದು ಅತ್ಯಂತ ಬೀಸು ಹೇಳಿಕೆ ಎಂದು ಕಾಣಬಹುದು. ಶಾಸನ ರಚಿಸುವ ಜವಾಬ್ದಾರಿ ಹೊತ್ತ ಜನಪ್ರತಿನಿಧಿಗಳೇ ಗಾಂಧೀಜಿಯನ್ನು ಹೀಗಳೆಯುತ್ತಾ ಗೋಡ್ಸೆಯನ್ನು ವೈಭವೀಕರಿಸುತ್ತಿರುವ ಹಿನ್ನೆಲೆಯಲ್ಲಿ ಇದನ್ನು ಹೇಳ ಬೇಕಾಗಿ ಬಂದಿದೆ. ಜಾನುವಾರು ಕಾಲಾಳುಗಳು ಕಾನೂನನ್ನು ಕೈಗೆ ತೆಗೆದುಕೊಂಡು ಮಾಂಸಾಹಾರಿ ಜನರ ಮೇಲೆ ಹಲ್ಲೆ ಮಾಡುತ್ತಿದ್ದಾರೆ. ಅಭಿವೃದ್ಧಿಯನ್ನು ಹೊಡಿ-ಬಡಿ-ಕಡಿ ಸಂಸ್ಕೃತಿಯಿಂದ ಸಾಧಿಸಲು ಸಾಧ್ಯವಿಲ್ಲ. ಅದು ಬಡವರನ್ನು, ವಂಚಿತರನ್ನು, ಅಂಚಿನಲ್ಲಿರುವವರನ್ನು, ಮಹಿಳೆಯರನ್ನು, ಪ. ಜಾ. ಮತ್ತು ಪ. ಪಂ. ಜನಸಮುದಾಯವನ್ನು ಗುರಿಯಾಗಿಟ್ಟು ಕೊಂಡಿರಬೇಕು. ನೆಹರೂ ಯುಗದಲ್ಲಿ 'ಉತ್ಪಾದನೆ ಮತ್ತು ವಿತರಣೆ' ಎರಡೂ ಏಕಕಾಲದಲ್ಲಿ ನಡೆಯ ಬೇಕಾಗಿದ್ದ ಪ್ರಕ್ರಿಯೆಗಳಾಗಿದ್ದವು. ಆದರೆ ೨೦೧೩ರ ನಂತರ 'ಉತ್ಪಾದನೆ ಮೊದಲು; ನಂತರ ವಿತರಣೆ' ಎಂಬುದು ನಮ್ಮ ಅಭಿವೃದ್ಧಿಯನ್ನು ನಿರ್ದೇಶಿಸು ತ್ತಿರುವ ಸೂತ್ರವಾಗಿದೆ. ನೆಹರೂ ಯುಗದಲ್ಲಿ ಉತ್ಪಾದನೆ ಮತ್ತು ವಿತರಣೆಗಳನ್ನು ಏಕಕಾಲದಲ್ಲಿ ಅನುಷ್ಠಾನಗೊಳಿಸುವುದು ಸಾಧ್ಯವಾಯಿತೋ ಇಲ್ಲವೋ ಎಂಬುದು ಬೇರೆ ಸಂಗತಿ. ಆದರೆ 'ವಿತರಣಾ ನ್ಯಾಯ'ದ ಬಗ್ಗೆ ಅಲ್ಲಿ ಒಲವಿತ್ತು. ಆದರೆ ಇಂದು ವಿತರಣಾ ನ್ಯಾಯವು ತಿರಸ್ಕಾರಕ್ಕೆ ಒಳಗಾಗಿದೆ. ಮಹಿಳೆಯರ ದೃಷ್ಟಿಯಿಂದ ಗುಜರಾತ್ ಮಾದರಿ ಅನುಕರಿಸಬಹುದಾದ ಪ್ರಣಾಳಿಕೆಯೇನಲ್ಲ. ಏಕೆಂದರೆ ಗುಜರಾತಿನಲ್ಲಿ ಮಹಿಳೆಯರ ಸ್ಥಿತಿಗತಿಯು ಎಷ್ಟು ಕೆಟ್ಟದಾಗಿದೆ ಎಂಬುದನ್ನು ಕೆಳಗೆ ನೀಡಿರುವ ಸಂಗತಿಗಳಿಂದ ತಿಳಿದುಕೊಳ್ಳಬಹುದು.

- ಜನಸಂಖ್ಯೆಯ ಬೆಳವಣಿಗೆ (೨೦೦೧-೨೦೧೧) ಗುಜರಾತಿನಲ್ಲಿ ಶೇ. ೧೯.೩ರಷ್ಟಿದ್ದರೆ ಕೇರಳದಲ್ಲಿ ಇದು ಶೇ. ೪.೯ರಷ್ಟಿದೆ.
- ಲಿಂಗ ಅನುಪಾತ (೨೦೧೧) ಗುಜರಾತಿನಲ್ಲಿ ಪ್ರತಿ ಸಾವಿರ ಪುರುಷರ ಎದುರಾಗಿ ಮಹಿಳೆಯರ ಸಂಖ್ಯೆ ೯೧೯ರಷ್ಟಿದ್ದರೆ ಕೇರಳದಲ್ಲಿ ಇದು ೧೦೮೪. ಲಿಂಗ ಅನುಪಾತಕ್ಕೆ ಸಂಬಂಧಿಸಿದ ಲಿಂಗ ಅಸಮಾನತೆಯಿಂದಾಗಿ ೨೦೧೧ರಲ್ಲಿ ಗುಜರಾತಿನಲ್ಲಿ 'ಕಾಣೆಯಾದ ಮಹಿಳೆಯರ ಸಂಖ್ಯೆ ೨೫.೪೨ ಲಕ್ಷ. ಕೇರಳದಲ್ಲಿ ಲಿಂಗ ಅನುಪಾತದಲ್ಲಿ ಸಮಾನತೆಯಿರುವುದರಿಂದ ಅಲ್ಲಿ ಮಹಿಳೆಯರು ಕಾಣೆಯಾಗುವ ಪ್ರಶ್ನೆ ಉದ್ಭವಿಸುವುದಿಲ್ಲ.
- ಲಿಂಗ ಸಂಬಂಧಿ ಸಾಕ್ಷರತಾ ಅಂತರ ಗುಜರಾತಿನಲ್ಲಿ (೨೦೧೧) ಶೇ. ೨೨.೪೪ ಅಂಶಗಳಷ್ಟಿದ್ದರೆ ಕೇರಳದಲ್ಲಿ ಇದು ಶೂನ್ಯ.
- ಗುಜರಾತಿನಲ್ಲಿ ೧೫ರಿಂದ ೪೯ ವಯೋಮಾನದ ಒಟ್ಟು ಮಹಿಳೆಯರಲ್ಲಿ ಅನೀಮಿಯ ಎದುರಿಸು ತ್ತಿರುವ ಮಹಿಳೆಯರ ಪ್ರಮಾಣ ೨೦೧೫-೧೬ ರಲ್ಲಿ ಶೇ. ೫೪.೯ರಷ್ಟಿದ್ದರೆ ಕೇರಳದಲ್ಲಿ ಅವರ ಪ್ರಮಾಣ ಶೇ. ೩೪.೨.
- ಪ್ರತಿ ಸಾವಿರ ಜನನಗಳಿಗೆ ಶಿಶು ಮರಣ ಪ್ರಮಾಣ ಗುಜರಾತಿನಲ್ಲಿ ೨೦೧೫-೧೬ರಲ್ಲಿ ೩೪. ಕೇರಳದಲ್ಲಿ ೦೬. ಅಂದರೆ ಗುಜರಾತಿನಲ್ಲಿ ೨೦೧೧ರಲ್ಲಿ ಹುಟ್ಟಿದ ಪ್ರತಿ ಲಕ್ಷ ಮಕ್ಕಳಲ್ಲಿ ಒಂದು ವರ್ಷ ತುಂಬುವುದರೊಳಗೆ ಅಸು ನೀಗುವ ಮಕ್ಕಳ ಸಂಖ್ಯೆ ೩೬೦೦. ಕೇರಳದಲ್ಲಿ ಇವರ ಸಂಖ್ಯೆ ೬೦೦.
- ಗುಜರಾತಿನ ೨೦೧೪-೧೫ನೆಯ ಸಾಲಿನ (ಚಾಲ್ತಿ ಬೆಲೆಗಳಲ್ಲಿ) ತಲಾ ವರಮಾನ ರೂ. ೧೨೪೩೫೮ ರಷ್ಟಾದರೆ ಕೇರಳ ಅದೇ ವರ್ಷದ ತಲಾ ವರಮಾನ ರೂ. ೧೩೮೪೯೦.

ಗುಜರಾತ್ ರಾಜ್ಯವು ವರಮಾನದಲ್ಲಿ ಸಾಧಿಸಿ ಕೊಂಡಿರುವ ಮಟ್ಟಕ್ಕೆ ಸಂವಾದಿಯಾಗಿ ಅಲ್ಲಿನ ಮಹಿಳೆಯರ ಸ್ಥಿತಿಗತಿಯಿಲ್ಲ ಮತ್ತು ಕೇರಳ, ತಮಿಳುನಾಡು, ಕರ್ನಾಟಕಗಳಿಗಿಂತ ಅದರ ಸ್ಥಿತಿಯೇನು ಉತ್ತಮವಾಗಿಲ್ಲ. ಮೇಲಿನ ಅಂಕಿಅಂಶ ಗಳಿಂದ ಗುಜರಾತ್ ಮಾದರಿಯು ಲಿಂಗ ಸಮಾನತೆ ನೆಲೆಯಿಂದ ಎಷ್ಟು ಅಸಮಾನತೆಯಿಂದ ಕೂಡಿದೆ ಎಂಬುದು ತಿಳಿದುಬರುತ್ತದೆ.

ಅತ್ಯಂತ ವಿಸ್ತೃತ ನೆಲೆಯಲ್ಲಿ ಕೇರಳ ಅಭಿವೃದ್ಧಿಯು ನೆಹರೂ ಮಾದರಿಯ ತೆರನಾದದ್ದು ಎಂದು ಹೇಳಬಹುದು. ಅದು ಕಳೆದ ೨೫-೩೦ ವರ್ಷಗಳಿಂದ ಮಾನವ ಅಭಿವೃದ್ಧಿ ಸೂಚ್ಯಂಕದಲ್ಲಿ ದೇಶದಲ್ಲಿ ಪ್ರಥಮ ಸ್ಥಾನದಲ್ಲಿದೆ. ಕೇರಳವು ಲಿಂಗ ಸಮಾನತೆ ಕ್ಷೇತ್ರದಲ್ಲಿ ಮತ್ತು ಸಮಾನತೆ ಗುರಿಗೆ ಸಂಬಂಧಿಸಿದಂತೆ ಸಾಧಿಸಿಕೊಂಡಿರುವ ಸಾಧನೆಯ ಹತ್ತಿರ ಬರಲು ಗುಜರಾತ್ ಮಾದರಿಗೆ ಇನ್ನೂ ದಶಕಗಳೇ ಬೇಕಾಗಬಹುದು. ಏಕೆಂದರೆ ನೆಹರೂ ಮಾದರಿಯಲ್ಲಿ ಮಹಿಳೆಯರನ್ನೂ ಸೇರಿಸಿಕೊಂಡು ಜನರು ಅಭಿವೃದ್ಧಿಯ ಕೇಂದ್ರದಲ್ಲಿದ್ದರೆ 'ಭಾರತದಲ್ಲಿ ಅಭಿವೃದ್ಧಿ ೨೦೧೩ರಿಂದ ಆರಂಭವಾಯಿತು' ಎನ್ನುವ ಮಾದರಿಯಲ್ಲಿ ಉತ್ಪಾದನೆ, ಬಂಡವಾಳ, ವರಮಾನ ಅಭಿವೃದ್ಧಿಯ ಕೇಂದ್ರ ಸ್ಥಾನದಲ್ಲಿರುತ್ತವೆ. ಕೇಂದ್ರದಲ್ಲಿ ೨೦೧೩ರಲ್ಲಿ ಅಧಿಕಾರಕ್ಕೆ ಬಂದ ಜನರು ಗುಜರಾತ್ ಮಾದರಿ ಅಭಿವೃದ್ಧಿಯ ಬಗ್ಗೆ ಮಾತನಾಡುತ್ತಾರೆ. ಆದರೆ ಅದರ ಸಾಧನೆಯು ಕೇರಳ ಮಾದರಿ ಅಭಿವೃದ್ಧಿಯ ಮುಂದೆ ಅತ್ಯಂತ ಕಳಪೆಯಾದುದಾಗಿದೆ.

ಭಾರತದಲ್ಲಿ ಅಭಿವೃದ್ಧಿ ನೀತಿಗಳು ಕಾಲಕಾಲಕ್ಕೆ ಬದಲಾಗಬಹುದು. ಆದರೆ ಅದರ ಮೂಲದಲ್ಲಿನ ತತ್ವವು ಸಮಾನತೆ, ಸಾಮಾಜಿಕ ನ್ಯಾಯ, ಆಹಾರ ಭದ್ರತೆ, ಅಭಿವ್ಯಕ್ತಿ ಸ್ವಾತಂತ್ರ್ಯ ಮುಂತಾದವು ಅದನ್ನು ನಿರ್ದೇಶಿಸುತ್ತಿರುತ್ತವೆ. ನೆಹರೂ ಯುಗದಲ್ಲಿ ಇದು ನಡೆಯಿತು. ಆದರೆ ಇಂದು ನೆಹರೂ ಎಂಬ ವ್ಯಕ್ತಿಯನ್ನು ದ್ವೇಷಿಸುವ ಭರದಲ್ಲಿ ಅವರು ಪ್ರತಿನಿಧಿ ಸುತ್ತಿದ್ದ ಅಭಿವೃದ್ಧಿಗೆ ತಿಲಾಂಜಲಿ ಇಡುವುದು ವಿವೇಕದ ಕ್ರಮವಲ್ಲ. ನೆಹರೂ ಯುಗದಲ್ಲಿ ಅಭಿವೃದ್ಧಿಗೆ ಸಂಬಂಧಿಸಿದಂತೆ ಎಲ್ಲವೂ ಸರಿಯಿತ್ತೆಂದು ಹೇಳಲು ಸಾಧ್ಯವಿಲ್ಲ. ಆ ನೀತಿಗಳನ್ನು ಸಾರಾಸಗಟಾಗಿ ಅಳವಡಿಸಿಕೊಳ್ಳಬೇಕೆಂದೇಳುವುದು ಉತ್ತಮ ಕ್ರಮವಲ್ಲ. ಆದರೆ ನಮ್ಮ ದೇಶದಲ್ಲಿ ಅಭಿವೃದ್ಧಿಯು ೨೦೧೩ರಿಂದ ಆರಂಭವಾಯಿತು ಎಂಬ ಕುಚೋದ್ಯವನ್ನು ನಂಬುವುದು ಸಾಧ್ಯವಿಲ್ಲ. ನೆಹರೂ ಯುಗದ ಯೋಜನಾ ಆಯೋಗದ ಸ್ಥಳದಲ್ಲಿ ನೀತಿ ಆಯೋಗವನ್ನು ಸ್ಥಾಪಿಸಿ ಬಿಟ್ಟರೆ ಅಭಿವೃದ್ಧಿ ನಡೆಯುವುದಿಲ್ಲ. ಅದಕ್ಕೊಂದು ತಾತ್ವಿಕ ನೆಲೆಗಟ್ಟಿರಬೇಕು. ಅದು ತಾರತಮ್ಯರಹಿತವಾಗಿರಬೇಕು. ಎಲ್ಲಕ್ಕಿಂತ ಮುಖ್ಯವಾಗಿ ಅದಕ್ಕೆ ಡಾ॥ ಬಿ. ಆರ್. ಅಂಬೇಡ್ಕರ್ ಪ್ರಣೀತ ಸಂವಿಧಾನವು ಆಧಾರ ವಾಗಿರಬೇಕು.

**ಡಾ॥ ಟಿ. ಆರ್. ಚಂದ್ರಶೇಖರ**
ವಿಶ್ರಾಂತ ಪ್ರಾಧ್ಯಾಪಕ, ನಂ. ೯. ೯/೧, ೨ನೆಯ ಮುಖ್ಯರಸ್ತೆ
೪ನೆಯ ಅಡ್ಡ ರಸ್ತೆ, ಬೇಗೂರು ಮುಖ್ಯ ರಸ್ತೆ
ಹೊಂಗಸಂದ್ರ, ಬೆಂಗಳೂರು – ೫೬೦ ೦೬೮
trcshekhara@gmail.com







ಹರೆಯದ ನಂದನದಲ್ಲಿ
ಅನುಭವದ ಅಮೃತವನ್ನು
ಸವಿದ ಅಪರಾಧ ಇಬ್ಬರದಾದರೂ
ನವಮಾಸಗಳ ಗರ್ಭಯಾತನೆ
ನನಗೇ ಎಂದಾದ ಮೇಲೆ
ನಿಂದೆಯ ತೋರುಬೆರಳು
ನನ್ನ ಕಡೆಗೇ ತೋರಿಸುತ್ತಿರುವಾಗ

ಗಂಗಾಪ್ರವಾಹ ತರಂಗಿಣೀ ತೀರಗಳು
ಆಸ್ಪತ್ರೆಯ ಆವರಣಗಳು
ಅನಾಥಾಶ್ರಮದ ಬಾಗಿಲುಗಳು
ಗಟಾರದ ನೀರು
ಮುಳ್ಳಿನ ಪೊದೆಗಳು
ಎಲ್ಲಾ ಕಂದಮ್ಮಗಳ
ತೊಟ್ಟಿಲಾದಾಗ

ದೇಹದಾಹವನು ತೀರಿಸಿಕೊಂಡು
ವೀರ್ಯ ಬಿಂದುಗಳ ವಿಸರ್ಜಿಸಿ
ಅತ್ತ ನಡೆದ ತಂದೆಗಳಿಗೆ
ಏನೂ ಮಾತನಾಡದ
ಎಡಗಣ್ಣಿನಿಂದಾದರೂ
ದೋಷಾರೋಪ ತೋರಿಸದೇ
ನೋಡಿಯೂ ನೋಡದಂತೆ
ನಟಿಸುವ ಸಮಾಜ

ಸೇವೆಗೆ ಸಂತುಷ್ಟನಾಗಿ
ಮಹರ್ಷಿ ಅನುಗ್ರಹಿಸಿದ ವರವೇ
ಕಾಳ ಸರ್ಪವಾಗಿ ಕಚ್ಚಿದಾಗ
ಅವಿವಾಹಿತ ತಾಯಿಯಾಗಿ
ಹೆತ್ತ ಮಗನೊಂದಿಗೆ
ತಿರಸ್ಕರಿಸಲ್ಪಟ್ಟ ಹಸಿಗಾಯದ ಹೃದಯದ
ಭಾಗ್ಯಹೀನೆ ಕುಂತಿಗೆ
ಕನ್ಯೆಗೆ ಸಂತಾನ ವರ ನೀಡಿದ ಮುನಿಯಾಗಲೀ
ಕರೆದ ಕೂಡಲೇ
ಆನಂದ ಕಿರಣಕಾಂತಿಯಿಂದ
ವರಿಸಿದ ಕರ್ಮಸಾಕ್ಷಿಯಾಗಲೀ
ಅಪರಾಧಿಯಲ್ಲವೆಂದರೆ
ಬಾಲ್ಯದ ಚಪಲವೇ
ಯಾವಜ್ಜೀವ ಶಾಪವಾದಾಗ
ಆಗಲೂ ಈಗಲೂ
ನಲು ಮಾತಿನಲ್ಲಿ ಮೈಮರೆತು
ಕಾಲುಜಾರಿದ ನನ್ನ ವಾರಸರೇ
ತಲೆ ತಲಾಂತರದಿಂದಲೂ
ಅನುರಾಗದ ಪ್ರವಾಹಗಳಾಗಿ
ದೇಹ ಸುಮಗಳನ್ನು ಸಮರ್ಪಿಸುವುದೇ
ಅಪರಾಧವಾದಾಗ
ಕರುಣೆಯ ಕುಸುಮಗಳು
ಪರಿಮಳಿಸದ ಹೆತ್ತ ತಾಯಂದಿರನು
ಮಾತೃತ್ವ ಪರಿಮಳವನ್ನು
ಮರೆತ ತಾಯಿಂದಿರೆಂದು
ಪತ್ರಿಕೆಗಳಲ್ಲಿ
ದೊಡ್ಡಕ್ಷರಗಳಲ್ಲಿ ಪ್ರಕಟಿಸುವುದೂ
ಕಿರುತೆರೆಯಲ್ಲಿ
ದೊಡ್ಡದಾಗಿ ಪ್ರಚಾರ ಮಾಡುವುದೂ

ದ್ವಂದ್ವ ನೀತಿಯ ಸಮಾಜದಲ್ಲಿ
ಮನುಸ್ಮೃತಿಯ ಲೋಕದಲ್ಲಿ
ತಪ್ಪು ಸರಿಯ ತಕ್ಕಡಿ ಯಾವಾಗಲೂ
ತರುಣಿಯನ್ನೇ ತಪ್ಪಿತಸ್ಥಳನನ್ನಾಗಿ
ಮಾಡಿದಾಗ
ಏನೂ ಅರಿಯದ ವಯದಲ್ಲಿ
ಕೆಲಕಾಲ ಆಡಿಕೊಂಡ
ಗೊಂಬೆಗಳನ್ನು ಕೂಡಾ
ಬಿಸಾಡಲಾರದೇ ಅವುಚಿಗೊಂಡಾಗ
ರಕ್ತದಲ್ಲಿ ರಕ್ತವಾಗಿ
ಕಣದಲ್ಲಿ ಕಣವಾಗಿ
ಲಿಂಗದಲ್ಲಿ ಲಿಂಗವಾಗಿ
ಜನಿಸಿದ ಒಡಲ ಕುಡಿಯನ್ನು
ರೆಕ್ಕೆ ಬಲಿಯದ ಪುಟ್ಟ ಮರಿಯನ್ನು
ಕೈಯಾರ ತ್ಯಜಿಸಲು
ಪ್ರಾಣವೊಪ್ಪದ
ಮಡಿಲಲ್ಲಿ ಎತ್ತಿ ಮೊಲೆಯೂಡಿಸಲಾಗದೇ
ಕಣ್ಣೀರ ಜಲಪಾತಗಳು ಒಂದಾಗಿ
ಎದೆಗಪ್ಪಳಿಸಿದಾಗ
ಉಕ್ಕುವ ಕಣ್ಣೀರ ಕಡಲನ್ನು
ಯಾವ ಕವಿಯೂ ಅಕ್ಷರರೂಪ ನೀಡದಿರುವಾಗ
ತಣಿವಾರದ ಎದೆಯಿಂದ
ಚಿಗುರೆಲೆಯ ಕಂದಮ್ಮಗಳನು
ಮಹಾವೀರ
ವಟವೃಕ್ಷಗಳನ್ನಾಗಿ ಬೆಳೆಸಿ
ಕಡೆತನಕ ಜೀವಿಸುವವಳು
ಅವಳೇ! ಆಲಯ ಧ್ವಜಸ್ತಂಭ!

# ಖೂನಿ ವೈಶಾಖಿ

## ಜಾಲಿಯನ್‌ವಾಲಾಬಾಗ್ ನರಮೇಧಕ್ಕೆ ಈಗ ನೂರು ವರುಷ ನಾನಕಸಿಂಗನ ಕವನ ಸಂಗ್ರಹ 'ಖೂನಿ ವೈಶಾಖಿ'ಯಿಂದ ಆಯ್ದ ಆರು ಕವಿತೆಗಳ ಭಾವಾನುವಾದ




ನಾನಕಸಿಂಗನ ಮೊಮ್ಮಗ ನವದೀಪ ಸೂರಿ ೧೯೨೦ರಲ್ಲಿಯೇ ಪ್ರಕಟವಾದ ನಾನಕಸಿಂಗನ ಪಂಜಾಬಿ ಕವನ ಸಂಗ್ರಹ 'ಖೂನಿವೈಶಾಖಿ'ಯನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದಾರೆ. ಆ ದುರಂತಕ್ಕೆ ನೂರು ವರುಷ ಸಂದ ಸಂದರ್ಭದ ಸಮಾರಂಭದಲ್ಲಿ (೧೩-೪-೨೦೧೯) ಈ ಇಂಗ್ಲಿಷ್ ಕೃತಿಯನ್ನು ಬಿಡುಗಡೆಗೊಳಿಸಲಾಯಿತು.

ನವದೀಪ ಸೂರಿ ೧೯೮೩ರಲ್ಲಿಯೇ ಭಾರತದ ವಿದೇಶೀ ರಾಜ್ಯಭಾರದ ನೌಕರಿಯನ್ನು ಸೇರಿ, ನಾನಾ ಉಚ್ಚ ಹುದ್ದೆಗಳಲ್ಲಿ ಸೇವೆಗೈದು ಸದ್ಯಕ್ಕೆ ಯುಎಇ ರಾಯಭಾರಿಯಾಗಿ ಕೆಲಸ ಮಾಡುತ್ತಿದ್ದಾರೆ.

ಕವಿತೆಗಳ ಜೊತೆಗೆ ಇನ್ನೂ ಕೆಲವು ಲೇಖನಗಳನ್ನೊಳಗೊಂಡ ಈ ಭಾಷಾಂತರಿತ ಕೃತಿಯನ್ನು ಆಧರಿಸಿ, ಆ ದುರಂತದ ಒಂದು ಸಂಕ್ಷಿಪ್ತ ಚಿತ್ರವನ್ನು ಓದುಗರ ಮುಂದಿಡಲು ಇಲ್ಲಿ ಪ್ರಯತ್ನಿಸಲಾಗಿದೆ.

ನಾನಕಸಿಂಗ್ (೧೮೯೭-೧೯೭೧) ಪಂಜಾಬದ ಒಂದು ಬಡ ಹಿಂದೂ ಕುಟುಂಬದಲ್ಲಿ ೪.೭.೧೮೯೭ರಲ್ಲಿ ಜನಿಸಿದ. ಅವನು ಹುಟ್ಟಿದ ಚೇಲಂ ಜಿಲ್ಲೆಯ ಚಾಕ್ ಹಮೀದ್ ಎಂಬ ಚಿಕ್ಕಗ್ರಾಮ ಈಗ ಪಾಕಿಸ್ತಾನದಲ್ಲಿದೆ. ಅವನಿಗೆ ಹೆಸರಿಟ್ಟದ್ದು ಹಂಸರಾಜ ಎಂದು. ಮುಂದೆ ಶಿಖ್‌ಧರ್ಮದ ಪ್ರಭಾವಕ್ಕೊಳಗಾಗಿ ೧೯೧೫ರಲ್ಲಿ ಮತಾಂತರಗೊಂಡು ನಾನಕಸಿಂಗ್ ಎಂದು ಹೆಸರು ಬದಲಾಯಿಸಿಕೊಂಡ. ಪ್ರಾಥಮಿಕ ನಾಲ್ಕನೆಯ ತರಗತಿಯವರೆಗೆ ಮಾತ್ರ ಅವನು ಶಿಕ್ಷಣ ಪಡೆದಿದ್ದ.

ಪಂಜಾಬಿ ಕಾದಂಬರಿಯ ಜನಕನೆಂದೇ ಪ್ರಖ್ಯಾತಿ ಪಡೆದ ನಾನಕಸಿಂಗ್ ಒಟ್ಟು ೫೯ ಕೃತಿಗಳನ್ನು ರಚಿಸಿದ. ಅವುಗಳಲ್ಲಿ ೩೮ರಷ್ಟು ಕಾದಂಬರಿಗಳೇ ಇದ್ದು ಉಳಿದವು ಕೆಲವು ನಾಟಕಗಳು, ಸಣ್ಣಕಥೆಗಳು, ಕವಿತೆಗಳು, ಪ್ರಬಂಧಗಳು ಅಲ್ಲದೆ ಕೆಲವು ಅನುವಾದಗಳೂ ಸೇರಿವೆ. ಅವನ 'ಇಕ್‌ಮ್ಯಾನ್ ದೋ ತಲವಾರಾನ್' ಎಂಬ ಪಂಜಾಬಿ ಕಾದಂಬರಿಗೆ ೧೯೬೨ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆಯಿತು. 'ಪವಿತ್ರ ಪಾಪಿ' ಎಂಬ ಕಾದಂಬರಿ ೧೯೬೮ರಲ್ಲಿ ಚಲನಚಿತ್ರವಾಗಿ ಜನಪ್ರಿಯವಾಗಿತ್ತು. 'ಚಿತ್ತಲಾಹು' ಎಂಬ ಪಂಜಾಬಿ ಕಾದಂಬರಿಯನ್ನು ನಟಾಶಾ ಟಾಲ್‌ಸ್ಟಾಯ್ ರಷ್ಯನ್ ಭಾಷೆಗೆ ಭಾಷಾಂತರಿಸಿದಳು. ಅವನ ಕಾದಂಬರಿಗಳು ಅತ್ಯಂತ ಜನಪ್ರಿಯವಾಗಿದ್ದು ಎಷ್ಟೋ ಜನ ಅವುಗಳನ್ನು ಓದಲೆಂದೇ ಗುರುಮುಖಿ ಲಿಪಿಯನ್ನೂ ಪಂಜಾಬಿ ಭಾಷೆಯನ್ನೂ ಕಲಿತದ್ದುಂಟು. ಮೊಮ್ಮಗ ನವದೀಪ ಸೂರಿ ಪಂಜಾಬಿ ಕಾದಂಬರಿ 'ಪವಿತ್ರ ಪಾಪಿ'ಯನ್ನು The watch maker ಎಂಬ ಹೆಸರಿನಲ್ಲಿ ಅನುವಾದಿಸಿ ೨೦೧೯ರಲ್ಲಿ ಅದನ್ನು ಪೆಂಗ್ವಿನ್ ಇಂಡಿಯಾದ ಮೂಲಕ ಪ್ರಕಟಿಸಿದರು.

'ಖೂನಿ ವೈಶಾಖಿ' ೧೯೨೦ರಲ್ಲಿ ಪ್ರಕಟವಾದೊಡನೆ ಬ್ರಿಟಿಷ್ ಸರಕಾರ ಅದನ್ನು ನಿಷೇಧಿಸಿ ಅದರ ಎಲ್ಲ ಪ್ರತಿಗಳನ್ನೂ ನಾಶಗೊಳಿಸಿತು.

'ಯಾರನ್ನೂ ಜೇಲಿಗೆ ಹಾಕಬಹುದು ಅಥವಾ ವಿಚಾರಣೆ ನಡೆಸದೆ ಎಷ್ಟು ದಿನವಾದರೂ ಬಂಧನದಲ್ಲಿ ಇಡಬಹುದು' ಎಂಬುದು ರೌಲಟ್ ಆ್ಯಕ್ಟಿನ ಮುಖ್ಯ ಆಶಯವಾಗಿತ್ತು. ಲಂಡನ್ನಿನಲ್ಲಿ ನ್ಯಾಯಾಧೀಶನಾಗಿದ್ದ ಸಿಡ್ನಿ ರೌಲಟ್‌ನನ್ನು ರಾಜದ್ರೋಹ ಸಮಿತಿಯ (Sedition Commitee) ಚೇರ್‌ಮನ್ ಆಗಿ ಬ್ರಿಟಿಷ್ ಸರಕಾರ ನೇಮಿಸಿತ್ತು. ಅವನೇ ಈ ಶಾಸನದ ಪ್ರವರ್ತಕನಾಗಿದ್ದ. ಯುದ್ಧ ಸಂಭವಿಸಿದಾಗ ಈ ಆ್ಯಕ್ಟನ್ನು ಹೇಗೋ ಸಹಿಸಬಹುದಾದರೂ ಶಾಂತಿಕಾಲದಲ್ಲಿಯೂ ಅದು ಜಾರಿಯಾದಾಗ ಹಿಂದೂಸ್ತಾನದಲ್ಲಿ ಅದಕ್ಕೆ ಭಾರಿ ಪ್ರತಿಭಟನೆ ವ್ಯಕ್ತವಾಯಿತು. ಮಹಾತ್ಮಾ ಗಾಂಧಿಯವರು ತಮ್ಮ ಸತ್ಯಾಗ್ರಹವನ್ನು ರೌಲಟ್ ಆ್ಯಕ್ಟಿನ ಪ್ರತಿಭಟನಾರ್ಥವಾಗಿ ಹಿಂದೂಸ್ತಾನದಲ್ಲಿ ಅದನ್ನು ಪ್ರಥಮವಾಗಿ ಪ್ರಯೋಗಿಸಿದರು. ಇದನ್ನು Black Act ಎಂದು ಅವರು ಕರೆದರು. ಈ ಸತ್ಯಾಗ್ರಹವೇ ಗಾಂಧೀಜಿಯನ್ನು ನಿಜವಾದ ಅರ್ಥದಲ್ಲಿ 'ರಾಷ್ಟ್ರೀಯ ನಾಯಕ' ನನ್ನಾಗಿಸಿತು ಎಂದು ಹೇಳಬಹುದು. ಮಹಾತ್ಮಾ

### ನಾಡೋಜ ಚೆನ್ನವೀರ ಕಣವಿ



ಗಾಂಧಿಯವರ ಮೊಮ್ಮಗ ತುಷಾರ ಗಾಂಧಿ ಸಿಡ್ನಿ ರೌಲಟ್‌ನ ಮೊಮ್ಮಗ ಜಸ್ಟಿನ್ ರೌಲಟ್‌ನಿಗೆ ಸ್ನೇಹಪರವಾಗಿ ಹೇಳಿದನಂತೆ. "ಬ್ರಿಟಿಷ್ ಸಾಮ್ರಾಜ್ಯದ ಶವದ ಪೆಟ್ಟಿಗೆಗೆ ಮೊದಲ ಮೊಳೆಯನ್ನು ಹೊಡೆಯಲು ಅವಕಾಶ ಒದಗಿಸಿಕೊಟ್ಟದ್ದಕ್ಕೆ ನಿಮ್ಮ ತಾತನನ್ನು ಶ್ಲಾಘಿಸುತ್ತೇನೆ" ಎಂದು. ಈ 'ಖೂನಿವೈಶಾಖಿ' ಭಾಷಾಂತರಿತ ಕೃತಿಗಾಗಿಯೇ ಜಸ್ಟಿನ್ ರೌಲಟ್ 'The sins of the great grand father' ಎಂಬ ಲೇಖನವನ್ನು ಬರೆದು ಕೊಟ್ಟದ್ದಕ್ಕೆ ನವದೀಪ ಸೂರಿ ಕೃತಜ್ಞತೆ ಸೂಚಿಸಿದ್ದಾರೆ. ಪ್ರಸ್ತುತ ಲೇಖನ ಅವನ ವೈಯಕ್ತಿಕ ದೃಷ್ಟಿಕೋನವನ್ನೂ ಸೂಕ್ಷ್ಮ ಸಂವೇದನೆಯನ್ನೂ ವ್ಯಕ್ತಪಡಿಸುತ್ತದೆ.

ರೌಲಟ್ ಆ್ಯಕ್ಟನ್ನು ಪ್ರತಿಭಟಿಸಲು ಜಾಲಿಯನ್ ವಾಲಾಬಾಗ್‌ನಲ್ಲಿ ಕೂಡಿದ ರ್‍ಯಾಲಿಯಲ್ಲಿ ಭಾಗವಹಿಸಲು ನಾನಕಸಿಂಗ್ ಇಬ್ಬರು ಸ್ನೇಹಿತರೊಂದಿಗೆ ಹೋಗಿದ್ದನು. ಯಾವ ಮುನ್ನೆಚ್ಚರಿಕೆಯನ್ನೂ ನೀಡದೆ ಜನರಲ್ ಡಾಯರ್‌ನ ಗುಂಡಿನ ದಾಳಿ ನಡೆದಾಗ ನಾನಕಸಿಂಗ್ ಆ ಗದ್ದಲದಲ್ಲಿ ಕಾಲ್ತುಳಿತಕ್ಕೆ ಸಿಕ್ಕು ಪ್ರಜ್ಞೆತಪ್ಪಿ ಬಿದ್ದಿದ್ದನು. ಅಲ್ಲಿ ಬಿದ್ದ ಹೆಣಗಳ ರಾಶಿಯಲ್ಲಿ ಇವನು ಸತ್ತೇ ಹೋದನೆಂದು ಜನ ಭಾವಿಸಿದ್ದರು. ಮುಂದೆ ಕೆಲಹೊತ್ತಿನ ನಂತರ ಪ್ರಜ್ಞೆ ಬಂದು ಹೇಗೋ ಸಾವರಿಸಿಕೊಂಡು ಹೊರಗೆ ಬಂದಿದ್ದನು. ಇವನ ಜೊತೆಗೆ ಬಂದ ಇಬ್ಬರು ಸ್ನೇಹಿತರು ಆಗಲೇ ಗುಂಡು ಬಡಿದು ಸತ್ತಿದ್ದರು. ಬಾಲುಜಿಗೆ (ಮನೆಯಲ್ಲಿ ಪ್ರೀತಿಗೌರವಗಳಿಂದ ನಾನಕಸಿಂಗ್‌ನಿಗೆ ಹಾಗೆ ಕರೆಯುತ್ತಿದ್ದರು.) ಈ ದಾಳಿಯಿಂದ ಎಡಗಿವಿಗೆ ಧಕ್ಕೆಯಾಗಿ ಕೊನೆಯವರೆಗೂ ಆ ಕಿವಿ ಸರಿಯಾಗಿ ಕೇಳಿಸುತ್ತಿರಲಿಲ್ಲ.

ಇಂಟೀರಿಯಲ್ ದಾಖಲೆಯ ಪ್ರಕಾರ ೧೬೫೦ ಸುತ್ತು ಗುಂಡು ಹಾರಿಸಲಾಯಿತು. ಈ ಗುಂಡಿನ

ದಾಳಿಯಲ್ಲಿ ೩೭೯ ಮಂದಿ ಮರಣಹೊಂದಿ, ೧೧೩೭ ಜನ ಗಾಯಗೊಂಡರು. ಈ ಸಂಖ್ಯೆ ಇನ್ನೂ ಹೆಚ್ಚಿತ್ತು ಎಂದು ಭಾರತೀಯ ಮೂಲಗಳೇ ಹೇಳಿವೆ.

ಜಾಲಿಯನ್‌ವಾಲಾಬಾಗ್ ದುರಂತವನ್ನು ಅವನು ಪ್ರತ್ಯಕ್ಷ ನೋಡಿದ್ದು ನಾನಕಸಿಂಗ್‌ನ ಜೀವನದಲ್ಲಿ ಒಂದು ಪ್ರಮುಖ ಮೈಲುಗಲ್ಲು ಎಂದು ಹೇಳಬಹುದು. ಅವನು ಬ್ರಿಟಿಷ್ ಆಡಳಿತದ ವಿರೋಧಿಯಾಗಿದ್ದ. ರಾಷ್ಟ್ರೀಯತೆಗೆ ಬಲವಾಗಿ ಬೆಂಬಲ ನೀಡುತ್ತಿದ್ದ. ಈ ಹಿಂದೆ ೧೯೨೨ರಲ್ಲಿ ಅವನ ಮಾರ್ಗದರ್ಶಿಯಾಗಿದ್ದ ಗ್ಯಾನಿ ಬಾಗ್ ಸಿಂಗನ ಉಪದೇಶದಂತೆ 'ಗುರುಕಾಬಾಗ್ ಚಳುವಳಿ'ಯಲ್ಲಿ ಭಾಗವಹಿಸಿ ಅವನು ಬಂಧಿಸಲ್ಪಟ್ಟಿದ್ದ. ಲಾಹೋರಿನ ಕುಖ್ಯಾತ ಬೋರ್ಸಟಲ್ ಜೇಲಿನಲ್ಲಿ ಕೆಲವು ತಿಂಗಳು ಕಳೆಯಬೇಕಾಯಿತು. ಆ ಅವಧಿಯಲ್ಲಿ ಅವನಿಗೆ ವೈಯಕ್ತಿಕವಾಗಿ ಪರಿವರ್ತನೆಗೊಳ್ಳಲು ಹಾಗೂ ಲೇಖಕನಾಗಿ ವಿಕಾಸಹೊಂದಲು ಅನುವು ಮಾಡಿತು. ಆಗಿನ ಕಾಂಗ್ರೆಸ್ ಪಕ್ಷದ ಧುರೀಣ ಪಂಡಿತ ಜಗನ್ನಾಥನ ಗಾಢ ಸಂಪರ್ಕ ಒದಗಿತು. ಅವನು ಟ್ರಂಕಿನ ತುಂಬ ಪುಸ್ತಕಗಳನ್ನು ಜೇಲಿನಲ್ಲಿದ್ದ ಇವನಿಗೆ ಕಳಿಸಿಕೊಡುತ್ತಿದ್ದ.

ಆ ಗ್ರಂಥಗಳಲ್ಲಿ ಮುನ್ಶಿ ಪ್ರೇಮಚಂದರ ಕೆಲವು ಕಾದಂಬರಿಗಳೂ ಇದ್ದವು. ದೇವನಾಗರಿ ಲಿಪಿ ಮತ್ತು ನಾನಕಸಿಂಗನಿಗಿದ್ದ ಹಿಂದೀ ಭಾಷೆಯ ಅಲ್ಪ ಪರಿಚಯ ದಿಂದಲೇ ಆ ಕಾದಂಬರಿಗಳನ್ನೋದಿದ. ಅದರ ಪರಿಣಾಮವಾಗಿ ಸಮಾಜ ಸುಧಾರಣೆಗಾಗಿ ಕಾದಂಬರಿ ಬರೆಯಬೇಕೆಂದು ಅವನೊಳಗೆ ತುಡಿದಂತಾಯಿತು. ಆಮೇಲೆ ನಾನಕಸಿಂಗ್ ಅನೇಕ ಕಾದಂಬರಿಗಳನ್ನು ಬರೆಯಲು ಆರಂಭಿಸಿ ಪ್ರಖ್ಯಾತನೂ ಆದನು. ಅವನ ಪ್ರಥಮ ಕಾದಂಬರಿ 'ಮಾತ್ರಾಯಿ ಮಾ' ೧೯೨೪ರಲ್ಲಿ ಪ್ರಕಟವಾಗಿ ಬಹಳ ಜನಪ್ರಿಯತೆ ಗಳಿಸಿತು. ಮುಂದೆ ೫೦ ವರ್ಷಗಳವರೆಗೂ ಅವನು ತಿರುಗಿ ನೋಡಿದ್ದೇಯಿಲ್ಲ. ೧೯೪೭ರಲ್ಲಿ ದೇಶ ಇಬ್ಭಾಗವಾದಾಗ ನಡೆದ ಹಿಂಸೆಯಿಂದ ಇವನ ಹೃದಯ ನಡುಗಿ, ಮೂರು ಕಾದಂಬರಿಗಳಲ್ಲಿ ಅದರ ಭಯಂಕರತೆಯನ್ನು ಚಿತ್ರಿಸಿದ.

೧೯೯೬-೯೭ರಲ್ಲಿ ನಾನಕಸಿಂಗ್‌ನ ಜನ್ಮಶತಮಾನೋತ್ಸವವನ್ನು ದಿಲ್ಲಿಯಲ್ಲಿ ಅದ್ದೂರಿಯಾಗಿ ಆಚರಿಸಲಾಯಿತು. ಭಾರತದ ಪ್ರಥಮ ಪಂಜಾಬಿ ಪ್ರಧಾನಮಂತ್ರಿ ಯಾಗಿದ್ದ ಇಂದರಕುಮಾರ ಗುಜ್ರಾಲ್ ಬಹುಶ್ರುತ ವ್ಯಕ್ತಿಯಾಗಿದ್ದು ಬಾಊಜಿಯ ಸಾಹಿತ್ಯ ಸಂಪತ್ತಿನ ಉಪಾಸಕನಾಗಿದ್ದ. ಅವನೇ ಆಸ್ಥೆ ವಹಿಸಿ ದೊಡ್ಡ ಪ್ರಮಾಣದಲ್ಲಿ ನಾನಕಸಿಂಗನ ಜನ್ಮಶತಮಾನೋತ್ಸವ ಸಮಾರಂಭವನ್ನು ದಿಲ್ಲಿಯಲ್ಲಿ ಆಚರಿಸಿದ್ದಲ್ಲದೆ, ಅದರ ಸ್ಮಾರಕವಾಗಿ ಅಂಚೆ ಚೀಟಿಯನ್ನು ಬಿಡುಗಡೆ ಮಾಡಿದನು.

ಈ ಸಂದರ್ಭದಲ್ಲಿ 'ಖೂನಿವೈಶಾಖಿ' ಕವನ ಸಂಗ್ರಹವನ್ನು ಕುರಿತು ಇನ್ನೂ ಒಂದು ಮಾತನ್ನು ಹೇಳಬೇಕು. ೧೯೨೦ರಲ್ಲಿ ಪ್ರಕಟವಾದೊಡನೆ ಇದನ್ನು ಬ್ರಿಟಿಷ್ ಸರಕಾರ ನಿಷೇಧಿಸಿದ ನಂತರ ಅದರ ಒಂದು ಪ್ರತಿಯೂ ಯಾರ ಕಣ್ಣಿಗೂ ಬಿದ್ದಿರಲಿಲ್ಲ. ಮುಂದೆ ಹೊಸಿಯಾರಪುರದ ಕಾಲೇಜಿನಲ್ಲಿ ಪಂಜಾಬಿ ಭಾಷೆಯ ಅಧ್ಯಾಪಕನಾಗಿದ್ದ ಡಾ॥ ಕೇಸರಸಿಂಗ್ ಗುಪ್ತಾನ ಅಜ್ಜ ಅತ್ಯಂತ ಪುಸ್ತಕ ಪ್ರೇಮಿಯಾಗಿದ್ದ. ಅವರ ಹಳೆಯ ಮನೆಯಲ್ಲಿದ್ದ ಹಳೆಯ ಪೆಟ್ಟಿಗೆಗಳನ್ನು ಝಾಡಿಸಿ ತೆಗೆಯುವಾಗ 'ಖೂನಿವೈಶಾಖಿ'ಯ ಕೈಬರಹದ ಮೂಲಪ್ರತಿಯೊಂದು ಸಿಕ್ಕಿತು. ಆದರೆ ಅಚ್ಚಾದ ಪ್ರತಿಯಲ್ಲ. ಹೀಗಾಗಿ ಅದರ ಪ್ರಕಾಶಕರು ಯಾರೆಂಬುದು ಆಗ ಗೊತ್ತಾಗಿರಲಿಲ್ಲ. ನವದೀಪ ಸೂರಿಯ ತಂದೆ ಕುಲವಂತಸಿಂಗ್ ಸೂರಿ ಪಂಜಾಬಿ ಪುಸ್ತಕಗಳ ಒಬ್ಬ ದೊಡ್ಡ ಪ್ರಕಾಶಕನಾಗಿದ್ದ. 'ಖೂನಿವೈಶಾಖಿ' ಒಳ್ಳೆಯ ಕಾವ್ಯವೆ. ಆದರೆ ಅನೇಕ ಮಹತ್ವದ ಐತಿಹಾಸಿಕ ಅಂಶಗಳನ್ನು ಒಳಗೊಂಡಿದ್ದರಿಂದ ಅದರ ಮಹತ್ವ ಇನ್ನೂ ಹೆಚ್ಚಾಗಿತ್ತು. ಡಾ॥ ಗುಪ್ತಾನನ್ನು ಸಂಪರ್ಕಿಸಿ ಅವನಿಂದಲೇ ಪ್ರಸ್ತಾವನೆ ಬರೆಸಿ ೧೯೮೦ರಲ್ಲಿ ಅದನ್ನು ಪ್ರಕಟಿಸಿದ. ಆಗ ಸಾಹಿತ್ಯಿಕ ಪತ್ರಿಕೆಯೆಂದು ಪಂಜಾಬದಲ್ಲಿ ಹೆಸರಾಗಿದ್ದ 'ಜಾಗೃತಿ'ಯಲ್ಲಿ ಅದರ ಬಗ್ಗೆ ಒಂದು ವಿಮರ್ಶಾತ್ಮಕ ಲೇಖನವೂ ಪ್ರಕಟವಾಯಿತು. 'ಖೂನಿವೈಶಾಖಿ'ಯ ಅಚ್ಚಾದ ಪ್ರತಿ ಅದುವರೆಗೂ ಸಿಕ್ಕಿರಲಿಲ್ಲ. ಆರು ದಶಕಗಳ ನಂತರ ಅದರ ಹೊದಿಕೆ (cover)ಯನ್ನು ನವದೀಪ ಸೂರಿ ಹೇಗೊ ದೊರಕಿಸಿದ. 'The Bagh, The book and our Bauji' ಎಂಬ ಅವನ ಲೇಖನದಲ್ಲಿ ಅದನ್ನು ಹೀಗೆ ಹೇಳುತ್ತಾನೆ : 'It gave 30 May 1920 as the date of publication, Bhai Nanak Singh Kirpal Singh Booksellers as the publishers and Bhai Nanak Singh of Satguru Mehma fame as the author".

ಶಿಖ್‌ಪಂಥಕ್ಕೆ ವೈಶಿಷ್ಟ್ಯಪೂರ್ಣವಾದ ಕೊಡುಗೆಯನ್ನು ನೀಡಿದವರಿಗೆ ಮಾತ್ರ 'ಭಾಯಿ' ಎಂದು ಅವರ ಹೆಸರಿನ ಮೊದಲಿಗೆ ಹಚ್ಚುತ್ತಾರೆ. ಸ್ಥಳೀಯ ಗುರುದ್ವಾರದ ಧರ್ಮಪರಾಯಣನೂ ವಿದ್ವಾಂಸನೂ ಆದ ಗ್ಯಾನಿ ಭಾಗ್ ಸಿಂಗ್‌ನ ಪ್ರಭಾವ ನಾನಕಸಿಂಗನ ಮೇಲೆ ಅಧಿಕವಾಗಿತ್ತು. ೧೯೧೮ರಲ್ಲಿ ಅಮೃತಸರದಲ್ಲಿ ಪ್ರಕಟವಾದ 'ಸತ್ಗುರು ಮೆಹಮಾ'ದಲ್ಲಿ ಶಿಖ್ ಗುರುಗಳನ್ನು ಕೊಂಡಾಡುವ ಸ್ತುತಿಗೀತಗಳಿವೆ. ಮುಂದಿನ ಕೆಲವೇ ವರ್ಷಗಳಲ್ಲಿ ಅದರ ಸಾವಿರಾರು ಪ್ರತಿಗಳು ಮಾರಾಟಗೊಂಡು ಅವನಿಗೆ ಆರ್ಥಿಕ ಭದ್ರತೆಯನ್ನೊದಗಿಸಿದವು. ಅಷ್ಟೇ ಅಲ್ಲ, ಅವನನ್ನು 'ಭಾಯಿ' ಎಂದೂ 'ಕವಿ' ಎಂದೂ ಅಂದಿನಿಂದಲೇ ಕರೆಯಲಾಯಿತು.

'ಖೂನಿ ವೈಶಾಖಿ'ಯಲ್ಲಿ ಮೊದಲು ಗುರುಗೋವಿಂದನ ಬಗ್ಗೆ ಪ್ರಾರ್ಥನಾ ಪದ್ಯವಿದೆ. ಶಾಂತಿಸ್ಥಾಪನೆಯ ಎಲ್ಲ ಪ್ರಯತ್ನಗಳೂ ಮುಗಿದ ಮೇಲೆ ಗುರುಗೋವಿಂದ ಸಿಂಗ್ ಬಲಾತ್ಕಾರವನ್ನು ತಡೆಯಲು ಕತ್ತಿಯನ್ನು ಕೈಗೊಂಡಂತೆ ನಾನಕಸಿಂಗ್ ಲೆಕ್ಕಣಿಕೆ ಹಿಡಿದು ಬ್ರಿಟಿಷರನ್ನು ಎದುರಿಸಿದ. ಪ್ರಾರ್ಥನಾ ಪದ್ಯದ ನಂತರ ರೌಲಟ್ ಬಿಲ್ಲನ್ನು ಜಾರಿಯಲ್ಲಿ ತರುವುದರಿಂದ ಜನಸಾಮಾನ್ಯರಿಗೆ ಆದ ನಿರಾಶೆಯನ್ನು ವರ್ಣಿಸುವುದರಿಂದ ಹಿಡಿದು ಜಾಲಿಯನ್ ವಾಲಾಬಾಗ್ ದುರಂತದವರೆಗಿನ ಎಲ್ಲ ಐತಿಹಾಸಿಕ ಸಂಗತಿಗಳನ್ನು ಒಳಗೊಂಡ ೨೪ ಪದ್ಯಗಳಿವೆ. "ಈ ಕೃತಿಯ ವೈಶಿಷ್ಟ್ಯವೆಂದರೆ, ಐತಿಹಾಸಿಕ ವಿವರಗಳ ನಿರೂಪಣೆಯೊಂದಿಗೆ ಅದಕ್ಕೆ ಸಮ

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಿಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/- ಹಣ ನೀಡಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– ಪ್ರಕಾಶಕ

ತೂಕದಲ್ಲಿ ಕಾವ್ಯದ ರೂಪ ಹಾಗೂ ಧ್ವನಿಯನ್ನು ಕಾಪಾಡಿಕೊಂಡುದು", ಎಂದು ಅಮೃತಸರದ ಗುರುನಾನಕದೇವ ವಿಶ್ವವಿದ್ಯಾಲಯದ ಭಾಷಾ ವಿಭಾಗದ ಮುಖ್ಯಸ್ಥರಾದ ಪ್ರೊ॥ ಎಚ್. ಎಸ್. ಭಾಟಿಯಾ ಹೇಳುತ್ತಾರೆ.

ನಾನು ಇಲ್ಲಿ ಉದಾಹರಣೆಗೆಂದು ಆರು ಕವಿತೆಗಳನ್ನು ಆಯ್ದು ಅವುಗಳ ಭಾವಾನುವಾದವನ್ನು ಕೊಟ್ಟಿದ್ದೇನೆ :

**೧. ವಿವಾದಾಸ್ಪದ ರೌಲಟ್ ಆ್ಯಕ್ಟ್**

ರೌಲಟ್ ಆ್ಯಕ್ಟನ್ನು ಜಾರಿಯಲ್ಲಿ ತಂದು
ಕಣಜದ ಗೂಡನ್ನೆ ಕೆಣಕಿದಂತಾಯ್ತು.
ದೇಶದುದ್ದಕ್ಕೂ ಖಿನ್ನತೆಯ ಜ್ವಾಲೆ ಹಬ್ಬಿಸಿ
ಕುದಿಯುವ ಕೊಪ್ಪರಿಗೆಯಾಯ್ತು ಹಿಂದುಸ್ತಾನ.
ಅದನ್ನು ಗ್ರಹಿಸಲು ಸ್ವಲ್ಪವೂ ಜನಕೆ ಬಿಡುವು ಕೊಟ್ಟಿರಲಿಲ್ಲ.

ದೀರ್ಘ ಸೇವೆಗೆ, ಆಜ್ಞೆಯನ್ನು ತಪ್ಪದೆ ಪಾಲಿಸಿದ್ದಕ್ಕೆ
ಅದೊಂದು ಇನಾಮು ಇರಬೇಕೆಂದು ಭಾವಿಸಿದ್ದರು ಜನತೆ.
ಈ ಕಾನೂನು ಹೊಸಬಂಧನದ ಬೇಡಿ ಎಂದು ಹೊಳೆದಾಗ
ಆಶೆ ಭರವಸೆಗಳೆಲ್ಲ ಮಣ್ಣುಗೂಡಿದವು.

**೨. ಹಿಂದು-ಮುಸ್ಲಿಂ ಐಕ್ಯಸಾರುವ ರಾಮನವಮಿ ಹಬ್ಬ**

ಹಿಂದುಗಳು, ಮುಸಲ್ಮಾನರು ಒಗ್ಗೂಡಿ ಒಂದೆಡೆ ಸೇರಿದರು
ಹಬ್ಬದ ಸಂಭ್ರಮ, ನನ್ನ ಸ್ನೇಹಿತರೆ.
ಮುಸಲ್ಮಾನರು ಅಂದು ಬಾಂಧವ್ಯ ಸಾರಿದರು
ನಂಬಲಾಗದಷ್ಟು, ನನ್ನ ಸ್ನೇಹಿತರೆ.
ಅದು ಹಿಂದೂಗಳ ಹಬ್ಬ ಎನಿಸಿದರೂ
ತಮ್ಮದೇ ಎಂದುಕೊಂಡರು ಮುಸಲ್ಮಾನರು, ನನ್ನ ಸ್ನೇಹಿತರೆ.

ಈ ಹೊಸ ಭಾವನೆಯ ಮಾತಿನಲ್ಲಿ ಬಣ್ಣಿಸಲಾಗದು
ಅದು ಪವಾಡಸದೃಶ, ನಿಜ, ನನ್ನ ಸ್ನೇಹಿತರೆ.
ಸೈಫುದ್ದೀನ್, ಸತ್ಯಪಾಲ ವೈದ್ಯರೊಡಗೂಡಿ
ಐಕ್ಯಪಥವ ತುಳಿದರು, ನನ್ನ ಸ್ನೇಹಿತರೆ.
ಹೂಮಾಲೆ ಹಾಕಿ ಸನ್ಮಾನ ನಮ್ಮ ಧೀರರಿಬ್ಬರಿಗೂ
ಸ್ವಚ್ಛ ಸಂದೇಶ ಬೀರಿದರು, ನನ್ನ ಸ್ನೇಹಿತರೆ.
ತಮ್ಮ ಸ್ನೇಹ ಎಷ್ಟು ಗಟ್ಟಿ ಎಂಬುದನು ತೋರಿದರು
ಹಿಂದು-ಮುಸ್ಲಿಂ ಎಲ್ಲ ಒಂದೇ, ನನ್ನ ಸ್ನೇಹಿತರೆ.
ಹಿಂದೆ ಎಂದೂ ಇಂಥ ಸಾಮರಸ್ಯ ಕಂಡಿರಲಿಲ್ಲ
ಈ ಜಗತ್ತು ಸೃಷ್ಟಿಯಾದಂದಿನಿಂದ, ನನ್ನ ಸ್ನೇಹಿತರೆ.
ಎರಡು ಪಂಥಗಳ ನಡುವಿನ ಸ್ನೇಹದ ಬೀಜ
ಸ್ವರ್ಗದಿಂದಲೇ ಅವತರಿಸಿತ್ತು, ನನ್ನ ಸ್ನೇಹಿತರೆ.
ವಿರೋಧ, ತಾರತಮ್ಯಭಾವ ಅಳಿಸಿಹೋಗಿತ್ತು
ಪರಸ್ಪರರು ಸೋದರರಂತೆ ಕಂಡರು, ನನ್ನ ಸ್ನೇಹಿತರೆ.
ನೀರು ಕುಡಿಯಲು ಒಂದೆ ಗ್ಲಾಸು ಹಂಚಿಕೊಂಡರು
ಒಟ್ಟಾಗಿಯೇ ಊಟಕ್ಕೆ ಕುಳಿತರು, ನನ್ನ ಸ್ನೇಹಿತರೆ.
ಜನ್ಮತಃ ದಾಯಾದಿಗಳಂತೆ ಪ್ರತ್ಯೇಕವಾಗಿದ್ದವರು
ಅದ್ಭುತ! ಈಗ ಒಟ್ಟಾಗಿ ನಿಂತಿಹರು ನನ್ನ ಸ್ನೇಹಿತರೆ.
ಹಿಂದು-ಮುಸ್ಲಿಂ ಸ್ನೇಹದಲಿ ಒಬ್ಬರಿಗಿಂತ ಒಬ್ಬರು ಮಿಗಿಲು
ಎಲ್ಲರಿಗೂ ಸಿಹಿಪಾನಕವ ನೀಡಿದರು, ನನ್ನ ಸ್ನೇಹಿತರೆ.
ನಿಂತರೆಲ್ಲರು ಹಿಂದುವಿನ ಜೊತೆಗಾರರಾಗಿ
ಎಲ್ಲ ಭಕ್ತರ ಮೇಲು ಹೂವನೆರಚಿದರು, ನನ್ನ ಸ್ನೇಹಿತರೆ.
ಹಬ್ಬದ ಮಾರ್ಗದಲಿ ಗುಂಪುಗೂಡಿ ಸಾಲಾಗಿ ನಿಂತರು
ಹಿಗ್ಗಿನ ಹಿಂದೂ ಮೆರವಣಿಗೆ ಹುರುಪುಗೊಳಿಸಿ ನನ್ನ ಸ್ನೇಹಿತರೆ.
ಸ್ವತಃ ಕೃಷ್ಣನೂ ಈ ದೃಶ್ಯ ಕಂಡು ಆಕರ್ಷಿತ
ಬೃಂದಾವನದಲಿ ಹೋಲಿಯಾಡಿದಂತೆ, ನನ್ನ ಸ್ನೇಹಿತರೆ.
ವಿಧಿ ಮಾತ್ರ ಬೇರೊಂದನೇ ಯೋಚಿಸಿತು
ಅಂಗಡಿಗಳನೇಕೆ ತೆರೆದಿರಿ ಇಂದು? ನನ್ನ ಸ್ನೇಹಿತರೆ.
ನಗರದಲ್ಲೆಲ್ಲ ನಾಳೆ ಹರತಾಳವಾಚರಿಸುವರು
ಗುಂಡಿನ ಸುರಿಮಳೆಗೆ ಈಡಾಗುವಿರಿ, ನನ್ನ ಸ್ನೇಹಿತರೆ.

**೩. ಬ್ರಿಗೇಡಿಯರ್ ಜನರಲ್ ಡಾಯರ್ ಮತ್ತು ಗುಂಡು**

ಗಡಿಯಾರ ಸರಿಯಾಗಿ ಐದೂವರೆಗಂಟೆ ಬಾರಿಸಿತು
ಜಾಲಿಯನ್‌ವಾಲಾಬಾಗ್ ಜನರಿಂದ ತುಂಬಿ ತುಳುಕಿತು, ನನ್ನ ಸ್ನೇಹಿತರೆ.
ದೇಶದ ದುಃಖ ತೋಡಿಕೊಳಲೆಂದು ಬಂದ ಮುಖಂಡರು
ಒಬ್ಬೊಬ್ಬರೂ ಗಟ್ಟಿ ದನಿಯಲ್ಲಿ ಮಾತನಾಡಿದರು, ನನ್ನ ಸ್ನೇಹಿತರೆ.
ತಮ್ಮ ಅಸಮಾಧಾನ, ಸಿಟ್ಟು, ತೊಂದರೆ, ದುಃಖಕ್ಕೆ ದನಿಗೊಟ್ಟರು
ಯಾರೂ ಕಿವಿಗೊಟ್ಟು ಕೇಳುವವರೇ ಇಲ್ಲ, ನನ್ನ ಸ್ನೇಹಿತರೆ.
ಏನು ಮಾಡಬಲ್ಲೆವು ನಾವು? ನಮ್ಮ ಆಯ್ಕೆಗಳೇನು?
ಬೆಳಕಿನ ಕಿರಣವೊಂದೂ ಕಾಣಲೊಲ್ಲದು, ನನ್ನ ಸ್ನೇಹಿತರೆ.
ಮುಚ್ಚು ಮರೆಯಿಲ್ಲದೆ ಹತಾಶೆಯ ನುಡಿಗಳಾಡಿದರು ಮುಖಂಡರು
ಸೈನಿಕರು ಕೆಳಗಿಳಿದು ಗುಡುಗುತ್ತ ಬಂದರು, ನನ್ನ ಸ್ನೇಹಿತರೆ.
ಡಾಯರ್‌ನ ಆಜ್ಞೆಗನುಸರಿಸಿ ಆ ಗುರ್ಖಾ ತಂಡಗಳು
ಮತ್ತೆ ಬಿಗಿಯಾಗಿ ಗುಂಪುಗೂಡಿದರು, ನನ್ನ ಸ್ನೇಹಿತರೆ.
ನಿರಂಕುಶ ಪ್ರಭುವಿನಾಣತಿಯಂತೆ ಅವರು ಗುಂಡಿಕ್ಕಿದರು
ಮುಗ್ಧ ಜನರ ಎದೆಗಳಿಗೆ ನೇರವಾಗಿ, ನನ್ನ ಸ್ನೇಹಿತರೆ.
ಹಾರಿಸಿಯೇ ಹಾರಿಸಿದರವರು ಸತತ ಗುಂಡುಗಳ
ಸಾವಿರ, ಸಾವಿರ ಗುಂಡುಗಳನ್ನು, ನನ್ನ ಸ್ನೇಹಿತರೆ.
ಗುಂಡಿನ ಸುರಿಮಳೆಗೆ ನಮ್ಮ ಯುವಕರು ಧರೆಗುರುಳಿದರು
ಹಿಂದೆಂದೂ ಕಾಣದಂಥ ಬಿರುಗಾಳಿ, ನನ್ನ ಸ್ನೇಹಿತರೆ.
ಜರಡಿಯಾದವು ಅವರ ಎದೆ ನೆಲಕ್ಕೆ ಜಾರಿದವು ದೇಹಗಳು
ಪ್ರತಿಯೊಬ್ಬರೂ ಗುರಿಗೆ ಈಡಾದರು, ನನ್ನ ಸ್ನೇಹಿತರೆ.
ಸಹಾಯ ಯಾಚಿಸಿದ ಆರ್ತ ದನಿ ಮುಗಿಲುಮುಟ್ಟಿತು
ಬಂದೂಕುಗಳ ಬಾಯಿಂದ ಮೇಲೆದ್ದಿತು ಹೊಗೆ, ನನ್ನ ಸ್ನೇಹಿತರೆ.
ಅವರೆಲ್ಲ ಕೇಳಿದ್ದು ಒಂದೇ ಒಂದು ತೊಟ್ಟು ನೀರು
ಧೀರ ಯುವಕರು ಮಣ್ಣೊಳಗೆ ಸತ್ತುಬಿದ್ದರು, ನನ್ನ ಸ್ನೇಹಿತರೆ.

ತೀರ ಇಕ್ಕಟ್ಟಿನದು ಬಾಗ್‌ನ ಬಾಗಿಲ ದಾರಿ
ಡಾಯರ್‌ನ ಆಜ್ಞೆ, ಅದೂ ಒಂದು, ನನ್ನ ಸ್ನೇಹಿತರೆ.
ಹಿಂದೆ ಎತ್ತರದ ಗೋಡೆ, ಹೊರಗೆ ಹೋಗಲು ದಾರಿಯೇ ಇಲ್ಲ
ಜಾಲಿಯನ್‌ವಾಲಾಬಾಗ್ ಮೃತ್ಯುವಿನ ಬಲೆ, ನನ್ನ ಸ್ನೇಹಿತರೆ.
ಕೆಲವರು ಸುದೈವಿಗಳು ಹೇಗೋ ಜೀವಂತ ಉಳಿದರು
ಇದ್ದು ಬಿದ್ದಲ್ಲೇ ಸತ್ತುಹೋದರು ಬಹಳಷ್ಟು, ನನ್ನ ಸ್ನೇಹಿತರೆ.
ಕೆಲವರೋಡಿದರು ಎದೆಯ ಸೀಳಿದ ಗುಂಡು ಸಮೇತ
ಎಡವಿ ಬಿದ್ದರು, ಪ್ರಾಣ ಹಾರಿಹೋಯಿತು, ನನ್ನ ಸ್ನೇಹಿತರೆ.
ಚಣದಲ್ಲಿ ಬಾಗ್ ತುಂಬ ಚೆಲ್ಲಾಪಿಲ್ಲಿ ಹೆಣಗಳು
ಯಾರ ಗುರುತೂ ಹತ್ತದೆ ಹೋಯ್ತು, ನನ್ನ ಸ್ನೇಹಿತರೆ.
ಬಹಳ ಜನ ಅವರದಲ್ಲಿ ಶಿಖ್‌ರ ಹಾಗೆ ತೋರಿದರು
ನಡುವೆ ಹಿಂದು ಮುಸಲ್ಮಾನರೆಷ್ಟೊ, ನನ್ನ ಸ್ನೇಹಿತರೆ.
ಇನ್ನೂ ಹರೆಯದ ನಮ್ಮ ಕೆಚ್ಚೆದೆಗಳು ಬಿದ್ದವು
ಕೊನೆಯುಸಿರು, ಮೇಲುಸಿರು ಎಳೆಯುತ್ತ, ನನ್ನ ಸ್ನೇಹಿತರೆ.
ಉದ್ದಕೂದಲು ರಕ್ತದ ಕೆಸರಲ್ಲಿ ತೊಯ್ದು ತಪ್ಪಡಿ
ದೀರ್ಘನಿದ್ರೆ ಅವರನಾವರಿಸಿತು, ನನ್ನ ಸ್ನೇಹಿತರೆ.
ನಾನಕಸಿಂಗ್ ನುಡಿದ : ಅವರ ಸ್ಥಿತಿಯನಾರುಬಲ್ಲರು?
ದೇವರೊಬ್ಬನೇ ಬಲ್ಲ ಎಲ್ಲವನು, ನನ್ನ ಸ್ನೇಹಿತರೆ.




**೪. ಹುತಾತ್ಮರ ಆಹ್ವಾನ**

ನಮ್ಮ ಬಾಗ್ ನೋಡಲು ಒಂದಿಷ್ಟು ವೇಳೆ ಉಳಿಸಿಕೊಳ್ಳಿ
ಈ ಧೀರಾತ್ಮರ ಕಥೆ ಪ್ರತಿಧ್ವನಿಸುತ್ತವೆ, ಓ ಸ್ನೇಹಿತರೆ.
ಭಾರವಾದ ಹೃದಯಗಳಿಂದ ನಮ್ಮ ದೇಶವನಣಕಿಸುವರು
ನಿಮ್ಮ ಪ್ರೀತಿ ಅಪಾರ, ಅದಕೆ ನಮ್ಮ ಧನ್ಯವಾದ, ಓ ಸ್ನೇಹಿತರೆ.
ತಾಯ್ನಾಡಿಗಾಗಿ ನಮ್ಮನ್ನೆ ತೆತ್ತುಕೊಂಡೆವು ನಾವು
ಮನೆ–ಮಾರು ಬಿಟ್ಟು , ಬಂಧುಬಳಗ ತೊರೆದು, ಓ ಸ್ನೇಹಿತರೆ.
ನಿಮ್ಮಂತೆಯೇ ನಾವೂ ಕೂಡ ಜನಸಾಮಾನ್ಯರೆ
ಬದುಕ ಪ್ರೀತಿಸಿ ವಿನೋದಕೂಟದಲಿ ಭಾಗಿ, ಓ ಸ್ನೇಹಿತರೆ.
ದೇಹ ಈಡಾಡಿದೆವು ಅವರ ನಿರ್ದಿಷ್ಟ ಗುರಿಸಾಧನೆಗೆ
ಅವರ ಗುಂಡಿಗೆ ಎದೆಯನೊಡ್ಡಿದೆವು, ಓ ಸ್ನೇಹಿತರೆ.
ಜರಡಿಯಂತಾದ ಈ ದೇಹ ಅವಲೋಕಿಸಿರಿ
ಕಿಕ್ಕಿರಿದಿವೆ ಸಾವಿರ ಘಾಯ, ಓ ಸ್ನೇಹಿತರೆ.
ನೀವೆಲ್ಲ ಮನೆಹಿಡಿದು ಸಮ್ಮೋದದಲ್ಲಿದ್ದಿರಿ
ಹೃದಯದಿಂದ ನಮಗೆ ಗಡೀಪಾರು ಮಾಡಿದಿರಿ, ಓ ಸ್ನೇಹಿತರೆ.
ನೀವೇ ವಚನಕೊಟ್ಟು ಮರೆತುಬಿಟ್ಟಿರಿ ಹೇಗೆ?
ತಿಳಿಯದು ನಿಮ್ಮ ನುಡಿಗೆಂತು ಗೌರವಿಸುವುದು, ಓ ಸ್ನೇಹಿತರೆ.
ಮಾಳಿಗೆ ಹತ್ತಿಸಿ ನಿಚ್ಚಣಿಕೆ ತೆಗೆದುಬಿಟ್ಟಿರಿ ಬಂಧುಗಳೆ
ಅಷ್ಟು ನಿಷ್ಠಾವಂತರಾಗಿ ಉಳಿದಿರಿ ನೀವು, ಓ ಸ್ನೇಹಿತರೆ.
ತುತ್ತುತುದಿಗೊಯ್ದು ನಮ್ಮ ನೂಕಿದಿರಿ ಮೇಲೆ
ಎಷ್ಟೊಂದು ನೋವಾಯ್ತು! ಅದನೆಲ್ಲ ಮರೆತುಬಿಟ್ಟಿರಿ, ಓ ಸ್ನೇಹಿತರೆ.
ಮುಕ್ತರಾಗಬೇಕಿದೆ ನೀವು ಭಾರಿ ಋಣಭಾರದಿಂದ
ಸದ್ಯ ಅದರ ಇತ್ಯರ್ಥವಾಗಲೆಬೇಕು, ಓ ಸ್ನೇಹಿತರೆ.
ಅಲಂಕಾರ ಫಲಕ ಬೇಡ, ಪ್ರತಿಮೆ ಸ್ಮಾರಕಗಳೂ ಬೇಡ
ನಾವು ಸತ್ತ ಸ್ಥಳದ ಯಾವ ಕುರುಹೂ ಬೇಡ, ಓ ಸ್ನೇಹಿತರೆ.
ಸಿದ್ಧರಾಗಿರಿ ಈಗ, ತೆಗೆದುಕೊಳ್ಳಿ ಈ ಮಾನಸಿಕ ಭಾರ
ಕಾಲ ಬಂದಿದೆ ನಿಮ್ಮ ಅವಿವೇಕವನು ತ್ಯಜಿಸಿ, ಓ ಸ್ನೇಹಿತರೆ.
ಮನುಷ್ಯರಾಗಿರಿ ಮೊದಲು, ದೇಶಸೇವೆಗೆ ಕಂಕಣಬದ್ಧರಾಗಿ
ಈ ವಚನ ಪಾಲಿಸಲು ಹಿಂದೆಗೆಯದಿರಿ, ಓ ಸ್ನೇಹಿತರೆ.
ನಾನಕಸಿಂಗ್ ನುಡಿದ : ಒಂದಲ್ಲ ಒಂದು ದಿನ ನೀವು ಸತ್ತೇ ಸಾಯುವಿರಿ
ದೇಶಕ್ಕಾಗಿ ಯಾಕೆ ಸಾಯಬಾರದು ಹೇಳಿ, ಓ ಸ್ನೇಹಿತರೆ.

**೫. ಕವಿಯ ಚಿಂತನೆ**

ನಾಳೆಯ ಬಗ್ಗೆ ನಾನೇನು ಹೇಳಬಲ್ಲೆ?
ಪಿಸುಗುಟ್ಟದಿರು ಎಂದು ಹೃದಯ ಎಚ್ಚರಿಸುತಿದೆ.
ಪ್ರತಿ ಮೂಲೆಗೂ ಸಾಲು ಸಾಲು ದೇಹ ಚೆಲ್ಲಾಡಿವೆ.
ಹೆಣಗಳ ಪೇಟೆಯಲ್ಲಿ ಮಾರುವವರೇ ಕಾಣಿಸರು,
ಸಾವೂ ತನ್ನ ಮುಖವ ತಿರುಗಿಸಿದ ಹಾಗೆ ತೋರುವದು
'ಸಾಕು' ಹೇಳಿತದು, 'ಅವು ಇದ್ದಲ್ಲೆ ಬಿದ್ದಿರಲಿ'.
ಬಿಳಿ ಅರಿವೆ ಅವರ ಗಾಢ ನಿದ್ರೆಯನು ಮುಚ್ಚಿತು
ನನಗಾಗಿ ತಮ್ಮ ಮುಖ ಮೇಲೆತ್ತಿ ಕಣ್ಣು ತೆರೆಯರು
ತಾಯಂದಿರ ಕರುಳ ಆ ಕೋಮಲ ಬಾಲಕರು
ಸುಡು ಬಿಸಿಲಲ್ಲಿ ಮಲಗಿವೆ, ನೆರಳಿಗೊಂದು ಗಿಡವಿಲ್ಲ.
ಹಿಂದಿನ ದಿನ ಸಂತೋಷದಿಂದಲೆ ಮನೆ ಬಿಟ್ಟರವರು
ಈಗ ಕೈಬಿಟ್ಟರು, ಹೆಸರುಗಳು ಯಾರಿಗೂ ಗೊತ್ತಿಲ್ಲ.
ಮನೆ ಬಿಟ್ಟು ಬಂಧುಬಳಗವ ತೊರೆದ ಸನ್ಯಾಸಿಗಳ ಹಾಗೆ
ಕಣ್ಮರೆಯಾಗಿ ಹೋದರು ಬೇರೆ ಮತ್ತೊಂದು ವಲಯಕ್ಕೆ.
ನುಡಿದ ನಾನಕಸಿಂಗ್, ಅವರಲ್ಲಿ ಪ್ರತಿಯೊಬ್ಬರಿಗೂ
ಗುಂಡು ತಾಗಿ ಅವರ ಹೆಸರನ್ನೂ ಜೊತೆಗೆ ಒಯ್ದುಬಿಟ್ಟವು.

**6. ಕೊನೆಯ ಬೀಳ್ಕೊಡುಗೆ**

ಎಂದೆಂದಿಗೂ ನಮ್ಮ ನೆನಪಿರಲಿ ನಿಮಗೆ
ಗೆಳೆಯರನು ನೀವು ಮರೆಯಬಹುದು, ನಿಮ್ಮ ವೀರರನ್ನಲ್ಲ.
ಪರಿಸ್ಥಿತಿ ಎನಿತು ನಿಸ್ತೇಜವಾದರೂ ಎಂದೂ ನಿರಾಶರಾಗದಿರಿ.
ಕಾಯಲು ಸಿದ್ಧರಾಗಿ, ಲವಲೇಶವೂ ಕಾಳಜಿ ಮಾಡದಿರಿ
ನಮ್ಮ ಸತ್ಯವಚನದಲಿ ಎಂದಾದರೂ ಸಂದೇಹ ಬಂದರೆ ನಿಮಗೆ
ನಮ್ಮ ದೇಹಗಳ ಹೊಕ್ಕಿರುವ ಗುಂಡುಗಳ ನೋಡಿ.
ನಿಮಗಿದೊ ನಮ್ಮ ಕೊನೆಯ ವಿದಾಯ
ನಾವು ಕಲಿಸಿದ ಪಾಠ ಎಂದೆಂದೂ ಮನಸ್ಸಿನಲ್ಲಿರಲಿ.

**ನಾಡೋಜ ಚೆನ್ನವೀರ ಕಣವಿ**
'ಚೆಂಬೆಳಕು', ೯ನೆಯ ಅಡ್ಡರಸ್ತೆ, ಕಲ್ಯಾಣನಗರ, ಧಾರವಾಡ – ೫೮೦ ೦೦೭

**ಕ್ರಿಯಾ–ನವಕರ್ನಾಟಕ ಜಂಟಿ ಯೋಜನೆ : ಮಾರ್ಕ್ಸ್ ೨೦೦–ಕ್ಯಾಪಿಟಲ್ ೧೫೦**

## 'ಕಾರ್ಲ್ ಮಾರ್ಕ್ಸ್ : ಬಂಡವಾಳ' ಕೃತಿ ಬಿಡುಗಡೆ

ಬಹು ನಿರೀಕ್ಷೆಯ ಹಾಗೂ ಮಹತ್ವಾಕಾಂಕ್ಷೆಯ ಪ್ರಕಟಣೆ, ಕಾರ್ಲ್ ಮಾರ್ಕ್ಸ್ ಅವರ 'ಬಂಡವಾಳ (ಸಂಪುಟ ೧)'ರ ಬಿಡುಗಡೆ ಕಾರ್ಯಕ್ರಮವನ್ನು ೨೦೧೮ ಆಗಸ್ಟ್ ೨ರಂದು ಹಮ್ಮಿಕೊಳ್ಳಲಾಗಿದೆ. ಬೆಂಗಳೂರಿನ ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ಆವರಣ (ಮಹಾರಾಣಿ ಸೈನ್ಸ್ ಕಾಲೇಜು ಪಕ್ಕ)ದಲ್ಲಿರುವ ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ಅಂದು ಬೆಳಿಗ್ಗೆ ೧೦–೦೦ ಗಂಟೆಗೆ ಆರಂಭವಾಗುವ ಈ ಸಮಾರಂಭದ ಮೊದಲನೇ ಗೋಷ್ಠಿಯಲ್ಲಿ 'ಬಂಡವಾಳದ ೧೫೦ ವರ್ಷಗಳು ಮತ್ತು ಎಡಪಂಥದ ಮರುಶೋಧನೆ' ಕುರಿತು ಪ್ರೊ॥ ಪ್ರಭಾತ್ ಪಟ್ನಾಯಕ್ ದಿಕ್ಸೂಚಿ ಭಾಷಣ ಮಾಡಲಿದ್ದಾರೆ. ಡಾ॥ ನಟರಾಜ ಹುಳಿಯಾರ್, ಡಾ॥ ಎಚ್. ಎಸ್. ಅನುಪಮ, ಡಾ॥ ಕೆ. ಎನ್. ಉಮೇಶ್ ಸಂವಾದದಲ್ಲಿ ಭಾಗವಹಿಸುವರು. ಕಾ॥ ಶ್ರೀರಾಮರೆಡ್ಡಿ ಅವರ ಅಧ್ಯಕ್ಷತೆ.

ಮಧ್ಯಾಹ್ನ ೨ ಗಂಟೆಗೆ ಎರಡನೇ ಗೋಷ್ಠಿಯಲ್ಲಿ 'ಬಂಡವಾಳ' ಇಂದು ಯಾಕೆ ಓದಬೇಕು? – ಕುರಿತು ಶ್ರೀ ಜಿ. ರಾಜಶೇಖರ್, ಡಾ॥ ಬಿ. ಎಂ ಪುಟ್ಟಯ್ಯ, ಕಾ॥ ವಸಂತರಾಜ ಎನ್. ಕೆ. ಮಾತನಾಡುವರು. ಪ್ರೊ॥ ವಿ. ಎನ್. ಲಕ್ಷ್ಮೀನಾರಾಯಣ ಅವರ ಅಧ್ಯಕ್ಷತೆ.

ಸಂಜೆ ೪ ಗಂಟೆಗೆ ಕೃತಿ ಬಿಡುಗಡೆ ನಾಡೋಜ ಡಾ॥ ಬರಗೂರು ರಾಮಚಂದ್ರಪ್ಪ ಅವರಿಂದ. ಡಾ॥ ಎಲ್. ಹನುಮಂತಯ್ಯ, ಕಾ॥ ಎಂ. ಎಸ್. ಮೀನಾಕ್ಷಿ ಸುಂದರಂ, ಕಾ॥ ಡಿ. ಎ. ವಿಜಯಭಾಸ್ಕರ್ ಮತ್ತು ಕಾ॥ ಕೆ. ನೀಲಾ ಭಾಷಣಕಾರರು.

ಅಧ್ಯಕ್ಷತೆ : ಡಾ॥ ಸಿದ್ದನಗೌಡ ಪಾಟೀಲ ಅವರದು.

ಹೆಚ್ಚಿನ ಸಂಖ್ಯೆಯಲ್ಲಿ ಎಲ್ಲರೂ ಭಾಗವಹಿಸಬೇಕಾಗಿ ಕೋರಿಕೆ.

**ಎನ್. ಕೆ. ವಸಂತರಾಜ**
ಕ್ರಿಯಾ ಮಾಧ್ಯಮ

**ಎ. ರಮೇಶ ಉಡುಪ**
ನವಕರ್ನಾಟಕ ಪ್ರಕಾಶನ




# ಸ್ವಾವಲಂಬಿ

ಅಕ್ಬರ್ ಸಿ. ಕಾಲಿಮಿರ್ಚಿ

> ದುಡಿಮೆ ಮಾಡಿದ್ದಾತು, ಪ್ರವಾಸ ಕಂಡಿದ್ದಾತು. ಮಕ್ಕಳನ್ನು ಸಾಕಿದ್ದಾತು ಒಬ್ಬಬ್ಬೊರಿಗೆ ಒಂದೊಂದು ಸ್ವಾವಲಂಬನೆ ಕೆಲಸ. ಯಾರ ಹತ್ತಿರನು ಕೆಲಸ ಕೇಳಿ ಹೋಗಂಗಿಲ್ಲ. ಮಕ್ಕಳ ಸೇವೆಗೆಂದು ಹುಡುಕಿ ಬರುವಂತೆ ಮಾಡಿದ್ದನು. ಟಾಂ ಟಾಂ, ಐಸಿಆರ್ ಟ್ರ್ಯಾಕ್ಟರ್, ದಿನವೂ ಕೆಲಸ. ರಜೆ ಅಂತು ಇಲ್ಲವೇ ಇಲ್ಲ. ಮಕ್ಕಳಿಗೆ ಶಿಕ್ಷಣ ಇಲ್ಲ. ತಾನು ಕಲಿತಿರಲಿಲ್ಲ. ದುಡಿದು ಬದಕೇನಂದರೆ ಕೆಲಸ ಮೈ ತುಂಬಾ. ಮೈಗಳ್ಳರಾಗಿ ದುಡಿಯದವರು ಯಾವತ್ತು ದರಿದ್ರರೇ. ಕಚೇರಿ, ನೌಕರಿ, ತಿರಗಾಟ ಕಂಡವರಿಗೆ ಕೈಕಾಲು ಹಿಡಿಯುವ ಗೋಜುಗಳಿಲ್ಲ. ದಿನವೂ ಸಂಪಾದನೆ. ಎಲ್ಲ ಸ್ವಂತಕ್ಕೆ ಉಳಿಯುತ್ತದೆ. ಸಾಲದ ಭಯವಿಲ್ಲ ಏನಿದ್ದರೂ ನನ್ನ ಬೇಡಿಯೇ ಬರಬೇಕು.

ಮನೆಯಲ್ಲಿ ಬಡತನ. ಕೈ ಬೆರಳಷ್ಟು ಮಕ್ಕಳು. ಗುಡಿಸಲಿನ ಪುಟ್ಟ ಜಾಗದಲ್ಲಿ ಎಲ್ಲರೂ ಮಲಗಿ ಏಳಬೇಕು. ಒಂದು ದಿನ ಎರಡು ದಿನವಲ್ಲ ಆಯುಷ್ಯ ಪೂರ ಬದುಕಬೇಕು ಹತ್ತು ಮಕ್ಕಳನ್ನು ಕಟ್ಟಿಕೊಂಡು. ದೇವಪ್ಪನಿಗೆ ಇದ್ಯಾವುದರ ಬಗ್ಗೆಯೂ ಚಿಂತೆ ಇಲ್ಲ. ಬೆಳಿಗ್ಗೆ ನಾಲ್ಕು ಗಂಟೆಗೆ ಎದ್ದು ಮಂದಿ ಹೊಲದಾಗ ದುಡಿಯೋದೆ ಈತನ ಕೆಲಸ. ದೇವಪ್ಪ ಎದ್ದಾಗ ಮಕ್ಕಳೆಲ್ಲ ಹೆಣದಂಗ ಮಲಗಿರವು. ಹೆಣ್ತಿ ಕೆಂಚವ್ವ ಗಂಡೆದ್ದ ಸದ್ದಿಗೆ ಲಟಕ್ಕನೇ ಏಳಾಕಿ. ದೇವಪ್ಪ ಮಾತಾಡದ ಒಂದು ಚಂಬು ನೀರ ಗಡಿಗ್ಯಾಗ ತಗೊಂಡು ಮುಖಕ್ಕೆ ಕೈಯಾಡಿಸಿದ. ಬಾಯಾಗ ಹಾಕೊಂಡು ಉಗಿದ. ಆ ನೀರು ಅಂಗಳನ ತೊಯ್ಯಲಿಲ್ಲ. ಅಲ್ಲೇ ಹೊಸಲ್ಯಾಗ ಚೆಲ್ಲಿದವು. ಕಾಲಾಗ ಚಪ್ಪಲಿ ಇಲ್ಲದೆ ಹಾಗೆ ನಡಕೊಂಡೋದ. ಸೂರ್ಯ ಇನ್ನೂ ಕೆಂಪಛಾಯೆಯನ್ನು ಬೀರಿದ್ದಿಲ್ಲ. ನಸುಗತ್ತಲಿನೊಳಗ ಹೊಲ ಸೇರಿ ಅಲ್ಲಿ ಕಟ್ಟಿಹಾಕಿದ್ದ ದನ–ಕರುಗಳ, ಎತ್ತುಗಳ ಸೆಗಣಿ ಗುಡ್ಸಿ ತಿಪ್ಯಾಗ ಹಾಕಿದ. ಗಳೆ ಹೊಡೀಬೇಕಂತ ಎತ್ತಿನ ಮೈಮೇಲೆ ಸವರಿದ. ಆಟೊತ್ತಿಗೆ ಕೋಳೀನೂ ಕೂಗಿತು. ತನ್ನಿಚ್ಚೆಲೇ ಮಾತಿಲ್ಲ ಕತೀ ಇಲ್ಲ. ಕೆಲಸ ಸುರು ಮಾಡಿದ. ಆಳುಗಳು ಸರಿಯಾಗಿ ಕೆಲ್ಸ ಮಾಡ್ತಾವೋ ಅಲ್ಲಂತ ಹೊಲದ ಸೌಕಾರನೂ ಬಂದ ದೇವಪ್ಪನ ನೋಡಿ, “ಇವತ್ತ ಈ ಎರಡು ಪಟ್ಟಿ ಹರಗಿಕೊಂಡ ಬಾ. ನಾಳೆ ಮ್ಯಾರಿ ಹೊಲಕ ಹೋಗಿಯಂತ” ಎಂದು ಹೇಳಿ ಊರಾಕ ಬಂದ. ಮುಂಜಾನೆ ಐದಕ್ಕ ಗಳೇ ಹೊಡೆಕ ಹತ್ತಿದವ ಒಂಭತ್ತು ಗಂಟೆಗೆ ಎತ್ತುಗಳಿಗೆ ದಣಿವಾರಿಸಬೇಕಂತ ಕೊಳ್ಳ ಹರದು ತಾನು ಊರಾಕ ಬಂದ. ಆಟತ್ತಿಗೆ ಹುಡುಗ್ರು ಎದ್ದು ಅಲ್ಲೊಂದು ಇಲ್ಲೊಂದು ಕುಂತಿದ್ವು. ಅಪ್ಪನ ನೋಡಿ ಓಡಿಕೋತ ಮನೆಗೆ ಹೋಗಿ ತಾಯಿಗೆ ಹೇಳಿದ್ವು. ಆಟತ್ತಿಗೆ ರೊಟ್ಟಿ ಸುಟ್ಟು ಪಲ್ಲೆ ಮಾಡಿ ಹಂಚ ಕೆಳಗಿಳಿಸಿದ್ಲು. ಉಣ್ಣೋ ಮಕ್ಕಳ ಕರೆದು ತಿನ್ನಾಕ ಕೊಟ್ಲು. ಗಂಡನು ಮಾರಿ ತಕ್ಕೊಂಡು ಉಣ್ಣಾಕ ಕುಂತ. ಅಪ್ಪನ ಸದ್ದಿಗೆ ಮಕ್ಳು ಮಾತೇ ಆಡಲಿಲ್ಲ. ಹೇಣ್ತೀನು ಅಷ್ಟೆ. ಗಂಡಗ ಬಾಳ ಹೆದರಾಕಿ. ದೇವಪ್ಪನು ಚಂಡ ನೆಲಕ ಹಾಕಿ ಜಬರದಸ್ತಾಗಿ ಹತ್ತ ಹನ್ನೆರಡು ರೊಟ್ಟಿ ತಿಂದು ಎದ್ದ. ಮಕ್ಕಳಿಗೆ

ಹೇಣ್ತಿಗೆ ಏನು ಅನ್ನದೇನ ಹೊಲದ ಕಡೆ ಹೊಂಟ. ಆಟತ್ತಿಗೆ ಕೆಲಸ ಮಾಡೋ ಆಳುಗಳು ಬಂದಿದ್ವು. ಬೀಜ ಹಾಕೋ ಕೆಲ್ಸ ಸುರುವಾತು. ಮಧ್ಯಾಹ್ನದ ಹೊತ್ತು. ಊಟಕ್ಕ ವ್ಯಾಳೆ ಆತು. ಗಿಡದ ಕೆಳಗ ಬುತ್ತಿ ತಂದ ಎಲ್ರು ಬಿಚ್ಚಿ ಕುಂತ್ರು. ದೇವಪ್ಪ ಒಬ್ಬನ ಬರಲಿಲ್ಲ. ಎಲ್ರು ಕರದರೂ ಅಂವ ಏನ ಜುಮ್ಮ ಅನಲಿಲ್ಲ. ತಮ್ಮ ಪಾಡಿಗೆ ತಾವು ಬಾಯಿ ಆಡಸಾಕ ಹತ್ತಿದ್ರು.

ಇಂವ ಮನ್ಯಾಗ ಹೇಣ್ತಿಗೆ ಬುತ್ತಿ ಹೇಳಿಬರಲಿಲ್ಲ. ಆಕೆನೂ ಗಂಡಗ ಮಾತಾಡಲಿಲ್ಲ. ಏನಾತು ಊರಾಕ ಹೋಗಿ ಬಂದ್ರಾತು ಅಂತ ನಡೆದ. ಎದುರಿಗೆ ಸೌಕಾರ ಭೆಟ್ಟಿ ಆದ. "ಯಾಕಪ ಊರಕಡೆ ಹೊಂಟೆಲ್ಲ. ಹರಗದ ಮುಗಿತನ" ಅಂದ. ಇಲ್ಲಂತ ಸನ್ನೆ ಮಾಡ್ದ. "ಜಲ್ದೀ ಬಾ ಅಗರ. ನಾನು ಊರಿಗೆ ಹೋಗದೈತಿ" ಎಂದು ನುಡಿದ. ಇಂವ ಮಾತ ಕಡಿಮೆ ಆದ್ರು ಹೇಳೋದು ಧರ್ಮ. ಮನೆಗೆ ಹೋಗಿ ಮತ್ತಷ್ಟು ಉಂಡು ತಿರಿಗಿ ಬಂದ. ಆಟತ್ತಿಗೆ ಎತ್ತುಗಳು ಕೂಡ ವಿಶ್ರಮಿಸಿದ್ದವು. ದೇವಪ್ಪ ಬಂದಿದ್ದ ನೋಡಿ ಎದ್ದು ನಿಂತಿದ್ದವು. ಮತ್ತೆ ಹೆಗಲೊಡ್ಡಿ ನೊಗ ಹೊತ್ತು ಜಗ್ಗಕ್ಕ ಹತ್ತಿದವು. ಉಳಿದ ನಾಕ ಎಕರೆ ಹರಗಿ ಮುಗಿಸಿದ. ಹೊತ್ತು ಮುಳುಗಿದ ಮ್ಯಾಲೆ ಊರಾಕ ಗಳೆ ಹೊಡಕೊಂಡು ಬಂದು, ಸಾವುಕಾರನ ಮನೆಗೆ ಹೋಗಿ ಎತ್ತು ಕಟ್ಟಿ ಕೆಲಸದ ವಿವರನೆಲ್ಲ ಹೇಳಿ ಮನೆಗೆ ಬಂದಾಗ ರಾತ್ರಿ ಒಂಭತ್ತು ಹೊಡಿತು. ಹೇಣ್ತಿ ಕಾಯೋಕತ ಕುಂತಿದ್ಲು. ಬಂದವನ ಚಂಬ ನೀರು ತಕ್ಕೊಂಡು ತೊಳಕೊಂಡ. ಗಂಗಾಳದಾಗ ಪಲ್ಲೆ, ಚಟ್ನಿ, ಮುಂದ ರೊಟ್ಟಿ ಕೆರ್ಸಿ ಇಟ್ಟಿದ್ಲು. ಹುಡುಗರ ಉಂಡ ಉಳಿದ ಅನ್ನ ಸಾರು ಅಲ್ಲೇ ಇತ್ತು. ತನಗ ತಿಳಿದಷ್ಟು ತಾನು ಊಟ ಮಾಡಿದ್ಲು. ಗಂಡಗ ತನಗ ಹಾಸಿಗಿ ಮಾಡಿದ್ಲು. ಹುಡೆಗ್ರಲ್ಲ ನಿದ್ರೆ ಹೋಗಿದ್ವು. ಒಂದು ಮಾತ ಆಡ್ದ ಅವ ಮಲಕಂಡ. ನಸುಗಿಂದ ಹೊತ್ತು ಮುಣಗೋವರೆಗೂ ದಣಿದು ಬಂದಿದ್ದ. ನಿದ್ರೆ ಅಪ್ಪಿಕೊಂತು. ಕೆಂಚವ್ವನು ಅಂತ ಶ್ಯಾಣ್ಯಾಕಲ್ಲ. ಮಂದ ಬುದ್ದೀದ. ಹಂದಿ ಹಡದಂಗ ಹತ್ತು ಹಡಿದದ್ದಂತು ಖರೆ. ಅಷ್ಟೂ ಬದಕ್ಯಾವ. ಅದರಾಗ ೬ ಗಂಡು ೪ ಹೆಣ್ಣು. ಗಂಡಗರ ಹೇಣ್ತಿಗರ ಯಾವ ಕೊರಗೂ ಇಲ್ಲ. ಅಂವ ಅಡ್ಡಾದ ಮೇಲೆ ಎಲ್ಲ ಎತ್ತಿಟ್ಟು ಗಂಡನ ಬಗಲಾಗ ಬಂದು ಉರಳಿದ್ಲು. ಆಕೆಗೂ ಪಕ್ಕಂತ ಕಣ್ಣುಮುಚ್ಚಿದವು. ಯಥಾಪ್ರಕಾರ ನಸಿನ್ಯಾಗ ಎದ್ದ. ಮಾರಿಮ್ಯಾಗ ಕೈ ಆಡ್ಸಿಕೊಂಡು ಸೌಕಾರನ ದನದ ಕೊಟ್ಟಿಗೆಗೆ ಹೋಗಿ ಎತ್ತು ಬಿಚ್ಚಿಕೊಂಡು ಹೊಲಕ ಹೋದ. ಮ್ಯಾರಿ ಹೊಲದ ಕೆಲಸನು ಬಾಳಯಿತ್ತು. ಬಾಳವಿಮಾಡಕ ಮುಂದ ಅನಿಸಿಕೊಂಡವ. ಬೇಸರಿಲ್ಲದ ಮಾಡಿದ. ಇವನ ಕಂಡ್ರ ಎಲ್ಲರಿಗೂ ಪ್ರೀತಿ. ಎಂದೂ ಆಲೋಚನೆ ಮಾಡವಲ್ಲ. ಹೊಲ್ದಗ ಬೀಜ ಊರಿ ಕಟ್ಟಿಗೊಂಡು ಬೆಳವಂತ ಸಿರಿಧಾನ್ಯಗಳ ಬೆಳೆ ನೋಡಕೊಂಡು ಖುಷಿ ಪಡುವಾತ. ಯಾವ ಚಟಾನೂ ಇಲ್ಲದ ಬಾಯಿ ಮುಚ್ಚಿಕೊಂಡು ದುಡೇವ. ಮೊದಮೊದಲು ಸುಮ್ಮನ ಇದ್ದದ್ದ ಬಾಳ. ಮೂಗನೇನೋ ಎಂಬಂತೆ ಇರುತ್ತಿದ್ದ. ದೇವಪ್ಪಗೂ ಈಗೀಗ ಬದಲಾವಣೆಯ ಆಸೆ ಹುಟ್ಟಿಕೊಂಡವು. ಕಂಡವರ್ನ ಮಾತಾಡೋದ ಕಲಿತ.

ಅದು ಇದು ವಿಚಾರ ತಿಳಕಂಡ. ಸೌಕಾರ ಮಗ್ಗಲ ಹೊಲದ ನಿಂಗ ದೇವಪ್ಪನ ವಿಚಾರ ಮಾಡಿದ. ಅಲ್ಲಲೇ! ಇಂಥ ದೊಡ್ಡ ಸಂಸಾರ ಇಟ್ಟುಕೊಂಡು ಸೌಕಾರಂತಕ ದುಡಿದ್ರ ನೀ ಎಂದು ಉದ್ಧಾರಾದೀದಿ. ಬಿಡು ಇದ್ನ. ಬ್ಯಾರೆ ಏನಾರ ಮಾಡಿ ಬದುಕೋಗು. ಹುಡ್ರು ದೊಡ್ಡವಾದ ಮೇಲೆ ಅವ್ರಿಗೆ ಬಾಳೆವು ಏನ್ ಹಚ್ಚಿತೀ. ಬದುಕು ಹ್ಯಾಂಗ. ಅವಕ ಮೈಗೇನೂ, ಹೊಟ್ಟೀಗೇನು ಕಿಂಚತ್ತಾರ ಕಬರೈತೇನು. ವಿಚಾರ ಮಾಡು. ಮಕ್ಕಳ ಹಡದ್ರು ಆಗಲಿಲ್ಲ. ಅವರನ್ನೆಲ್ಲ ಸಾಕೋದೊರಳಗ ಸಾರ್ಥಕತೆ ಇರಬೇಕು. ಸೌಕಾರ ಮಂದಿಗೆ ಸ್ವಾರ್ಥ ಇದ್ದಂಗ ನಮಗ ಸ್ವಾಭಿಮಾನ ಇರಬೇಕು. ಅಂದ್ರ ಜೀವನ ಬದಲಾಗುತ್ತ ಇಲ್ಲಂದ್ರ ಅಡ್ಡಾಡೋ ನಾಯಿ ಹಂದಿಯಂಗ ನಮ್ಮ ಬಾಳವಿ. ಯಾರು ತಿದ್ದದಿಲ್ಲ ತೀಡಂಗಿಲ್ಲ. ಹರಕಮುರಕ ಜೀವನ. "ಇಂಥ ಮಾತು ಕೇಳಿಸಿಕೊಂಡ ದೇವಪ್ಪಗ. ಇಡೀ ದಿನ ಕಾಡಕ ಹತ್ತಿತು. ಕುಂತ್ರು ನಿಂತ್ರು ಸಮಾಧಾನ ಇಲ್ಲಂಗಾತು. ಹೌದು ನಾ ಬದಲಾಗಬೇಕು ಏನಾರ ಹೊಸ್ದ ಮಾಡಬೇಕು. ಊರು ಬಿಟ್ಟು ಹೋದ್ರ ಚಿಂತಿಲ್ಲ. ನಾ ದುಡಿದು ಮುಂದಕ ಬರಬೇಕು. ಹೇಣ್ತಿ ಮಕ್ಕಳನ ಎಗ್ಗಿಲ್ದಂಗ ಬೆಳಸಬೇಕು. ಅವರ್ರಿಗೂ ಬಾಳೆವ ಹಚ್ಚಬೇಕು. ಮೈಮುರುದು ದುಡಿಯೋದ ಕಲ್ಸಬೇಕು. ದುಡಿದು ಹದವಾಗಿ ಕಾಣಬೇಕು" ಅಂದವನ ದೇವಪ್ಪ ಸಂಚಾರ ನಡೇದ ಬಿಟ್ಟ. ಸೌಕಾರಗ ಹೇಳಲಿಲ್ಲ, ಹೆಂಡ್ರಮಕ್ಕಳಿಗೆ ಹೇಳಿಲ್ಲ. ಇದ್ದಕ್ಕಿದ್ದಂಗ ಕಾಣದಂತೆ ಮಾಯವಾದ. ಇವನಿಂದ ಯಾರಿಗೂ ಚಿಂತಿಯಾಗಲಿಲ್ಲ. ಅವರ ಪಾಡಗ ಅವ್ರು ಆದ್ರು. ದೇವಪ್ಪ ಅಷ್ಟೇ ಪರದೇಶಿಯಾದ. ದಾರಿಗುಂಟ ನಡಕೋತ ಹೊಂಟ. ಎಲ್ಲೆಂದ್ರ ಅಲ್ಲಿ ದುಡಿದ. ರಾತ್ರಿ ಕಟ್ಟಿ, ದೇವರಗುಡಿ, ಯಾವುದಾದ್ರೂ ಜೋಪಡ್ಯಾಗ ಮಲಗಿದ. ಎದ್ದು ಮತ್ತೆ ನಡಿಗೀಲಿ ಸಂಚಾರ ಹೂಡಿದಾವ. ಎರಡು ನೂರ ಕಿಲೋಮೀಟರ ದಾಟಿ ಹೋಗಿದ್ದ. ದಾರಿದಾರ್ಯಾಗ ಮಂದಿ ಬದುಕ ನೋಡ್ದ ಗ್ಯಾರೇಜು, ಸಾಮಾನ ರಿಪೇರಿ, ಗಾಡಿ ಪಂಕ್ಚೇರ ಎಲ್ಲದರಲ್ಲು ಕೈಯಾಡ್ಸಿದ. ಹುರುಪಿನಿಂದ ಎಲ್ಲ ತಿಳಿಕಂಡ, ಕಲತಕಂಡ, ದಾರೇಗ ಸೈಕಲ್ ಕೊಂಡಕಂಡು ಸುತ್ತಲೂ ಹಳ್ಯಾಗ ಹಳೇ ಸಾಮಾನು ತುಂಬಿದ. ಪಟ್ಟಣಕ ಬಂದ ಮಾರಿದ. ದುಡಿಮೇನು ಚಲೋ ಅನಿಸ್ತು. ರೂಪಾಯಿಂದ ಹತ್ತು, ನೂರು, ಸಾವಿರಾತು. ಬಾಳ ಹಿಗ್ಗಿದ. ಸ್ವಾಭಿಮಾನದಿಂದ ಸ್ವಾವಲಂಬನೆ ಕಲಿತ. ವರ್ಷಗಳು ಗತಿಸಿದ ಮೇಲೆ ತನ್ನೂರು ನೆನಪಾತು. ಕಲಿಕೆಯ ವಿದ್ಯೆ, ಸಂಪಾದಿಸುವ ಬುದ್ಧಿ, ತಾನು ಇನ್ನು ಸ್ವಂತ ಎನ್ನೋ ಹಿಗ್ಗು ಪಡಕೊಂಡು ಊರಿಗೆ ಬಂದ. ಮನೆಗೆ ಬಂದ ದೇವಪ್ಪ ಹೇಣ್ತಿ, ಮಕ್ಕಳು, ಆಜುಬಾಜಿನವರು, ಊರಿನ ಜನ ಗಾಬರಿಯಿಂದ ನೋಡ್ತಾರ. ಇಂವ ಹೇಳ್ದಕೇಳ್ದ ಹೋದಾವ ಇಂಥ ಪರಿ ಬದಲಾಗ್ಯಾನ ಅನ್ನೋದು ಎಲ್ರಿಗೂ ವಿಚಿತ್ರ ಅನಿಸ್ತು. ಅಕ್ಷರ ಇಲ್ಲ. ತಿಳಿ ಇಲ್ಲ. ಕೈಯಾಗ ಪೈಸೆ ಇಲ್ದಾವ. ಈ ಪರಿ ಆಗಿದ್ದು ಅಬ್ಬಬ್ಬ ಅನ್ನಿಸ್ತು. ಯಾರಿಗೂ ಬೀಗದ, ಅಹಂಕಾರ ತೋರ್ದ, ಎಲ್ರಿಗೂ ಕಿಮ್ಮತ್ತಿನಿಂದಲೇ ನಡಕೊಂಡ. ಇವನ ಬಗ್ಗೆ ಯಾರೂ ಚಕಾರ ಎತ್ತಲಿಲ್ಲ. ಸೈಕಲ್ ಅಂಗಡಿ ಇಟ್ಟ, ಹತ್ತಾರು ಸೈಕಲ್ ತಂದ. ಬಾಡಿಗೆ ರಿಪೇರಿ ಮಾಡೋದು ಸುರು ಮಾಡ್ದ. ಜನಸಂಪರ್ಕಕ್ಕೆ ಬಂದ.

ಮಕ್ಕಳಿಗೆ ವಿದ್ಯೆ ಕಲಿಸಲಿಲ್ಲಂತ ಅಲ್ಲ, ಶಾಲೆ ಮಾತ್ರ ಬಿಟ್ಟು ಸ್ವಂತ ವಿದ್ಯೆ, ಬದುಕೋ ವಿದ್ಯಾ ಕಲಿಸಿದ. ಮಕ್ಕಳು ಒಂದೊಂದು ಕೆಲ್ಸ ಕಲಿತ್ರು. ಅವರಿಗೆಲ್ಲ ಗಾಡಿ ಕಲಿಸಿದ ಗಾಡಿ ಕೊಡ್ಸಿದ. ಬಾಳ್ವೆಗೆ ಹಚ್ಚಿದ. 'ಮಕ್ಕಳೆಲ್ಲ ಸಂಪಾದಿಸಿ ದೇವಪ್ಪನ ಕೈಗೆ ವಾರವಾರನು ಹಣ ತಂದುಕೊಡ್ತಾರ. ಹ್ಯಾಂಗಿದ್ದವ ಹ್ಯಾಂಗಾದ' ಅಂತಲೇ ಈಗಲೂ ಎಲ್ರನೂ ಕಾಡತೈತೆ. ಆದ್ರೂ ಗುಟ್ಟು ಬಿಟ್ಟಿಲ್ಲ. ತನ್ನ ಕಾಯಕ ಬಿಟ್ಟಿಲ್ಲ. ಅಹಂ ಇಲ್ಲ. ಅದೇ ಯಥಾಸ್ಥಿತಿ. ಒಮ್ಮೆ ದೇವಪ್ಪಗ ದೊಡ್ಡ ಹೋಟೆಲ್ ಹ್ಯಾಂಗ ಇರ್ತಾವ, ಏನ. ತಾನು ಒಮ್ಮೆ ತಿಂದ್ರ ಆತು ಅಂತ ದೊಡ್ಡ ಹೋಟಲಗೆ ಹೋದ. ಕಿಮಟ ಅಂಗಿ, ಲುಂಗಿ, ಕುರುಚಲಗಡ್ಡ, ಚಪ್ಪಲಿರದ ಬರೀಗಾಲು. ಈತನ ದೈನಿಕ ಬದುಕದು. ನಗರದ ಹೋಟೆಲ್ ಒಂದರಲ್ಲಿ ಒಳನಡೆದು ಖಾಲಿ ಇರೋ ಜಾಗದಾಗ ಕುಂದ್ರತಾನ. ವೇಟರ ಬಂದು ನೀರು ಇಟ್ಟು 'ಏನ್ ಕೊಡ್ಲಿ' ಅಂತ ಕೇಳತಾನ. 'ಏನೇನ್ ಎಲ್ಲ ತಂಬಾ' ಅಂತಾನ. ವೇಟರ ಗಾಬಿರಿಯಿಂದ ಇವನ ತಿಂದು ರೊಕ್ಕ



ಕೊಡದ ಹೊಂಟ್ರ ಮಾಲೀಕ ನನಗ ಬೈದಾನಂತ ಸುಮ್ನ ಆದ. ದೇವಪ್ಪನ ಪಕ್ಕದಲ್ಲಿದ್ದವಗೆ ಹಿಂದೆ ಮುಂದಿದ್ದವರಿಗೆಲ್ಲ ತಿಂಡಿ ಸಪ್ಲಾಯ್ ಮಾಡಿದರೂ, ಈತನಿಗೆ ತರಲಿಲ್ಲ, "ನನಗೂ ತಂಬಾರಪ" ಅಂದ. ನೋಡಿಯೂ ನೋಡದಂತೆ ಬೇರೆಯವರಿಗೆಲ್ಲ ತಂದಿರಿಸಿದ. ಏನಪ್ಪ, ಎಷ್ಟೊತ್ತಿನಿಂದ ಕಾಯಕತ್ತೀನಿ... ಎಂದಾಗ ಮಾಲೀಕ ಈತನ ಕಡೆ ನೋಡಿ, ಕೊಡಪ್ಪ. ಆ ಮನುಷ್ಯ ಬಂದು ಬಾಳ ಹೊತ್ತಾತಲ್ಲ ಎಂದು ಮಾಣಿಗೆ ಆದೇಶಿಸಿದ. ಸೌಕಾರ ಹೇಳಿದ ಮೇಲೆ ನಂದೇನಂತ ಇಡ್ಲಿ, ವಡಾ, ಸಾಂಬಾರ, ಚಟ್ನಿ ತಂದಿಟ್ಟ. ಅದನ್ನ ಗಬಗಬನೆ ತಿಂದು ಮತ್ತೆ ಅವನ ಕರೆದು ಮತ್ತೇನೈತಿ ಎಂದ. ಉತ್ತಪ್ಪ, ಉಪ್ಪಿಟ್ಟು, ಶಿರಾ, ಬೋಂಡಾ, ಸೂಪು, ಅವಲಕ್ಕಿ ವಗ್ಗರಣೆ, ಬಜಿ, ಅಂದ. ಬೋಂಡಾ ಸೂಪು ಕೊಡು ಎಂದ. ಆಯ್ತು ಎಂದವನೇ ತಂದಿಟ್ಟ. ತಡ ಮಾಡದೆ ಈ ಆಸಾಮಿ ತಿಂದು ಡೇಗಿದ. "ಉಪ್ಪಿಟ್ಟು, ಬಜಿ" ಕೊಡು ಎಂದ. ಅದನ್ನು ತಂದಿರಿಸಿದವ ಮುಂದೇ ನಿಂತ. "ಏನ್ ನೋಡ್ತಿ. ಚಹ ಜಲ್ದಿ" ಅಂದ. ತಂದಿರಿಸಿದ ಅವ ಸುಸ್ತಾದ. ದೇವಪ್ಪ ಗಟ್ಟಿಯಾದ. "ಬಿಲ್ ಕೊಡು" ಎಂದು ಎದ್ದು ನಿಂತ. ಮಾಣಿ ಸೌಕಾರನ ಹತ್ತಿರ ಬಿಲ್ ಬರೆಸಿದ. ದೇವಪ್ಪನೇ ಸಾವುಕಾರನ ಮುಂದೆ ನಿಂತು ಹತ್ತು ಸಾವಿರ ರೂಪಾಯಿ ಕಟ್ಟಿಟ್ಟ. "ತಗೋ ಸೌಕಾರ. ನನ್ನಂತ ಕಿಮಿಟ ಮಂದಿ ಅಂದ್ರ ಕಳ್ಳನ ನೋಡಿದಂಗ ನೋಡ್ತೀರಿ. ಬಿಲ್ ಎಷ್ಟಾತು, ಇದರಗ ನಿಮ್ಮ ಹಣ ತಕ್ಕೋರಿ ಉಳಿದ ನನಗ ಕೊಡ್ರಿ" ಅಂದಾಗ ಮಾಣಿ ಗಾಬರಿಯಿಂದ ಪಿಳಿಪಿಳಿ ನೋಡಿದ. ಬಿಲ್‌ನ ಬಾಬುತ್ತು ಚುಕ್ತಾಗೊಳಿಸಿ ದೇವಪ್ಪ ಎದ್ದು ಬಂದ.

ಇದ್ದಕಿದ್ದಂತೆ ಸವದತ್ತಿ ಎಲ್ಲಮ್ಮನ ಜಾತ್ರೆಗೆ ಹೋಗೋ ಆಸೆಯಾಗಿ ಈ ಬಾರಿ ತಪ್ಪಿಸಬಾರದಂತ ನಿರ್ಧಾರ ಮಾಡಿದ. ಆ ದಿನ ಬಂತು. ಮನೆಯಿಂದ ತಯಾರಾಗಿ ಹೊರಟ. "ಬಾರಿ ಟ್ರಿಮ್ ಅದಿಯಲ್ಲ" ಎಂದು ಹಾದಿಹೋಕರು ಮಾತನಾಡಿದರ "ಬಂದ ಮ್ಯಾಲ ಹೇಳ್ತೀನಿ" ಅಂತ ಲಗುಬಗೆಯಿಂದ ನಡೆದ. ಬಸ್‌ಗೆ 'ಜಾತ್ರಾ ವಿಶೇಷ' ಎಂದು ಬರೆದಿತ್ತು. ಬಸ್ಟ್ಯಾಂಡಿಗೆ ಬಂದು ತಿಳಿಕೊಂಡು ಏರಿ ಕುಳಿತ. ವಾಹನ ತುಂಬ ಉಧೋ ಉಧೋ ಎಂಬ ಘೋಷಣೆ ಚಲುವಾತು. ಇಂಥ ಕರ್ಕಶ ಹಾಗೂ ಹೆಚ್ಚು ಗದ್ದಲದ ಮನುಷ್ಯನಲ್ಲ ಈತ. ಆದರೂ ಸಹಿಸಿಕೊಳ್ಳಬೇಕು. ಏಕೆಂದರೆ ಸವದತ್ತಿ ಎಲ್ಲಮ್ಮನ ನೋಡಬೇಕಿತ್ತು. ಆಕೆ ಜಾತ್ರೆ ನೋಡಬೇಕಿತ್ತು. ಆಕೆ ಅಂದ ನೋಡಬೇಕಿತ್ತು. ಆಕೆಯ ವೈಭವ ಕಾಣಬೇಕಿತ್ತು. ಏನಾದರೂ ಸರಿ ತಡಕೊಂಡ್ರ ಆತು ಅಂತ ಸುಮ್ಮನಾದ. ಬಸ್ ಸವದತ್ತಿ ಸೇರುವಷ್ಟರಲ್ಲಿ ಸಾಯಂಕಾಲ ಆತು. ಬಸ್ಟ್ಯಾಂಡಿನಿಂದ ಗುಡ್ಡದ ಕಡೆ ನಡೆದ. ಜನಜಂಗುಳಿಯೋ ಜಂಗುಳಿ. ಒಬ್ಬನ ಬೇರೆ. ತಲೆಗೆ ಟವಲ್ ಸುತ್ತಿ ಬಾಗಿಕೊಂಡು ದಿಬ್ಬ ಏರತೊಡಗಿದ. 'ಉಧೋ ಉಧೋ' ಎಂಬ ಗರ್ಜನೆ ಕಿವಿಗಡಚಿಕ್ಕಿದರೂ ಏನು ಕೇಳಿಲ್ಲೆಂಬಂತೆ ಏರಿ ಬಂದ. ಸುತ್ತಲೂ ವಾಸನೆ ಮೂಗಿಗೆ ತಾಗಿತು. ಉಗುಳಿ ಉಗುಳಿ ಸಾಕಾಗಿ ಬಾಯಿ ಆರಿತು. ನುಗ್ಗಿ ನುಗ್ಗಿ ಗುಡಿಸಿದ್ದ, ಮೂಸಿಸಿದ. ಕಾಲಿಗೆ ಮಳೆಯ ರಾಡಿ ಎರಚಿದೆಯೆಂದು ತಿಳಿದು, ಮೆಲ್ಲಗೆ ಮುಂದೆ ನಡೆದ, ಜಾತ್ರೆ ಅಂದಮೇಲೆ ದೀಡ ನಮಸ್ಕಾರ ಹಾಕೋರು. ಹರಕೆ ತೀರ್ಥೋದಕ ಆ ಬಗ್ಗೆ ತಿಳಿದಿರಲಿಲ್ಲ. ಸಿಕ್ಕಾಪಟ್ಟೆ ಕಲೆತ ಜನಸಂಖ್ಯೆಗೂ ಬಹಿರ್ದೆಸೆ ಸಮಸ್ಯೆ, ಹತ್ತಿಟ್ಟುಕೊಳ್ಳಲಾಗದೆ ಎಲ್ಲಿಬೇಕಲ್ಲಿ ಚರಗ ಚಲ್ಲಿದ್ದರು. ರಾತ್ರಿ ಸರಿಯಾಗಿ ಕಾಣದಿದ್ದುದಕೆ ದೇವಪ್ಪ ಗದ್ದಲ ದಾಟಿ ಮುಂದೆ ಹೋಗಿ ಮೊಣಕಾಲವರೆಗೆ ಸಿಡಿದ ಹೇಸಿಗೆ, ಅದರ ನಾತಕೆ ವಾಕರಿ ಮಾಡಿಕೊಂಡ. ಇನ್ನೆಂದೂ ದೇವಾಲಯಗಳಿಗೆ ಬರಬಾರದೆಂದು ನಿರ್ಧರಿಸಿದ. ಸೈಕಲ್ ಸವಾರಿಯಿಂದಲೇ ನಾಡಿನ ಉದ್ದಗಲಕ್ಕೂ ಸಂಚರಿಸಿದ ಆಸಾಮಿ. ರಾತ್ರಿಯಲ್ಲ ಹೇಗೆಂಬ ಪ್ರಶ್ನೆಗೆ ನಮ್ಮೂರಿಂದ ಬಿಟ್ಟಾಗ ಪಂಚಾಯತಿಯಿಂದ ಪತ್ರ ಬರೆಸಿಕೊಂಡು ರಾತ್ರಿ ಆದಾಗ ತಲುಪಿದ ಊರಲ್ಲೇ ವಸ್ತಿ. ಎಲ್ಲ ಊರಿನ ಜನರ ಕಾಳಜಿ ಮಾಡಿದ್ದನ್ನು ಮನದಾಳದಿ ನೆನೆಯುತ್ತಿದ್ದ.

ದುಡಿಮೆ ಮಾಡಿದ್ದಾತು, ಪ್ರವಾಸ ಕಂಡಿದ್ದಾತು. ಮಕ್ಕಳನ್ನು ಸಾಕಿದ್ದಾತು ಒಬ್ಬಬ್ಬೊರಿಗೆ ಒಂದೊಂದು ಸ್ವಾವಲಂಬನೆ ಕೆಲಸ. ಯಾರ ಹತ್ತಿರನು ಕೆಲಸ ಕೇಳಿ ಹೋಗಂಗಿಲ್ಲ. ಮಕ್ಕಳ ಸೇವೆಗೆಂದು ಹುಡುಕಿ ಬರುವಂತೆ ಮಾಡಿದ್ದನು. ಟಾಂ ಟಾಂ, ಐಸಿಆರ್ ಟ್ರ್ಯಾಕ್ಟರ್, ದಿನವೂ ಕೆಲಸ. ರಜೆ ಅಂತು ಇಲ್ಲವೇ ಇಲ್ಲ. ಮಕ್ಕಳಿಗೆ ಶಿಕ್ಷಣ ಇಲ್ಲ. ತಾನು ಕಲಿತಿರಲಿಲ್ಲ. ದುಡಿದು ಬದಕೇನಂದರೆ ಕೆಲಸ ಮೈ ತುಂಬಾ. ಮೈಗಳ್ಳರಾಗಿ ದುಡಿಯದವರು ಯಾವತ್ತು ದರಿದ್ರರೇ. ಕಚೇರಿ, ನೌಕರಿ, ತಿರಗಾಟ ಕಂಡವರಿಗೆ ಕೈಕಾಲು ಹಿಡಿಯುವ ಗೋಜುಗಳಿಲ್ಲ. ದಿನವೂ ಸಂಪಾದನೆ. ಎಲ್ಲ ಸ್ವಂತಕ್ಕೆ ಉಳಿಯುತ್ತದೆ. ಸಾಲದ ಭಯವಿಲ್ಲ ಏನಿದ್ದರೂ ನನ್ನ ಬೇಡಿಯೇ ಬರಬೇಕು. ಶಾಲೆ ಕಲಿಯದಿದ್ದರೂ ಅಂಕಿ ಸಂಖ್ಯೆ, ತನ್ನ ಹೆಸರು ಬರೆಯುವ ರೂಢಿ ಇಟ್ಟುಕೊಂಡಿದ್ದ. ಹಬ್ಬವಿರಲಿ, ಹುಣ್ಣಿಮೆ–ಅಮವಾಸೇ ಯಿದ್ದರೂ, ಕೆಲಸ ಎಂದಿಗೂ ಬಂದ್ ಇರುವುದಿಲ್ಲ. ಗಾಡಿ ರಿಪೇರಿ, ಹೊಲದ ಕೆಲಸ, ತೋಟದ ಕಾರ್ಯಕ್ಕೆ ಬೇಸರಿಸದೆ ದುಡಿಮೆ. 'ಕೋಟಿ ವಿದ್ಯೆಗಿಂತ ಮೇಟಿ ವಿದ್ಯೆ ಮೇಲು.' ಎಂಬ ನಾಣ್ಣುಡಿಗೆ ಉದಾರಿಸುವಂತಿದ್ದ. ತೊಂದರೆ ಹೇಳಿಕೊಂಡು ಬಂದವರಿಗೆ ಸಲಹೆ, ಸೂಚನೆ ನೀಡುವುದು. ಜಗಳ ವ್ಯಾಜ್ಯಗಳಿದ್ದರೆ ಇದ್ದ ಜಾಗದಲ್ಲೇ ಕೆಲಸ ಮಾಡುತ್ತಲೇ ನಿಭಾಯಿಸುವುದು ದೊಡ್ಡ ಗುಣ. ದೇವಪ್ಪಗೆ ಹೆಮ್ಮೆ ಎಂದರೆ ಯಾರ ಅಳಿದೀಕಿನೊಳಗ ಇರಲಿಲ್ಲ, ನಾವು ದುಡಿದು ನಂತರ ತಿನ್ನೋದು. ಯಾವ ಅಳಕು, ಕೊಂಕು ಇಲ್ಲದ ಈ ಮನುಷ್ಯ ಊರಿಗೆ ಬಂಗಾರವಾಗಿದ್ದಾನೆ. ಪುಟಾಣಿ ಮಕ್ಕಳಿಂದ ಹಿರಿಯ ಜೀವಿಯವರೆಗೂ ಮಾನವೀಯ ಸಂಬಂಧ. ಒಂದಿನ ಕಾಣದಿದ್ದಾಗ ಜನರೇ ಬೇಸರಗೊಳ್ಳುವಂತೆ ಈತನ ಗುಣ.

**ಅಕ್ಬರ್ ಸಿ. ಕಾಲಿಮಿರ್ಚಿ**
ಮಂಜುನಾಥ ಬಡಾವಣೆ, ಅಂಚೆ : ಭಾಗ್ಯನಗರ – ೫೮೩ ೨೩೮
ಕೊಪ್ಪಳ ತಾಲೂಕು ಮತ್ತು ಜಿಲ್ಲೆ

## ಬರಿಮೋಡ–ಬಿರುಮೋಡ




ಬರಗಾಲದಲ್ಲಿ ದಹದಹಿಸುವ ದಾಹ
ನೀರು ಕುಡಿಯಲು ನಯನದ ಬೇಟೆ
ನೋಡಿದೆಡೆಯೆಲ್ಲ ಬರಿ ಮರಳುಗಾಡು
ಕಂಡದ್ದು ಕೇವಲ ಬಿಸಿಲುಕುದುರೆ!

ಆಗಸದತ್ತ ಆನನವೆತ್ತಿದರೆ
'ನೆರವಿ'ಗೆ ಬಂದಾವೆ ಬಿರುಮೋಡ
ಹನಿಸುರಿಸಿ ತಣಿಸು ಎಂದು ಬೇಡಿದೆ ಮನ
ಬಿಸಿಲಿಗೆ ಅಡ್ಡನಿಂತು ನೆರಳಾದ ಮೋಡ

ಕೇಳಿದ್ದು ನೀರು! ಸಿಕ್ಕಿದ್ದು ನೆರಳು!
ಸಿಕ್ಕಿತ್ತೇ ನೆರಳಾದರೂ? ಬಿಡಲಿಲ್ಲ ಗಾಳ ಸೆಳೆದೊಯ್ದಿತ್ತು
ನೋಡಾ!

ಓ ನನ್ನ ದಾಹ ಹಿಂಗಿಸಲು ಬಂದ ಮೋಡವೇ
ಮತ್ತೆಂದು ಬರುವೆ ನೆರಳಾಗಿ ಅಲ್ಲ... ನೀರಾಗಿ
ನಿನಗಾಗಿ ಅಲ್ಲ... ನನಗಾಗಿ... ನಮಗಾಗಿ

**ಮಧುಸೂದನ್ ಜಿ. ಎಚ್.**
೨೫, ೨ನೇ 'ಎ' ಮುಖ್ಯರಸ್ತೆ, ೬ನೇ ಅಡ್ಡರಸ್ತೆ,
ಭೈರವೇಶ್ವರನಗರ, ಲಗ್ಗೆರೆ, ಬೆಂಗಳೂರು–೫೮





# ಪ್ರಶಸ್ತಿಗೆ ಅಭಿನಂದನೆ, ನಿಲುವಿಗೆ ಮೆಚ್ಚುಗೆ



### ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ಕುರಿತ ಹೇಳಿಕೆ

ಸಂಗೀತ ನಾಟಕ ಅಕಾಡೆಮಿ ಒಂದು ಸ್ವಾಯತ್ತ ಸಂಸ್ಥೆಯಾಗಿದ್ದು ತಾನು ಶುರುವಾದಂದಿನಿಂದಲೂ ತನ್ನ ಸ್ವಾಯತ್ತತೆಯನ್ನು ಬಹಳಮಟ್ಟಿಗೆ ಕಾಪಾಡಿಕೊಂಡು ಬಂದಿದೆ. ಅಂಥ ಅಕಾಡೆಮಿಯು 2018ರ ಇಸವಿಯ ತನ್ನ ಪ್ರಶಸ್ತಿಯನ್ನು, ಬೇರೆ ಹಲವರಿಗೆ ನೀಡುವುದರೊಂದಿಗೆ, ನನಗೂ ನೀಡಿದ್ದಕ್ಕಾಗಿ ಅಕಾಡೆಮಿಗೆ ಕೃತಜ್ಞನಾಗಿದ್ದೇನೆ.

ಆದರೆ, ಈವತ್ತು ದೇಶದ ಹಲವು ಕಡೆ, ಮತಧರ್ಮದ ಹೆಸರಿನಲ್ಲಿ, ಪೊರೆಯುವ ದೇವರ ಹೆಸರಿನಲ್ಲಿ, ಮಾಡುವ ಊಟದ ಹೆಸರಿನಲ್ಲಿ ಗುಂಪುಹಲ್ಲೆಗಳು, ಕಗ್ಗೊಲೆಗಳು ನಡೆಯುತ್ತಿವೆ. ಅಧಿಕಾರದಲ್ಲಿ ಇರುವವರು ಇಂಥ ಭೀಕರ ಹಿಂಸಾಚಾರ ಮತ್ತು ಕಗ್ಗೊಲೆಗಳಿಗೆ ಕಾರಣವಾದ ದ್ವೇಷವನ್ನು ಅಂತರಜಾಲ ತಂತ್ರಜ್ಞಾನದ ಎಲ್ಲ ಪಟ್ಟುಗಳನ್ನು ಬಳಸಿ ಜನರ ಮನಸ್ಸಿನಲ್ಲಿ ತುಂಬುತ್ತಿದ್ದಾರೆ. ಶಿಕ್ಷಣದ ಅತ್ಯುನ್ನತ ಸಂಸ್ಥೆಗಳಿಂದ ಮೊದಲುಗೊಂಡು ಕೆಳಮಟ್ಟದ ಶಾಲಾಕಾಲೇಜುಗಳವರೆಗೆ, ಎಲ್ಲೆಡೆಯೂ, ಮತಾಂಧತೆಯಿಂದ ಕೂಡಿದ ಪಾಠಗಳನ್ನು, ವಿಚಾರಗಳನ್ನು ವಿದ್ಯಾರ್ಥಿಗಳ ತಲೆಗಳಲ್ಲಿ ತುಂಬುವ ಪ್ರಯತ್ನಗಳು ನಡೆಯುತ್ತಿವೆ. ಭಾರತೀಯತೆಯ 'ವಸುಧೈವ ಕುಟುಂಬಕಂ' ಅನ್ನುವುದರ ಅರ್ಥವನ್ನೇ ತಿರುಚಲಾಗುತ್ತಿದೆ. ಆದರೆ, ಸಂಕರವೇ ಶಿವವಲ್ಲವೇ? 'ಅಯ್ಯೋ, ನನ್ನ ದೇಶವೇ' ಎಂದು ನನ್ನಂಥ ಕೋಟ್ಯಂತರ ಜನರು ಹಲುಬುವಂತಾಗಿದೆ.

ಭಾರತ ಮತ್ತು ವಿಶಾಲ ಜಗತ್ತುಗಳ ಭವಿಷ್ಯವನ್ನು ರೂಪಿಸ ಬೇಕಾಗಿರುವ ಕನ್ಹಯ್ಯಾಕುಮಾರ್ ಅಂಥ ಯುವಕರು ಹಲವರ ಮೇಲೆ, ಅವರು ವಿಶ್ವವಿದ್ಯಾಲಯಗಳಲ್ಲಿ ಓದುತ್ತಿದ್ದಾಗಲೇ, ದೇಶದ್ರೋಹದ ಆರೋಪವನ್ನು ಹೊರಿಸಲಾಗಿದ್ದು, ಅವರು ನ್ಯಾಯಾಲಯಗಳಲ್ಲಿ ಆ ಪ್ರಕರಣವನ್ನು ಇನ್ನೂ ಎದುರಿಸುತ್ತಲೇ ಇದ್ದಾರೆ. ದೇಶದ ಅತ್ಯಂತ ಶೋಷಿತರು ಮತ್ತು ದಲಿತ ಜನರ ಪರವಾಗಿ ಕೋರ್ಟು–ಕಚೇರಿಗಳಲ್ಲಿ ವಾದಿಸುತ್ತ, ಅವರ ಅಪಾರ ಕಷ್ಟಗಳನ್ನು ಕುರಿತು ಲೇಖನ ಮತ್ತು ಪುಸ್ತಕಗಳನ್ನು ಬರೆಯುತ್ತ, ಅವರ ಹೋರಾಟವು ಅಹಿಂಸಾ ಮಾರ್ಗದಲ್ಲಿ ನಡೆಯುವಂತೆ ಸಲಹೆ–ಸಹಕಾರ ನೀಡುತ್ತ, ಭಾರತದ ಸಂವಿಧಾನದ ಎಲ್ಲ ವಿಧಿವಿಧಾನಗಳನ್ನು ಪಾಲಿಸುತ್ತ, ಆ ನಮ್ಮ ಸಂವಿಧಾನದ ಜೀವಾಳವನ್ನು ಎತ್ತಿಹಿಡಿಯುತ್ತ, ನಿಸ್ಪೃಹತೆಯಿಂದ, ತಮ್ಮತಮ್ಮದೇ ರೀತಿಯಲ್ಲಿ ಹೋರಾಡುತ್ತ ಬಂದಿರುವ ಹಲವರ ವಿರುದ್ಧ ಯುಎಪಿಎ ಕಾಯಿದೆಯಡಿ ವಿಚಾರಣೆ ನಡೆಯುತ್ತಿದ್ದು, ಅವರಲ್ಲಿ ಹೆಚ್ಚಿನವರು ಜಾಮೀನು ಕೂಡ ಸಿಕ್ಕದೆ ಸೆರೆಮನೆಯಲ್ಲಿದ್ದಾರೆ. ದೇಶದ ಅತ್ಯಂತ ದಮನಿತರ ದನಿಯಾಗಿರುವವರು ಈ ಧೀಮಂತರು, ಧೀಮಂತೆಯರು. ಇಂಥವರನ್ನು ನಿರ್ವೀರ್ಯಗೊಳಿಸಿ, ಇವರ ಬಾಯಿಮುಚ್ಚಿಸಿದರೆ ಆ ದಮನಿತರ ದನಿಯನ್ನು ಅಷ್ಟರಮಟ್ಟಿಗೆ ಅಡಗಿಸಬಹುದು ಎಂದು ಪ್ರಭುತ್ವವು ನಿರ್ಧರಿಸಿದಂತಿದೆ. ಇದೆಲ್ಲ ಹೊಸದಲ್ಲ; ಈ ಹಿಂದೆ ಅಧಿಕಾರದಲ್ಲಿದ್ದವರು ಕೂಡ ಹೀಗೆಯೇ ಪ್ರಭುತ್ವದ ಶಕ್ತಿಯ ದುರ್ವಿನಿಯೋಗ ಮಾಡಿದ್ದಾರೆ.

ನಿಜವಾದ ದೇಶಪ್ರೇಮಿಗಳು, ಲೋಕೋಪಕಾರಿಗಳು, ಧರ್ಮಮಾರ್ಗಿಗಳು ಆಗಿರುವ ಮತ್ತು ಸಕಲ ಚರಾಚರಕ್ಕೆ ಲೇಸನ್ನೇ ಬಯಸುತ್ತ, ಲೇಸನ್ನೇ ಉಂಟುಮಾಡಲು ಬದುಕುತ್ತಿರುವ ಇಂಥವರಿಗೆ ನನ್ನ ದೇಶದಲ್ಲಿ ಹೀಗೆ ಅನ್ಯಾಯವಾಗುತ್ತಿರುವಾಗ, ರಂಗಭೂಮಿಯ ಕಲಾವಿದನಾಗಿ, ಕವಿ–ನಾಟಕಕಾರನಾಗಿ, ಈ ದೇಶ ಮತ್ತು ಲೋಕದ ಪ್ರಜೆಯಾಗಿ ನಾನು ಈ ಪ್ರಶಸ್ತಿಯನ್ನು ಸ್ವೀಕರಿಸಲಾರೆ. ಇದನ್ನು ಸ್ವೀಕರಿಸಲು ನನ್ನ ಆತ್ಮಸಾಕ್ಷಿ, ಅಂತರ್ಯಾಮಿ ಒಪ್ಪದು.

ಇದು ಪ್ರತಿಭಟನೆಯಲ್ಲ; ವ್ಯಥೆ; ಪ್ರಶಸ್ತಿಯನ್ನು ಸ್ವೀಕರಿಸಲು ಬಿಡದಿರುವ ಅಸಹಾಯಕತೆ. ಅಕಾಡೆಮಿಯ ಬಗ್ಗೆ ನನಗೆ ಗೌರವವಿದೆ; ಮತ್ತು ಈಗ ಮತ್ತು ಈ ಹಿಂದೆ ಇಂಥ ಪ್ರಶಸ್ತಿ ಪಡೆದ ನನ್ನೆಲ್ಲ ಸಹೋದ್ಯೋಗಿಗಳ ಬಗ್ಗೆ ಗೌರವವಿದೆ. ಅಕಾಡೆಮಿಯ ಸದಸ್ಯರಿಗೆ ಮತ್ತೊಮ್ಮೆ, ಕೃತಜ್ಞತೆಗಳು. ಅವರ ಕ್ಷಮೆ ಬೇಡುತ್ತಿದ್ದೇನೆ.

ಶಿವಕಾರುಣ್ಯವಿರಲಿ.


**ರಘುನಂದನ**

೧೧೨, ಈಸ್ಟ್ ಎಂಡ್ ಸಿ ಮುಖ್ಯರಸ್ತೆ, ೯ನೆಯ ಬ್ಲಾಕ್, ಜಯನಗರ, ಬೆಂಗಳೂರು – ೫೬೦ ೦೬೯




## ನ. ಸುಂದರಮೂರ್ತಿ

ಜೈ ಶ್ರೀರಾಮ್! ಬಂತು ನಿರ್ಮಲಾ ಸೀತಾರಾಮನ್‌ರವರ ಚೊಚ್ಚಲ ಬಜೆಟ್. ಸಂಬಳದಾರರು ಮತ್ತು ಮಧ್ಯಮ ವರ್ಗದ ಜನ ಬಜೆಟ್‌ನಲ್ಲಿ ತಮಗೆ ಆದಾಯ ತೆರಿಗೆಯಲ್ಲಿ ಆಕರ್ಷಕ ರಿಯಾಯಿತಿ ದೊರೆಯಲಿದೆ ಎಂದು ಮನಸ್ಸಿನಲ್ಲೇ ಮಂಡಿಗೆ ಸವಿಯುತ್ತಿದ್ದರು. ವೈಯಕ್ತಿಕ ಆದಾಯ ತೆರಿಗೆ ದರಗಳಲ್ಲಿ ಯಾವ ಬದಲಾವಣೆಯೂ ಇಲ್ಲ. ಆದರೆ ಪೆಟ್ರೋಲ್ ಮತ್ತು ಡೀಸೆಲ್ ಬೆಲೆಗಳನ್ನು ಕನಿಷ್ಠ ಎರಡು ರೂಪಾಯಿ ಏರಿಸಲಾಗಿದೆ. ಇಂಧನ ಬೆಲೆಗಳ ಏರಿಕೆಯಿಂದ ಅಗತ್ಯ ವಸ್ತುಗಳ ಬೆಲೆಗಳು ಹಾಗೂ ಸಾರಿಗೆ ವೆಚ್ಚ ಹೆಚ್ಚುವುದು ದಿಟ. ಅಷ್ಟೇ ಅಲ್ಲ, ಮುಂದೆ ಇಂಧನ ಬೆಲೆಗಳು ಮತ್ತಷ್ಟು, ರೂಪಾಯಿ ಐದರವರೆಗೆ ಹೆಚ್ಚಬಹುದು ಎಂಬುದಾಗಿ ಕೇಂದ್ರದ ಫೈನಾನ್ಸ್ ಬಿಲ್ ಮಾಹಿತಿ ಒದಗಿಸಿದೆ. ಮಧ್ಯಮ ವರ್ಗಕ್ಕೆ ನಿರಾಸೆ ಆಗಿದೆ ಅನ್ನುವುದು ಸತ್ಯ. ಕೇಂದ್ರ ಸರ್ಕಾರ ಮಧ್ಯಮ ವರ್ಗಕ್ಕೆ ಗಾಯಕ್ಕೆ ಮುಲಾಮು ಹಚ್ಚುತ್ತಿದೆ. ಅದೊಂದು ಕಡೆ ಇರಲಿ. ಕೆಲವು ದಿನಗಳ ಹಿಂದೆ ಮೇಡಂ ಹೇಳಿದರು, ನೋಟು ಅಮಾನ್ಯೀಕರಣದಿಂದ ದೇಶದ ಆರ್ಥಿಕತೆಗೆ ಏನು ಪ್ರಮಾದವಾಗಲಿಲ್ಲ ಎಂದು! ಅಬ್ಬಾ, ಎಂತಹ ಜೋಕ್! ಡಾ॥ ಮನ್‌ಮೋಹನ್ ಸಿಂಗ್ ನೋಟು ರದ್ದತಿಯನ್ನು 'ಹಗಲು ದರೋಡೆ' ಎಂದು ವಿಮರ್ಶಿಸಿದ್ದರು. ಊರ್ಜಿತ್ ಪಟೇಲ್, ಅರವಿಂದ್ ಸುಬ್ರಮಣಿಯನ್, ರಘುರಾಮ್ ರಾಜನ್, ವಿರಲ್ ಆಚಾರ್ಯ ಮತ್ತು ಅನೇಕ ಪ್ರತಿಷ್ಠಿತ ಆರ್ಥಿಕ ತಜ್ಞರು ನೋಟು ರದ್ದತಿಯನ್ನು ಕಟುವಾಗಿ ಟೀಕಿಸಿದ್ದರು. ರಿಸರ್ವ್ ಬ್ಯಾಂಕ್‌ನ ಅಂಕಿ ಅಂಶಗಳ ಅನುಸಾರ ದೇಶದ ಜಿಡಿಪಿ ವೃದ್ಧಿ ಶೇಕಡ ೨ರಷ್ಟು ಗೋತಾ ಹೊಡೆಯಿತು. ಸಾಮಾನ್ಯ ಜನ ಕಂಗಾಲಾದರು. ಒಂದು ಬಿಡಿಗಾಸೂ ಕಪ್ಪು ಹಣ ಹೊರ ಬರಲಿಲ್ಲ. ಆದರೂ ನಿರ್ಮಲಮ್ಮ ಹೇಳ್ತಾರೆ ದೇಶದ ಆರ್ಥಿಕತೆಗೆ ಏನೂ ಕುಂದಾಗಲಿಲ್ಲ ಎಂದು! ಇದರಲ್ಲಿ ಆಶ್ಚರ್ಯ ಪಡುವುದಕ್ಕೆ ಏನೂ ಇಲ್ಲ. ಹಿಂದೆ ಕೇಂದ್ರದ ರಕ್ಷಣಾ ಮಂತ್ರಿಯಾಗಿದ್ದಾಗ, ರಫೇಲ್ ಒಪ್ಪಂದದಿಂದ ದೇಶಕ್ಕೆ ಯಾವ ನಷ್ಟವೂ ಸಂಭವಿಸಿಲ್ಲ, ಡೀಲ್ ೨೪ ಕ್ಯಾರೆಟ್ ಅಪರಂಜಿಯಷ್ಟೇ ಪರಿಶುದ್ಧವಾದದ್ದು ಎಂದು ಹೇಳಿದವರಲ್ಲವೇ ನಿರ್ಮಲಾ ಸೀತಾರಾಮನ್! ಎಂತಹ ಸ್ವಾಮಿ ನಿಷ್ಠೆ! ಸ್ವತಃ ನರೇಂದ್ರ ಮೋದಿಯವರೇ ಪ್ರಸ್ತುತ ಬಜೆಟ್‌ನ್ನು ಮೆಚ್ಚಿ, ತಮ್ಮ ಐದು ಟ್ರಿಲಿಯನ್ ಡಾಲರ್ ಆರ್ಥಿಕ ಕನಸನ್ನು ಸಾಕಾರ ಮಾಡುವ ಪ್ರಕ್ರಿಯೆಗೆ ನಿರ್ಮಲಾ ಸೀತಾರಾಮನ್‌ರವರು ಶ್ರೀಗಣೇಶ ಬರೆದಿದ್ದಾರೆ ಎಂದು ಕೊಂಡಾಡಿದ್ದಾರೆ. ೨೦೨೪ರ ವೇಳೆಗೆ ಭಾರತ ದೇಶದ ಆರ್ಥಿಕ ವ್ಯವಸ್ಥೆಯನ್ನು ಐದು ಟ್ರಿಲಿಯನ್ ಡಾಲರ್‌ಗಳಷ್ಟು ವೃದ್ಧಿ ಮಾಡಬೇಕೆಂದು ಮೋದಿ ಅವರು ಹೇಳುತ್ತಿದ್ದಾರೆ. ೩೫೦ ಲಕ್ಷ ಕೋಟಿ ರೂಪಾಯಿಗಳ, ಆರ್ಥಿಕತೆಯಾಗಿ ದೇಶವನ್ನು ಕೊಂಡೊಯ್ಯಲು ಯಾರ ಅಡ್ಡಿಯೂ ಇಲ್ಲ! ಆದರೆ ಈ ಐದು ಟ್ರಿಲಿಯನ್ ಡಾಲರ್‌ಗಳ ಆರ್ಥಿಕತೆ ಅಂದರೆ ಏನು? ಇದೇ ಮಿಲಿಯನ್ ಡಾಲರ್ ಪ್ರಶ್ನೆ! ಐವರು ಕುರುಡರು ಆನೆಯನ್ನು ಮುಟ್ಟಿ ನೋಡಿ ವಿವರಿಸಿದಾಂಗೆ. ದೇಶದ ಇಂದಿನ ಆರ್ಥಿಕ ಪರಿಸ್ಥಿತಿಯನ್ನು ವೀಕ್ಷಿಸಿದಾಗ, ಐದು ಟ್ರಿಲಿಯನ್ ಡಾಲರ್ ಕನಸು ನುಂಗಲಾರದ ತುತ್ತು, ನುಂಗಿದರೂ ಜೀರ್ಣವಾಗಲಾರದ ವಸ್ತು. ೨೦೧೪ರಿಂದ ೨೦೧೯ರವರೆವಿಗೆ ನರೇಂದ್ರ ಮೋದಿಯವರ ಆಳ್ವಿಕೆಯನ್ನು ಜನ ನೋಡಿದ್ದಾರೆ. ಅವರು ನೀಡಿದ ಮೆಗಾ ಸೈಜ್ ಭರವಸೆಗಳು ಎಷ್ಟರ ಮಟ್ಟಿಗೆ ಜಾರಿಯಾದವು? ಭ್ರಷ್ಟಾಚಾರ ಮುಕ್ತ ಭಾರತ, ಜಿಎಸ್‌ಟಿ ಸಂದರ್ಭದಲ್ಲಿ ಹೇಳಿದ ಒಂದು ದೇಶ ಒಂದೇ ತೆರಿಗೆ, ನಮಾಮಿ ಗಂಗೆ ಅಭಿಯಾನ – ದೊಡ್ಡ ಪಟ್ಟಿಯೇ ಇದೆ – ಅವುಗಳ ಗತಿ ಏನಾದವು? ಘೋರ ಸ್ವಪ್ನಗಳಾದವು ಅಷ್ಟೇ. ಲಂಗೂ ಲಗಾಮಿಲ್ಲದ ಆರ್ಥಿಕ ಸುಧಾರಣೆ, ಉದಾರೀಕರಣ ಮುಂತಾದ ಕಾರ್ಯಕ್ರಮಗಳಿಂದ ದೇಶವನ್ನು ಅಂತರರಾಷ್ಟ್ರೀಯ ಬಂಡವಾಳಗಾರರಿಗೆ ಮಾರಾಟ

ದೇಶ ಯಾವ ದಿಸೆಯಲ್ಲಿ ಯಾವ ಗುರಿಯತ್ತ ಸಾಗುತ್ತಿದೆ ಅನ್ನುವುದು ಸ್ಪಷ್ಟವಾಗಿದೆ. ದೇಶದ ಜನ ಚುನಾವಣೆಯಲ್ಲಿ ನರೇಂದ್ರ ಮೋದಿ ಪಕ್ಷಕ್ಕೆ ಭಾರೀ ಬಹುಮತ ನೀಡಿದರು. ನರೇಂದ್ರ ಮೋದಿಯವರ ಸೆಕೆಂಡ್ ಇನ್ನಿಂಗ್ಸ್ ಪ್ರಾರಂಭವಾಗಿದೆ. ಉಜ್ವಲ ಭಾರತವೋ ಅಥವಾ ಜಜ್ಜಿ ಬಜ್ಜಿಯಾದ ಭಾರತವೋ ಎಂಬ ಭಯ ದೇಶವನ್ನು, ಅದರ ಜನತೆಯನ್ನು ಆವರಿಸುತ್ತಿದೆ.

# ಕಾರ್ಪೊರೇಟ್ ಪರ, ಜನ ವಿರೋಧಿ ಬಜೆಟ್



ಮಾಡಲು ಹೊರಟಿದ್ದಾರೆ ನರೇಂದ್ರ ಮೋದಿ. ದೇಶದ ಮಾರಾಟದ ಬೆಲೆ ಐದು ಟ್ರಿಲಿಯನ್ ಡಾಲರ್‌ಗಳೇ ಎಂಬ ಶಂಕೆ ಕಾಣಿಸಿಕೊಳ್ಳುತ್ತಿದೆ. ಮೋದಿ–ಭಕ್ತರಿಗೆ ಅವರ ಭಾಷಣವೆಂದರೆ ಪಂಚಾಮೃತ ಸವಿದಂತೆ; ಅವರು ಮಾತಿನ ಮಲ್ಲರು. ಮೋದಿ ಸರ್ಕಾರವನ್ನು ವಿಮರ್ಶಿಸಿದರೆ ಅಂತಹ ಜನರಿಗೆ ದೇಶದ್ರೋಹಿಗಳು, ನಕ್ಸಲ್‌ಗಳು, ಮಾವೋವಾದಿಗಳು ಇತ್ಯಾದಿ ಲೇಬಲ್‌ಗಳು. ಅವರ ಮೇಲೆ ದಾಳಿ, ದೌರ್ಜನ್ಯ, ಸೆರೆಮನೆ ವಾಸ, ಇವನ್ನು ಕಂಡಿದ್ದೇವೆ, ಕಾಣುತ್ತಿದ್ದೇವೆ. ಕೆಲವರು ಹತ್ಯೆಯೂ ಆದರು. ಈಗ ಐದು ಟ್ರಿಲಿಯನ್ ಡಾಲರ್ ವಿಚಾರವನ್ನು ವಿಮರ್ಶೆ ಮಾಡಿದರೆ ಅವರಿಗೆ ಹಚ್ಚಲಿರುವ ಲೇಬಲ್ "ವೃತ್ತಿಪರ ನಿರಾಶಾವಾದಿ (Professional pessimist)". ಇದು ಮೋದಿ ನಿಘಂಟಿನಲ್ಲಿ ಹೊಸ ಜೋಡಣೆ. ಇರೋದನ್ನು ಇದ್ದಂಗೆ ಹೇಳಿದರೆ ಎದೆಗೆ ಬಂದು ಒದ್ದರಂತೆ!

ಈಗಾಗಲೇ ಭಾರತೀಯ ರಿಸರ್ವ್ ಬ್ಯಾಂಕ್‌ನ ಸ್ವಯಮಾಧಿಪತ್ಯ ಮಣ್ಣು ಪಾಲಾಗುತ್ತಿದೆ. ಪ್ರತಿಷ್ಠಿತ ಸಂಸ್ಥೆಗಳಾದ ಏರ್ ಇಂಡಿಯಾ, ಬಿಎಸ್‌ಎನ್‌ಎಲ್, ಭಾರತೀಯ ರೈಲ್ವೆ ಮುಂತಾದವುಗಳನ್ನು ತ್ವರಿತ ಗತಿಯಲ್ಲಿ ಮಾರಾಟ ಮಾಡಲು ಪ್ರಯತ್ನಗಳು ಮುಂದುವರಿಯುತ್ತಿವೆ. ನಿರ್ಮಲಾ ಸೀತಾರಾಮನ್ ನರೇಂದ್ರ ಮೋದಿಯವರ ನಿಷ್ಠಾವಂತ ಹಿಂಬಾಲಕಿ. ಆದ್ದರಿಂದ ಹೊಸ ಬಜೆಟ್‌ನಲ್ಲಿ ಹೊಸ ಹಣಕಾಸು ಸಚಿವೆ ಯಾವ ಹೊಸತನವನ್ನೂ ತೋರಿಸಲಿಲ್ಲ. ಗೆದ್ದಲು ಹಿಡಿದ ಹುಳ ತಿಂದ ಅದೇ ಹಳೇ ಕಥೆ. ಪೆಟ್ರೋಲ್ ಮತ್ತು ಡೀಸೆಲ್ ಬೆಲೆ ಹೆಚ್ಚಳದಿಂದ ಸಾಮಾನ್ಯ ಜನತೆಯ ಮನೆ ಬಜೆಟ್ ಗೋತಾ ಹೊಡೆಯುವುದು ನಿಶ್ಚಿತ. ಆದರೆ ಕಾರ್ಪೊರೇಟ್‌ಗಳಿಗೆ ತೆರಿಗೆ ವಿನಾಯ್ತಿ! ಯಾವ ಕಂಪೆನಿಗಳು ವಾರ್ಷಿಕ ನಾಲ್ಕು ನೂರು ಕೋಟಿ ರೂಪಾಯಿಗಳ ವಹಿವಾಟು ನಡೆಸುತ್ತವೋ ಅವುಗಳಿಗೆ ಶೇಕಡ ೨೫ ತೆರಿಗೆ. ಈ ಹಿಂದೆ ವಹಿವಾಟಿನ ಮಿತಿ ೨೫೦ ಕೋಟಿ ರೂಪಾಯಿಗಳಾಗಿತ್ತು. ಇದರಿಂದಾಗಿ ಸರ್ಕಾರದ ಬೊಕ್ಕಸಕ್ಕೆ ಸುಮಾರು ವಾರ್ಷಿಕ ರೂ.೪,೦೦೦ ಕೋಟಿ ತೆರಿಗೆ ಹಣ ನಷ್ಟ. ಬಜೆಟ್ ಕಾರ್ಪೊರೇಟ್ ಪರ, ಜನ ವಿರೋಧಿ ಅನ್ನುವುದರಲ್ಲಿ ಸಂಶಯವಿಲ್ಲ.

ಕಪ್ಪುಹಣವನ್ನು ಪತ್ತೆ ಹಚ್ಚಿ ಅದನ್ನು ಬಯಲು ಮಾಡುವ ಯಾವುದೇ ಪ್ರಸ್ತಾಪ ಬಜೆಟ್‌ನಲ್ಲಿ ಇಲ್ಲ. ಸಾಮಾನ್ಯ ಜನರಿಗೆ, ಬಡತನದ ರೇಖೆಗಿಂತ ಕೆಳಗಿರುವ ಜನರಿಗೆ, ವಾಸ ಮಾಡಲು ಮನೆ, ಕುಡಿಯಲು ನೀರು, ಮಕ್ಕಳಿಗೆ ವಿದ್ಯೆ, ಆಸ್ಪತ್ರೆ ಸೌಲಭ್ಯ ಮುಂತಾದವುಗಳನ್ನು ಕಲ್ಪಿಸುವ ಯಾವ ಯೋಜನೆಗಳಿಗೂ ಆದ್ಯತೆ ಕಂಡುಬರುವುದಿಲ್ಲ. ಬದಲಾಗಿ ಹಣಕಾಸಿನ ಮಂತ್ರಿಗಳು ಡಿಜಿಟಲ್ ಎಕಾನಮಿಯ ಬಗ್ಗೆ ಕಾಳಜಿ ವ್ಯಕ್ತಪಡಿಸಿದ್ದಾರೆ. ..... ಜುಟ್ಟಿಗೆ ಮಲ್ಲಿಗೆ ಎಂಬ ಗಾದೆ ಜ್ಞಾಪಕಕ್ಕೆ ಬರುತ್ತೆ. ಖಾಯಂ ಕೆಲಸವಿಲ್ಲ, ಜೇಬಿನಲ್ಲಿ ಕಾಸಿಲ್ಲ, ಬ್ಯಾಂಕ್ ಅಂದ್ರೆ ಗೊತ್ತಿಲ್ಲ, ಬ್ಯಾಂಕ್ ಖಾತೆ ಇಲ್ಲವೇ ಇಲ್ಲ – ಇಂತಹ ಜನಕ್ಕೆ ಎಲ್ಲಿಯ ಡಿಜಿಟಲ್ ಎಕಾನಮಿ?! ಬಡವ ಶ್ರೀಮಂತರ ಬಿರುಕು ವಿಸ್ತಾರವಾಗುತ್ತಿದೆ ಮತ್ತು ಸಮಾಜದಲ್ಲಿ ಅಸಮಾನತೆ ಹೆಚ್ಚುತ್ತಿದೆ.

ಎರಡು ಗಂಭೀರ ವಿಚಾರಗಳ ಬಗ್ಗೆ ಬಜೆಟ್‌ನಲ್ಲಿ ಪ್ರಸ್ತಾಪವಿಲ್ಲ ಅನ್ನುವುದು ಸೋಜಿಗದ ಸಂಗತಿ. ಒಂದು, ಕೃಷಿ ಕ್ಷೇತ್ರದಲ್ಲಿ ಕಾಣಿಸಿಕೊಂಡಿರುವ ತೀವ್ರ ಮುಗ್ಗಟ್ಟು. ರೈತರು ಬೆಳೆದ ಉತ್ಪಾದನೆಗೆ ನ್ಯಾಯ ಬೆಲೆ ಸಿಗುತ್ತಿಲ್ಲ. ಸರ್ಕಾರದಿಂದ ಕನಿಷ್ಠ ಬೆಂಬಲ ಬೆಲೆಯೂ (MSP) ವೈಜ್ಞಾನಿಕವಾಗಿ ನಿಗದಿಯಾಗಲಿಲ್ಲ. ವ್ಯವಸಾಯಕ್ಕೆ ನೀರಿಲ್ಲ. ದೇಶದ ಅರ್ಧ ಭಾಗದಷ್ಟು ಪ್ರದೇಶದಲ್ಲಿ ಬರ. ರೈತ ಸಾಲಗಳಿಂದ ತತ್ತರಿಸಿದ್ದಾನೆ. ಬಿತ್ತನೆ ಕುಂಠಿತವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಬಜೆಟ್‌ನಲ್ಲಿ ಕೃಷಿ ಕ್ಷೇತ್ರಕ್ಕೆ ಅನುದಾನ ಎಷ್ಟರ ಮಟ್ಟಿಗೆ ಒದಗಿಸಬೇಕಿತ್ತೋ ಅಷ್ಟು ಒದಗಿಸಿಲ್ಲ. ನಿಜ ಏನೆಂದರೆ, ಅನುದಾನ ಕಡಿಮೆ ಆಗಿದೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಗೂ (MNREGS) ಅಡ್ಡಿ ಆತಂಕಗಳು ಉಂಟಾಗಿವೆ. ಕೃಷಿಕರ ಆದಾಯವನ್ನು ದ್ವಿಗುಣಗೊಳಿಸುತ್ತೇವೆ

ರೈತರ ಹೊಸ ಸಾಲಕ್ಕೆ 100 ಕೋಟಿ.!ಸುದ್ದಿ

ಹಳೇ ಸಾಲನೆ ಇನ್ನು ಮನ್ನಾ ಆಗಲಿಲ್ಲ...!
ಇನ್ನು ಹೊಸ ಸಾಲನಾ...?

ಅನ್ನುವ ಭರವಸೆ ಬರೀ ಕನ್ನಡಿಯೊಳಗಿನ ಗಂಟಷ್ಟೆ! ಕೃಷಿ ಕ್ಷೇತ್ರದ ಮುಗ್ಗಟ್ಟು ಇನ್ನೂ ಉಲ್ಬಣವಾಗಲಿದೆ. ದೇಶದ ಕೃಷಿ ಕ್ಷೇತ್ರದಲ್ಲಿ ೨೦೧೪–೧೫ರಲ್ಲಿ (–) ೦.೨% ಇದ್ದ ಒಟ್ಟು ಪ್ರತಿಫಲ ಮೌಲ್ಯ ಸಂಕಲನ (Gross Value Added = GVA) ೨೦೧೬–೧೭ರಲ್ಲಿ ೬.೩%ಗೆ ಹೆಚ್ಚಿ, ೨೦೧೮–೧೯ರಲ್ಲಿ ೨.೯%ಗೆ ಇಳಿಯಿತು. ಮತ್ತೆ ಈಗಿನ ಕಷ್ಟದ ಪರಿಸ್ಥಿತಿಯಲ್ಲಿ ಖಾಸಗಿ ಬಂಡವಾಳಗಾರರು ಕೃಷಿಯಲ್ಲಿ ಬಂಡವಾಳ ಹೂಡಲು ಮುಂದಾಗುತ್ತಿಲ್ಲ. ಇನ್ನು ಎರಡನೆಯ ವಿಚಾರ. ಬೃಹದಾಕಾರವಾಗಿ ರೂಪುಗೊಂಡಿರುವ ನಿರುದ್ಯೋಗ ಸಮಸ್ಯೆ. ಉದ್ಯೋಗಗಳು ನಾಶ ಹೊಂದಿವೆ. ಹೊಸ ಉದ್ಯೋಗಗಳು ಸೃಷ್ಟಿ ಯಾಗುತ್ತಿಲ್ಲ. ನಿಗದಿತ ಕಾಲಾವಧಿಯ ಉದ್ಯೋಗಗಳ ಬಗ್ಗೆ ಸರ್ಕಾರ ಮಾತನಾಡುತ್ತಿದೆ. ನಿರುದ್ಯೋಗ ಶೇಕಡ ೬.೧ ಮುಟ್ಟಿದೆ. ಇಂತಹ ಒಂದು ಭಯಾನಕ ಪರಿಸ್ಥಿತಿಯನ್ನು ದೇಶ ಕಳೆದ ೪೫ ವರ್ಷಗಳಲ್ಲಿ ಕಂಡಿರಲಿಲ್ಲ. ಕಾರ್ಮಿಕರಿಲ್ಲದ ಕೈಗಾರಿಕೆ, ರೈತರಿಲ್ಲದ ಕೃಷಿ – ಈ ದಿಸೆಯಲ್ಲಿ ನರೇಂದ್ರ ಮೋದಿ ಸರ್ಕಾರ ಕಾರ್ಯ ಮಗ್ನವಾಗಿದೆ. ಕಾರ್ಮಿಕ ಕಾಯಿದೆಗಳನ್ನು ತಿದ್ದುಪಡಿ ಮಾಡಲಾಗುತ್ತಿದೆ. ಈಗಿರುವ ೪೪ ಕಾನೂನುಗಳನ್ನು ನಾಲ್ಕು ಕಾರ್ಮಿಕ ಸಂಹಿತೆಗಳಾಗಿ ಮಾರ್ಪಡಿಸಲು ತೀರ್ಮಾನಿಸಲಾಗಿದೆ. ದೇಶ ವಿದೇಶ ಖಾಸಗೀ ಬಂಡವಾಳಗಾರರಿಗೆ ಈಸ್ ಆಫ್ ಡೋಯಿಂಗ್ ಬಿಸಿನೆಸ್! ಮೇಲ್ಕಂಡ ಎರಡು ವಿಚಾರಗಳ ಬಗ್ಗೆ ಯಾವುದೇ ಚಿಂತನೆ ಬಜೆಟ್‌ನಲ್ಲಿ ಕಾಣಬರುವುದಿಲ್ಲ. ಉದ್ಯೋಗ ಸೃಷ್ಟಿಸದ ಯಾವುದೇ ಆರ್ಥಿಕ ಅಭಿವೃದ್ಧಿಯಿಂದ ಏನೂ ಪ್ರಯೋಜನವಿಲ್ಲ; ಹಿತಕ್ಕಿಂತ ಅನಾಹುತವೇ ಹೆಚ್ಚು.

ನರೇಂದ್ರ ಮೋದಿ ಸರ್ಕಾರಕ್ಕೆ ಸಾರ್ವಜನಿಕ ಉದ್ದಿಮೆಗಳಲ್ಲಿ ತನ್ನ ಬಂಡವಾಳವನ್ನು ಹಿಂದೆ ಪಡೆಯುವ (Disinvestment) ಅವಸರವೇ ಹೆಚ್ಚಾಗಿದೆ. ಬಜೆಟ್‌ನಲ್ಲಿಯೂ ಅದು ಕಾಣಬರುತ್ತದೆ. ಸರ್ಕಾರಿ ವಲಯದ ಉದ್ದಿಮೆಗಳಲ್ಲಿ ಬಂಡವಾಳವನ್ನು ಶೇಕಡ ೫೧ಕ್ಕಿಂತ ಕಡಿಮೆ ಮಾಡಲು ಸರ್ಕಾರ ತೀರ್ಮಾನ ಮಾಡಿದೆ. ಕೇಂದ್ರದ ಸಾರ್ವಜನಿಕ ಉದ್ದಿಮೆಗಳಲ್ಲಿ ಬಂಡವಾಳ ಹೂಡಿಕೆ ಸಗಟಾಗಿರುವ ಅವಶ್ಯಕತೆ ಇಲ್ಲ, ಚಿಲ್ಲರೆಯಾಗಿದ್ದರೆ ಸಾಕು ಎಂಬುದು ಕೇಂದ್ರ ಸರ್ಕಾರದ ಅಭಿಪ್ರಾಯ. ಅದನ್ನು ಅನುಷ್ಠಾನ ಮಾಡಲು ಸರ್ಕಾರ ಮುಂದಾಗುತ್ತಿದೆ. ಬಂಡವಾಳ ಹೂಡಿಕೆಯನ್ನು ವಾಪಸ್ ಪಡೆಯಲು ನೀತಿ ಆಯೋಗ ಅನೇಕ ಮಾರ್ಗಗಳನ್ನು ಸೂಚಿಸಿದೆ. ಸದ್ಯದ ಗುರಿ ರೂ. ೧.೦೫ ಲಕ್ಷ ಕೋಟಿ ಸರ್ಕಾರದ ಬಂಡವಾಳ ವಾಪಸ್ ಪಡೆಯುವುದು (Disinvestment Target). ಏರ್ ಇಂಡಿಯಾ ಸಂಸ್ಥೆಯನ್ನು ಶೀಘ್ರವಾಗಿ ಮಾರಾಟ ಮಾಡುವ ತರಾತುರಿಯಲ್ಲಿದೆ ಕೇಂದ್ರ ಸರ್ಕಾರ. ಸಾರ್ವಜನಿಕ ಉದ್ದಿಮೆಗಳು ದೇಶದ ಆಸ್ತಿ. ದೇಶದ ಹಾಗೂ ಜನರ ಸಂಪತ್ತು. ದೇಶವನ್ನೇ ಮಾರಲು ಹೊರಟಿದೆ ನರೇಂದ್ರ ಮೋದಿ ಸರ್ಕಾರ. ಈ ಬಜೆಟ್‌ನಲ್ಲಿ ಹಣಕಾಸಿನ ಕೊರತೆಯ ಗುರಿ (Fiscal Defecit Target) ಈ ಹಣಕಾಸಿನ ವರ್ಷದಲ್ಲಿ ಶೇಕಡ ೩.೩ ಎಂದು ನಿಗದಿಪಡಿಸಲಾಗಿದೆ. ಕಳೆದ ಬಜೆಟ್‌ನಲ್ಲಿ ಖೋತಾ (ಅಥವಾ ಹಣಕಾಸು ಕೊರತೆ (Fiscal Defecit) ಬಗ್ಗೆ ಸರ್ಕಾರ ನೀಡಿದ ಅಂಕಿ 'ಕಟ್ಟು ಕಥೆ' ಎಂದು ಕಂಟ್ರೋಲರ್ ಮತ್ತು ಆಡಿಟರ್ ಜನರಲ್ ಆಫ್ ಇಂಡಿಯಾ (CAG) ಅಭಿಪ್ರಾಯ ವ್ಯಕ್ತಪಡಿಸಿದ್ದರು. ಅದೇ ಟೀಕೆ ಈಗಿನ ಬಜೆಟ್‌ಗೂ ಅನ್ವಯವಾಗಬಹುದು. ೨೦೧೯–೨೦ ವರ್ಷದ ಒಟ್ಟು ಆದಾಯ ೧೯.೬೨ ಲಕ್ಷ ಕೋಟಿ ರೂಪಾಯಿ ಎಂದು ಅಂದಾಜು ಮಾಡಲಾಗಿದೆ. ಕಳೆದ ವರ್ಷ ೨೦೧೮–೧೯ರಲ್ಲಿ ಸಂದಾಯವಾದ ವಾಸ್ತವಿಕ ವರಮಾನ ೧೫.೬೩ ಲಕ್ಷ ಕೋಟಿ ರೂಪಾಯಿ (ಸರ್ಕಾರದ ಆರ್ಥಿಕ ಸಮೀಕ್ಷೆಯ ಅನುಸಾರ). ಅಂದರೆ ೨೦೧೯–೨೦ರ ನಿರೀಕ್ಷಿತ ಆದಾಯ ೨೦೧೮–೧೯ರ ವಾಸ್ತವಿಕ ವರಮಾನಕ್ಕಿಂತ ಶೇಕಡ ೨೫.೫೬ ಹೆಚ್ಚು. ಇದು ಸುಲಭ ಸಾಧ್ಯವಲ್ಲ. ದೇಶದ ಆರ್ಥಿಕ ಪರಿಸ್ಥಿತಿ ಕ್ಷೀಣಿಸಿದೆ. ಭಾರತ ರಿಸರ್ವ್ ಬ್ಯಾಂಕ್‌ನಿಂದ ದೊಡ್ಡ ಪಾಲಿನ

ಮಿಗುತಾಯ ಹಣ (Capital Reserves) ತನ್ನ ವಶ ಸೇರಲಿದೆ ಅನ್ನುವ ಭರವಸೆ ಕೇಂದ್ರ ಸರ್ಕಾರಕ್ಕೆ ಇದೆ. ಸದ್ಯದಲ್ಲೇ ಬಿಮಲ್ ಜಲಾನ್‌ರವರ ಶಿಫಾರಸ್ಸು ಹೊರಬರಲಿದೆ. ಅವರ ವರದಿಯು ಕೇಂದ್ರ ಸರ್ಕಾರದ ಪರವಾಗಿಯೇ ಇರಬಹುದೆಂಬ ನಿರೀಕ್ಷೆ ಸಾಮಾನ್ಯವಾಗಿದೆ.

ಹಣಕಾಸಿನ ಸಚಿವೆ ಸಾರ್ವಜನಿಕ ಬ್ಯಾಂಕುಗಳಲ್ಲಿ ರೂಪಾಯಿ ೭೦,೦೦೦ ಕೋಟಿ ಹೆಚ್ಚಿನ ಬಂಡವಾಳ ಹೂಡಲು ತೀರ್ಮಾನವನ್ನು ಬಜೆಟ್‌ನಲ್ಲಿ ಪ್ರಕಟಿಸಿದ್ದಾರೆ. ಆದರೆ ಮರುಪಾವತಿ ಆಗದೆ ಉಳಿದಿರುವ ಸಾಲಗಳನ್ನು (NPA) ವಸೂಲು ಮಾಡುವ ಕೆಲಸದ ಬಗ್ಗೆ ಯಾವ ಸೂಚನೆಯನ್ನೂ ಮುಂದಿಟ್ಟಿಲ್ಲ. ಸರ್ಕಾರೀ ಸ್ವಾಮ್ಯದ ಬ್ಯಾಂಕುಗಳನ್ನು ಒಟ್ಟು ಸೇರಿಸುವುದು (consolidation) ಬ್ಯಾಂಕ್‌ಗಳ ಆರ್ಥಿಕ ಸಮಸ್ಯೆಗಳಿಗೆ ಪರಿಹಾರವಲ್ಲ. ಬ್ಯಾಂಕ್‌ಯೇತರ ಹಣಕಾಸು ಸಂಸ್ಥೆಗಳಲ್ಲೂ (NBFC) ತೀವ್ರ ಮುಗ್ಗಟ್ಟು ಉಂಟಾಗಿದೆ. ರಿಸರ್ವ್ ಬ್ಯಾಂಕ್‌ಗೆ ಅವುಗಳ ಮೇಲೆ ಪೂರ್ಣ ಅಧಿಕಾರ ಅಥವಾ ಹತೋಟಿ ಇಲ್ಲ. ಇದರ ಬಗ್ಗೆಯೂ ಬಜೆಟ್‌ನಲ್ಲಿ ಏನೂ ಮಾತಿಲ್ಲ.

೨೦೧೯-೨೦ರಲ್ಲಿ ದೇಶದ ಆರ್ಥಿಕತೆ ವಾಸ್ತವವಾಗಿ ಶೇಕಡ ೭ ಅಥವಾ ೮ರಷ್ಟು ವೃದ್ಧಿಯಾಗಬಹುದೆಂದು ಕೇಂದ್ರ ಬಜೆಟ್ ಭಾವಿಸುತ್ತದೆ. ೨೦೧೮-೧೯ರಲ್ಲಿ ಅದು ಶೇಕಡ ೫.೮ರಷ್ಟಿತ್ತು. ಆದ್ದರಿಂದ ದೊಡ್ಡ ಪ್ರಮಾಣದ ಹೆಚ್ಚಳ ಊಹಿಸುವುದು ಕಷ್ಟ. ದೇಶೀ ಖಾಸಗೀ ಬಂಡವಾಳಗಾರರಿಂದ ಹೆಚ್ಚು ಹಣವನ್ನು ಪಡೆಯಲು ಕೇಂದ್ರ ಸರ್ಕಾರಕ್ಕೆ ಸಾಧ್ಯವಾಗಿಲ್ಲ. ನೇರ ವಿದೇಶಿ ಬಂಡವಾಳದ (FDI) ಕಡೆ ಸರ್ಕಾರದ ಗಮನ ಹರಿದಿದೆ. ವೈಮಾನಿಕ ಕ್ಷೇತ್ರ, ಸುದ್ದಿ ಮಾಧ್ಯಮ, ವಿಮಾ ಮಧ್ಯವರ್ತಿಗಳು ಮುಂತಾದವುಗಳಲ್ಲಿ ಶೇಕಡ ೧೦೦ರಷ್ಟು ನೇರ ವಿದೇಶಿ ಬಂಡವಾಳಕ್ಕೆ ಅನುಮತಿ ನೀಡಲು ಕೇಂದ್ರ ಸರ್ಕಾರ ಸಜ್ಜಾಗುತ್ತಿದೆ. ಜೊತೆ ಜೊತೆಯಲ್ಲಿ ಖಾಸಗೀ ವಾಣಿಜ್ಯ ಸಂಸ್ಥೆಗಳಿಂದ ಹಣ ಸಾಲ ಪಡೆಯುವ ಯೋಚನೆಯನ್ನೂ ಸರ್ಕಾರ ಇಟ್ಟುಕೊಂಡಿದೆ. ದೇಶದ ಕಂಟ್ರೋಲರ್ ಜನರಲ್ ಆಫ್ ಅಕೌಂಟ್ಸ್ ದೇಶದ ಆರ್ಥಿಕ ಸ್ಥಿತಿಗತಿಯ ಬಗ್ಗೆ ಅಂಕಿ-ಅಂಶಗಳನ್ನು ಪ್ರಕಟಿಸಿದ್ದಾರೆ. ಅದರ ಅನುಸಾರ ಕೇಂದ್ರದ ಬಜೆಟ್ ಅಂದಾಜುಗಳಿಗಿಂತ ಆರ್ಥಿಕ ನಿರ್ವಹಣೆ ಕಳಪೆಯಾಗಿದೆ. ಅಂದಾಜಿಗಿಂತ ತೆರಿಗೆ ವಸೂಲಾತಿ ೧.೬೭ ಟ್ರಿಲಿಯನ್ ರೂಪಾಯಿ ಕಡಿಮೆ ಇತ್ತು. ಆದರೂ ಮೋದಿ ಸರ್ಕಾರ ಆಕಾಶಕ್ಕೆ ಏಣಿ ಇಡುತ್ತಿದೆ, ಮೂಗಿಗೆ ತುಪ್ಪ ಹಚ್ಚುತ್ತಿದೆ! ನಿರ್ಮಲಾ ಸೀತಾರಾಮನ್‌ರವರ ಬಜೆಟ್ ನಿಷ್ಪಾರದರ್ಶಕವಾಗಿದೆ ಹಾಗೂ ವೇದನಾಶೂನ್ಯವಾಗಿದೆ. ಯಾವತ್ತೂ ಬೃಹತ್ ಆರ್ಥಿಕತೆ ಸೂಕ್ಷ್ಮವಾದ (ಕಿರಿದಾದ) ಆರ್ಥಿಕತೆಯೊಂದಿಗೆ ಸರಿ ಹೊಂದುವುದಿಲ್ಲ. ನರೇಂದ್ರ ಮೋದಿ ಬ್ರಾಂಡ್ ನಿರ್ಮಲಾ ಸೀತಾರಾಮನ್‌ರವರ ೨೦೧೯-೨೦ರ ಬಜೆಟ್ ಇದಕ್ಕೆ ಉದಾಹರಣೆ. ಕಾರ್ಪೊರೇಟ್ ಪರ, ಜನಗಳ ವಿರೋಧಿ ಬಜೆಟ್ ಅನ್ನುವುದಷ್ಟೇ ಯಥಾರ್ಥ!

ದೇಶದ ಆರ್ಥಿಕ ಪರಿಸ್ಥಿತಿಯ ಆರೋಗ್ಯ ಚೆನ್ನಾಗಿಲ್ಲ ಅನ್ನುವುದಕ್ಕೆ ಇನ್ನೊಂದು ನಿದರ್ಶನ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಹೊರಪಡಿಸಿರುವ ಒಂದು ಅಧ್ಯಯನ ವರದಿ. ಅದರ ಅನುಸಾರ ಜನಗಳ ಬಳಕೆ (Consumption – ಉಪಯೋಗ, ಕ್ರಯಕ್ಕೆ ಕೊಂಡುಕೊಳ್ಳುವುದು) ಕಡಿಮೆಯಾಗಿದೆ. ಅಧ್ಯಯನ ವರದಿಯ ಭಾಷೆಯಲ್ಲಿ, "ಸೀರಿಯಸ್ ಸ್ಲೋಡೌನ್", ಗ್ರಾಮಾಂತರ ಹಾಗೂ ನಗರ ಪ್ರದೇಶ ಎರಡರಲ್ಲೂ. ಜನ ಕಾರ್, ದ್ವಿಚಕ್ರ ವಾಹನ, ಟ್ರಾಕ್ಟರ್ (Automobile)ಕೊಳ್ಳುವುದು, ಆಡಂಬರ ವಸ್ತುಗಳ (Life Style Products) (ಉದಾಹರಣೆ – ಚಿನ್ನಾಭರಣಗಳು) ಮಾರಾಟ, ಮನೆ, ನಿವೇಶನ ಖರೀದಿಸುವುದು (Housing Absorption) ಮುಂತಾದವುಗಳು ಗಣನೀಯವಾಗಿ ಕ್ಷೀಣಿಸಿವೆ. ಬಳಕೆ (Consumption) ಶೇಕಡ ೧೩ರಷ್ಟು ಕಡಿಮೆಯಾಗಿದೆ. ಆದರೆ, ಕೇಂದ್ರ ಬಜೆಟ್‌ನಲ್ಲಿ ಈ ವಾಸ್ತವತೆ ವ್ಯಕ್ತವಾಗಿಲ್ಲ. ಚಂಡಿಯ ರೀತಿ ವಿತ್ತ ಮಂತ್ರಾಲಯದ ಅಧಿಕಾರಿಗಳು ಇದನ್ನು ಒಪ್ಪುವುದಿಲ್ಲ.

ಇನ್ನು ಭಾರತೀಯ ರೈಲ್ವೆಯ ಆಯವ್ಯಯಗಳ ಬಗ್ಗೆ ಮಾತನಾಡಲು ಏನೂ ಇಲ್ಲ. ಭಾರತೀಯ ರೈಲ್ವೆ ಶೀಘ್ರಗತಿಯಲ್ಲಿ ಹಳಿ ತಪ್ಪಿ ಅವಘಡದತ್ತ ಪಯಣಿಸುತ್ತಿದೆ. ನಿರ್ಮಲಾ ಸೀತಾರಾಮನ್‌ರವರ ಬಜೆಟ್ ದೇಶದ ಆರ್ಥಿಕ ಸ್ವಾವಲಂಬನೆಗೆ ಕಲ್ಲು ಹಾಕುವ ಬಜೆಟ್.

ಒಂದು ಯೋಗ್ಯ, ಶಿಸ್ತುಬದ್ಧವಾದ, ಪರಿಣಾಮಕಾರಿ ವಿರೋಧ ಪಕ್ಷ ಅಥವಾ ಪಕ್ಷಗಳು ಪಾರ್ಲಿಮೆಂಟಿನಲ್ಲಿ ಇಲ್ಲ. ಅಧಿಕಾರದಲ್ಲಿರುವ ಪಕ್ಷಕ್ಕೆ ಪ್ರಚಂಡ ಬಹುಮತ. ಎಲ್ಲ ಅಧಿಕಾರವೂ ಪ್ರಧಾನ ಮಂತ್ರಿ ವಶ. ಇದು ನರೇಂದ್ರ ಮೋದಿ ಬ್ರಾಂಡ್. ಸಾಮಾನ್ಯ ಜನ ಬಜೆಟ್ ರೂಪಿಸುವ ಪ್ರಜಾಸತ್ತಾತ್ಮಕ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವುದು ದುರ್ಲಭ ಹಾಗೂ ಚರ್ಚೆಗಳು ನಾಮಕಾವಾಸ್ತೆ ಆಗುವ ರಿಸ್ಕ್ ಇದೆ. ಇದು ೧೭ನೇ ಲೋಕಸಭೆಯ ದುರಂತ.

**ಹಳಿ ತಪ್ಪಿದ ಆರ್ಥಿಕತೆ, ಬರಿದಾಗಲಿರುವ ಬೊಕ್ಕಸ**

ಭಾರತೀಯ ರಿಸರ್ವ್ ಬ್ಯಾಂಕ್‌ನ ಡೆಪ್ಯುಟಿ ಗವರ್ನರ್ ವಿರಲ್ ಆಚಾರ್ಯ ತಮ್ಮ ಪದವಿಗೆ ರಾಜೀನಾಮೆ ಸಲ್ಲಿಸಿದ್ದಾರೆ. ಅಚ್ಚರಿಯೇನಿಲ್ಲ. ಸ್ವಲ್ಪ ಲೇಟ್, ಅಷ್ಟೇ! ಏನು ನಡೆಯಬೇಕಿತ್ತೋ ಅದು ನಡೆದಿದೆ. ರಿಸರ್ವ್ ಬ್ಯಾಂಕ್‌ನ ಸ್ವಾಯತ್ತತೆಯ ಪ್ರಶ್ನೆ ಮತ್ತೊಮ್ಮೆ ಗಂಭೀರವಾಗಿ ಕಾಣಿಸಿಕೊಂಡಿದೆ. ಕೇಂದ್ರಿಯ ಬ್ಯಾಂಕ್‌ನ ಸ್ವಾಯತ್ತತೆಯ ಪರ ಗಟ್ಟಿ ದನಿ ಎತ್ತಿದವರು ವಿರಲ್ ಆಚಾರ್ಯ. ನರೇಂದ್ರ ಮೋದಿ ಸರ್ಕಾರದ ಆಡಳಿತ ಮತ್ತು ಆರ್ಥಿಕ ನೀತಿಗಳನ್ನು ನಿರಂತರವಾಗಿ ಬಹಿರಂಗವಾಗಿಯೇ ವಿಮರ್ಶಿಸುತ್ತಿದ್ದರವರು. ಬಡ್ಡಿದರ ಕಡಿತ, ಸರ್ಕಾರಿ ಸ್ವಾಮ್ಯದ ಬ್ಯಾಂಕ್‌ಗಳ ಮೇಲಿನ ಕಠಿಣ ಸ್ವರೂಪದ ಆರ್ಥಿಕ ನಿರ್ಬಂಧ (Prompt Corrective Action - PCA) ಸಡಿಲಿಕೆ ಮತ್ತು ರಿಸರ್ವ್ ಬ್ಯಾಂಕ್‌ನ ಬಳಿ ಇರುವ ಹೆಚ್ಚುವರಿ ನಗದನ್ನು (Surplus Capital) ಕೇಂದ್ರ ಸರ್ಕಾರದ ಬೊಕ್ಕಸಕ್ಕೆ ಹಸ್ತಾಂತರಿಸುವುದು ಮುಂತಾದ ವಿಚಾರಗಳಲ್ಲಿ ವಿರಲ್ ಆಚಾರ್ಯರವರು ಬೇರೆಯ ಅಭಿಪ್ರಾಯವನ್ನೇ ಹೊಂದಿದ್ದರು. ಆರ್ಥಿಕ ವೃದ್ಧಿ ಮತ್ತು ಹಣದುಬ್ಬರ ಕುರಿತು ಬ್ಯಾಂಕ್‌ನ ಗವರ್ನರ್ ಶಕ್ತಿಕಾಂತ್‌ದಾಸ್‌ರವರ ಜತೆಗೂ ಭಿನ್ನಾಭಿಪ್ರಾಯ ತಳೆದಿದ್ದರು. "ಆರ್‌ಬಿಐ ಸ್ವಾತಂತ್ರ್ಯವನ್ನು ಕೇಂದ್ರ ಸರ್ಕಾರ ಗೌರವಿಸದೇ ಇದ್ದರೆ, ಇಂದಲ್ಲ ನಾಳೆ ಹಣಕಾಸು ಮಾರುಕಟ್ಟೆಯ ಆಕ್ರೋಶಕ್ಕೆ ಗುರಿಯಾಗಬೇಕಾದೀತು" ಎಂದು ಹಿಂದೆಯೇ ಎಚ್ಚರಿಕೆ ನೀಡಿದ್ದರು. ಸೈದ್ಧಾಂತಿಕ ಭಿನ್ನಾಭಿಪ್ರಾಯ, ಕೇಂದ್ರ ಸರ್ಕಾರ ಜತೆಗಿನ ಸಂಘರ್ಷಗಳೇ ವಿರಲ್ ಆಚಾರ್ಯರ ರಾಜೀನಾಮೆಗೆ ಕಾರಣ ಅನ್ನುವುದು ಸ್ಪಷ್ಟ. ನೋಟು ರದ್ದತಿ (ಅಮಾನ್ಯೀಕರಣ) ವಿಚಾರದಲ್ಲಿ ವಿರಲ್ ಆಚಾರ್ಯರಿಗೂ ಕೇಂದ್ರ ಸರ್ಕಾರಕ್ಕೂ ಮಧ್ಯೆ ತೀವ್ರ ಭಿನ್ನಾಭಿಪ್ರಾಯಗಳು ಇದ್ದದ್ದು ದೇಶದ ಜನತೆಗೆ ತಿಳಿದೇ ಇದೆ. ಜನ ಮರೆತಿಲ್ಲ.



ರಿಸರ್ವ್ ಬ್ಯಾಂಕ್‌ನ ಮಿಗುತಾಯ ಹಣದಿಂದ ಕೇಂದ್ರ ಸರ್ಕಾರಕ್ಕೆ ನಿರಂತರವಾಗಿ ಪ್ರತಿ ವರ್ಷ ಆದಾಯ ವರ್ಗಾವಣೆಯಾಗುತ್ತಲೇ ಬಂದಿದೆ. ೨೦೦೯–೧೦ರಿಂದ ೨೦೧೮–೧೯ರವರೆಗಿನ ಅವಧಿಯಲ್ಲಿ ಆರ್‌ಬಿಐ ಕೇಂದ್ರ ಸರ್ಕಾರಕ್ಕೆ ೩.೮ ಲಕ್ಷ ಕೋಟಿ ರೂಪಾಯಿಗಳನ್ನು ಡಿವಿಡೆಂಡ್ ರೂಪದಲ್ಲಿ ಹಸ್ತಾಂತರಿಸಿದೆ. ಕ್ಯಾಪಿಟಲ್ ರಿಸರ್ವ್ ಅನ್ನುವುದು ಯಾವುದೇ ಸಂಸ್ಥೆಯ ಸಾದಿಲ್ವಾರು ನಿಧಿ ಅಂದರೆ Contingency Fund, ಆಪತ್ ನಿಧಿ. ಅದನ್ನು ದುರ್ಬಳಕೆ ಮಾಡಿಕೊಳ್ಳುವುದು ಮೂರ್ಖತನ ವಾಗುತ್ತದೆ. ರಿಸರ್ವ್ ಬ್ಯಾಂಕ್‌ನ ಕ್ಯಾಪಿಟಲ್ ರಿಸರ್ವ್‌ನಿಂದ ಇನ್ನೂ ಹೆಚ್ಚಿನ ಹಣವನ್ನು ಅಪೇಕ್ಷಿಸಿದ ನರೇಂದ್ರ ಮೋದಿ ಸರ್ಕಾರ ನಿವೃತ್ತ ರಿಸರ್ವ್ ಬ್ಯಾಂಕ್ ಗವರ್ನರ್ ಬಿಮಲ್ ಜಲಾನ್‌ರವರ ಅಧ್ಯಕ್ಷತೆಯಲ್ಲಿ ಜಂಟಿ ಸಮಿತಿಯೊಂದನ್ನು ರಚಿಸಿತು. ಬಿಮಲ್ ಜಲಾನ್ ರವರು ಕೇಂದ್ರ ಸರ್ಕಾರದ ಪರವಾಗಿಯೇ ವರದಿ ನೀಡುವ ಸೂಚನೆಗಳ ಸುದ್ದಿ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ರೋಗಿ ಬಯಸಿದ್ದು ಹಾಲು, ವೈದ್ಯ ಹೇಳಿದ್ದೂ ಹಾಲು! ಸಮಿತಿಯ ಸದಸ್ಯರಾಗಿದ್ದ ವಿರಲ್ ಆಚಾರ್ಯ ಮತ್ತು ಬಿಮಲ್ ಜಲಾನ್‌ರವರ ಮಧ್ಯೆಯೂ ಭಿನ್ನಾಭಿಪ್ರಾಯಗಳು ಇದ್ದದ್ದು ಮಾಧ್ಯಮದಲ್ಲಿ ಪ್ರಕಟಗೊಂಡಿದೆ. "ಯಾವ ಸರ್ಕಾರ ರಿಸರ್ವ್ ಬ್ಯಾಂಕ್‌ನ ಸ್ವಯಮಾಧಿಪತ್ಯವನ್ನು ಗೌರವಿಸುವುದಿಲ್ಲವೋ, ಆ ಸರ್ಕಾರ ಮಾಡುವ ಕೆಲಸ, ಶೀಘ್ರವಾಗಿ ದೇಶದ ಹಣಕಾಸಿನ ಪರಿಸ್ಥಿತಿಗೆ ಬೆಂಕಿ ಸ್ಪರ್ಶ ಮಾಡುವ ಕೆಲಸಕ್ಕೆ ಸಮ! ಅದರ ಪರಿಣಾಮ ಅತ್ಯಂತ ಭೀಕರವಾಗಿದ್ದು, ಒಂದು ಅತಿ ಮುಖ್ಯವಾದ ಸ್ವಾಯತ್ತ ನಿಯಂತ್ರಕ ಸಂಸ್ಥೆಯನ್ನು (Autonomous Regulatory Body) ದಳ್ಳುರಿಗೆ ನೂಕಿದ, ಆ ಸಂಸ್ಥೆಯನ್ನು ಕಡೆಗಾಣಿಸಿದ ದಿನದ ಬಗ್ಗೆ ಪಶ್ಚಾತ್ತಾಪವನ್ನು ಅನುಭವಿಸಬೇಕಾಗುತ್ತದೆ" ಎಂದು ವಿರಲ್ ಆಚಾರ್ಯ ತಮ್ಮ ಮುಕ್ತ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು. ಆದರೆ ಕೇಂದ್ರ ಸರ್ಕಾರ ತನ್ನ ರಿಸರ್ವ್ ಬ್ಯಾಂಕ್ ವಿರೋಧಿ ದೌರ್ಜನ್ಯವನ್ನು ಕೈ ಬಿಡಲಿಲ್ಲ. ಪರಿಣಾಮ ರಿಸರ್ವ್ ಬ್ಯಾಂಕ್ ಗವರ್ನರ್ ಊರ್ಜಿತ್ ಪಟೇಲ್ ತನ್ನ ಪದವಿಗೆ ೨೦೧೮ರ ಡಿಸೆಂಬರ್ ೧೦ರಂದು ರಾಜೀನಾಮೆ ನೀಡಿದರು. ಈ ಅನಾಹುತದಿಂದ ಕೇಂದ್ರ ಸರ್ಕಾರ ಪಾಠ ಕಲಿಯಲಿಲ್ಲ. ಪೀಡೆ ತೊಲಗಿತು ಅನ್ನುವ ಧೋರಣೆ. ಇದಕ್ಕೂ ಹಿಂದೆ, ಎರಡನೇ ಅವಧಿಗೆ ರಿಸರ್ವ್ ಬ್ಯಾಂಕ್ ಗವರ್ನರ್ ಆಗಿದ್ದ ರಘುರಾಂ ರಾಜನ್ ರವರು ಆಸಕ್ತಿ ತೋರಿಸಲಿಲ್ಲ. ಕೇಂದ್ರ ಸರ್ಕಾರಕ್ಕೂ ಅವರು ಪದವಿಯಲ್ಲಿ ಮುಂದುವರಿಯುವುದು ಬೇಕಿರಲಿಲ್ಲ. ಮುಖ್ಯ ಆರ್ಥಿಕ ಸಲಹೆಗಾರರಾಗಿದ್ದ ಅರವಿಂದ್ ಸುಬ್ರಮಣಿಯನ್‌ರವರು ಜೂನ್ ೨೦೧೮ರಲ್ಲಿ ತಮ್ಮ ಹುದ್ದೆಗೆ ರಾಜೀನಾಮೆ ನೀಡಿದರು. ಇದ್ಯಾವುದನ್ನೂ ಲೆಕ್ಕಿಸದ ಕೇಂದ್ರ ಸರ್ಕಾರ ತನ್ನ ಆಪ್ತ ಶಕ್ತಿಕಾಂತ್ ದಾಸರನ್ನು ರಿಸರ್ವ್ ಬ್ಯಾಂಕ್ ಗವರ್ನರ್ ಆಗಿ ನೇಮಕ ಮಾಡಿತು. ನರೇಂದ್ರ ಮೋದಿ ಸರ್ಕಾರದ ಈ ಚೆಲ್ಲಾಟ ನಿಲ್ಲದಿದ್ದಲ್ಲಿ ರಿಸರ್ವ್ ಬ್ಯಾಂಕ್‌ಗೆ ಪ್ರಾಣ ಸಂಕಟವಾಗುವುದು ದಿಟ. ರಿಸರ್ವ್ ಬ್ಯಾಂಕ್‌ನಿಂದ ಕೇಂದ್ರ ಸರ್ಕಾರಕ್ಕೆ ಮುಂದಿನ ಮೂರು ವರ್ಷಗಳ ಅವಧಿಯಲ್ಲಿ ಸುಮಾರು ಮೂರು ಲಕ್ಷ ಕೋಟಿ ರೂಪಾಯಿಗಳ ವರ್ಗಾವಣೆಯಾಗಬಹುದೆಂದು ಆರ್ಥಿಕ ತಜ್ಞರು ಅಂದಾಜು ಮಾಡಿದ್ದಾರೆ. ಆರ್‌ಬಿಐನ ಅವನತಿ ಪ್ರಾರಂಭವಾಗಿದೆಯೆಂದು ಪರಿಗಣಿಸಬಹುದೆ?




ಭಾರತೀಯ ರಿಸರ್ವ್ ಬ್ಯಾಂಕ್‌ನ ಹೆಚ್ಚುವರಿ ಆದಾಯವನ್ನು ಕೇಂದ್ರ ಸರ್ಕಾರದ ಜೊತೆ ಹಂಚಿಕೊಳ್ಳುವುದರ ಬಗ್ಗೆ ಬಿಮಲ್ ಜಲಾನ್‌ರವರು ತಮ್ಮ ವರದಿಯನ್ನು ಇಷ್ಟರಲ್ಲಿಯೇ ಪ್ರಕಟಿಸುವ ಸಾಧ್ಯತೆಯೂ ಇದೆ. ಕೇಂದ್ರ ಸರ್ಕಾರದ ಬಜೆಟ್‌ಗೆ ಬಿಮಲ್ ಜಲಾನ್ ಸಮಿತಿ ವರದಿ ಹೆಚ್ಚಿನ ನೆರವು ನೀಡಲಿದೆ. ಈ ವರ್ಷದ ಬಜೆಟ್‌ನ ಗಾತ್ರ ೨೭.೮೬ ಲಕ್ಷ ಕೋಟಿ ರೂ. ಇದು ಜಿಡಿಪಿಯ ಶೇ. ೧೩.೨೧. ಮಧ್ಯಂತರ ಬಜೆಟ್‌ನಲ್ಲಿ ಇದು ೨೭ ಲಕ್ಷ ಕೋಟಿ ರೂಪಾಯಿಗಳಷ್ಟಿತ್ತು. ಇನ್ನು ಚುನಾವಣೆಯ ಸಂದರ್ಭದಲ್ಲಿ ನೀಡಿದ ಭರವಸೆಗಳು, ಅವುಗಳನ್ನು ಕಾರ್ಯರೂಪಗೊಳಿಸಲು ಆಗುವ ವೆಚ್ಚ – ಇವುಗಳ ಭಾರಿ ಹೊರೆ ಅಥವಾ ಬರೆ ಆರ್‌ಬಿಐ ಮೇಲೆ ಬೀಳುವುದು ದಿಟ.

ದೇಶದ ಪ್ರತಿಷ್ಠಿತ ಸಂಸ್ಥೆಗಳಾದ ಬಿಎಸ್‌ಎನ್‌ಎಲ್ (BSNL), ಭಾರತೀಯ ರೈಲ್ವೆ, ಏರ್ ಇಂಡಿಯಾ ಮುಂತಾದವುಗಳನ್ನು ಖಾಸಗೀಕರಿಸುವ ತರಾತುರಿಯನ್ನು ಮೋದಿ ಸರ್ಕಾರ ತೋರಿಸುತ್ತಿದೆ. ಇವುಗಳ ಕುರಿತು ಅನೇಕ ಸುದ್ದಿಗಳು ಅಧಿಕೃತವಾಗಿ ಮತ್ತು ಅನಧಿಕೃತವಾಗಿ ಮಾಧ್ಯಮಗಳಲ್ಲಿ ಕಾಣಿಸಿಕೊಳ್ಳುತ್ತಿವೆ. ಇವೆಲ್ಲವೂ ಮುಂಬರುವ ಸಮಯದಲ್ಲಿ ದೇಶ ಎದುರಿಸಲಿರುವ ಭಾರೀ ಗಂಡಾಂತರಗಳ ಸೂಚನೆಗಳೇ. ಭಾರತೀಯ ರೈಲ್ವೆ ಮಾತ್ರವಲ್ಲ, ದೇಶದ ಆರ್ಥಿಕ ಸ್ವಾವಲಂಬನೆ ಹಳಿ ತಪ್ಪಿ, ಅವಘಡದತ್ತ ಅವಸರ ಗತಿಯಲ್ಲಿ ಮುಂದುವರಿ ಯುತ್ತಿದೆ ಅನ್ನುವುದು ಕಟುಸತ್ಯ.

## ಐದು ಟ್ರಿಲಿಯನ್ ಡಾಲರ್ ಕನಸು

ಭಾರತವನ್ನು ೨೦೨೪ರ ವೇಳೆಗೆ ೫ ಟ್ರಿಲಿಯನ್ ಡಾಲರ್‌ಗಳ ಅರ್ಥ ವ್ಯವಸ್ಥೆಯಾಗಿಸುವುದು ತಮ್ಮ ಗುರಿ ಎಂದು ನರೇಂದ್ರ ಮೋದಿ ಬಡಾಯಿ ಕೊಚ್ಚಿ ಕೊಂಡಿದ್ದಾರೆ. ಒಂದು ಟ್ರಿಲಿಯನ್ ಅಂದರೆ ಒಂದು ಲಕ್ಷ ಕೋಟಿ. ರೂಪಾಯಿ ಲೆಕ್ಕದಲ್ಲಿ ೫ ಟ್ರಿಲಿಯನ್ ಡಾಲರ್‌ಗಳು ಎಂದರೆ ೩೫೦ ಲಕ್ಷ ಕೋಟಿ ರೂಪಾಯಿ. ಅಂದರೆ ಅಮೆರಿಕ, ಚೈನಾ ನಂತರ ಭಾರತ ವಿಶ್ವದ ಮೂರನೆಯ ಅತಿ ದೊಡ್ಡ ಅರ್ಥ ವ್ಯವಸ್ಥೆ. ಭಾರತ ದೇಶದ ಇಂದಿನ ಆರ್ಥಿಕತೆ ಸುಮಾರು ೨.೭೭ ಟ್ರಿಲಿಯನ್ ಅಮೆರಿಕನ್ ಡಾಲರ್‌ಗಳಷ್ಟು ಇರಬಹುದೆಂದು ಸರ್ಕಾರ ಹೇಳಿಕೊಳ್ಳುತ್ತಿದೆ. ಆದರೆ ಇದು ಎಷ್ಟರಮಟ್ಟಿಗೆ ವಾಸ್ತವ ಎಂಬುದು ಪ್ರಶ್ನಾತೀತ. ಅದನ್ನು ಸರಿಯೆಂದು ಒಪ್ಪಿಕೊಂಡರೂ, ಇನ್ನು ಐದು ವರ್ಷಗಳಲ್ಲಿ ಭಾರತದ ಆರ್ಥಿಕ ವ್ಯವಸ್ಥೆಯನ್ನು ದ್ವಿಗುಣಗೊಳಿಸಬೇಕಾಗುತ್ತದೆ. ತನ್ನ ಮೊದಲ ಐದು ವರ್ಷದ ಅವಧಿಯಲ್ಲಿ ದೇಶದ ಒಟ್ಟು ಆಂತರಿಕ ಉತ್ಪಾದನೆ (GDP) ಶೇ. ೭ರಷ್ಟು ಬೆಳೆದಿದೆ ಎಂದು ಕೇಂದ್ರ ಸರ್ಕಾರ ಹೇಳಿಕೊಂಡಿದೆ. ಆದರೆ ನಿಜಾಂಶವೇನೆಂದರೆ ಜಿಡಿಪಿ ವೃದ್ಧಿಯ ವಾಸ್ತವಿಕ ದರ ಶೇ. ೪.೫ ಮಾತ್ರ. ಅಂದರೆ ಶೇ. ೨.೫ರಷ್ಟು ವೃದ್ಧಿಯನ್ನು ಅತಿಯಾಗಿ ಅಂದಾಜು ಮಾಡಲಾಯಿತು. ೫ ಟ್ರಿಲಿಯನ್ ಆರ್ಥಿಕ ವ್ಯವಸ್ಥೆಯಾಗ ಬೇಕಾದರೆ ಭಾರತದ ಜಿಡಿಪಿ ಮುಂದಿನ ಐದು ವರ್ಷಗಳಲ್ಲೂ ವಾರ್ಷಿಕ ಕನಿಷ್ಠ ಶೇ. ೧೨ರಷ್ಟು ಬೆಳೆಯಬೇಕು. ಭಾರತದ ಇಂದಿನ ಆರ್ಥಿಕ ಪರಿಸ್ಥಿತಿ ಕುಸಿದಿದೆ. ಇದನ್ನು ಭಾರತೀಯ ರಿಸರ್ವ್ ಬ್ಯಾಂಕ್‌ನ ಗವರ್ನರ್ ಶಕ್ತಿಕಾಂತದಾಸ್‌ರವರೇ ಒಪ್ಪಿಕೊಂಡಿದ್ದಾರೆ. ದೇಶದ ಇಂದಿನ ಸಾಮಾಜಿಕ ಆರ್ಥಿಕ ಪರಿಸ್ಥಿತಿಯ ಬಗ್ಗೆ ನರೇಂದ್ರ ಮೋದಿ ಸರ್ಕಾರಕ್ಕೆ ಪ್ರಾಮಾಣಿಕ ಚಿಂತನೆ ಇರಬೇಕು. ದೇಶವನ್ನು ಒಡೆಯುವ ಅಜೆಂಡಾ ಇಟ್ಟುಕೊಂಡು ದೇಶವನ್ನು ಕಟ್ಟುತ್ತೇವೆ ಎಂದರೆ ಅದು ಹೇಗೆ ಸಾಧ್ಯ? ಉದ್ಯೋಗಗಳ ಸೃಷ್ಟಿಯ ಬಗ್ಗೆ ಯಾವುದೇ ಮಾತಿಲ್ಲ. ಇದ್ದ ಉದ್ಯೋಗಗಳೂ ನಾಶವಾಗಿವೆ. ಅಂದ ಮೇಲೆ ಆರ್ಥಿಕ ಪ್ರಗತಿ ಹೇಗೆ, ಎಲ್ಲಿಂದ?

೧೭ನೆಯ ಲೋಕಸಭೆಯ ಪ್ರಾರಂಭದ ದಿನ ರಾಷ್ಟ್ರಪತಿ ಮಾಡಿದ ಭಾಷಣ ನೀರಸವಾಗಿತ್ತು. ಮೋದಿ ಭಾಜಪದ ಮುಂದಿನ ಅಜೆಂಡಾ ಕುರಿತು ಪ್ರಸ್ತಾಪ ಮಾಡುವ ಪ್ರಯತ್ನವಾಗಿತ್ತು. ತ್ರಿವಳಿ ತಲಾಖ್, ರಾಷ್ಟ್ರೀಯ ಪೌರತ್ವ ನೋಂದಣಿ, ಒಂದು ದೇಶ ಒಂದೇ ಚುನಾವಣೆ, ಇವೇ ಮುಂತಾದ ದೇಶವನ್ನು ವಿಭಜಿಸುವ ವಿಚಾರಗಳೇ ಎದ್ದು ಕಾಣುತ್ತಿದ್ದವು. ಫ್ಯಾಸಿಸ್ಟ್ ರೀತಿಯ ರಾಜಕೀಯ ಪ್ರವೃತ್ತಿಗಳೇ ಹೆಚ್ಚು ಹೆಚ್ಚಾಗಿ ಕಂಡುಕೊಳ್ಳುತ್ತಿವೆ. ದೇಶ ಯಾವ ದಿಸೆಯಲ್ಲಿ ಯಾವ ಗುರಿಯತ್ತ ಸಾಗುತ್ತಿದೆ ಅನ್ನುವುದು ಸ್ಪಷ್ಟವಾಗಿದೆ. ದೇಶದ ಜನ ಚುನಾವಣೆಯಲ್ಲಿ ನರೇಂದ್ರ ಮೋದಿ ಪಕ್ಷಕ್ಕೆ ಭಾರೀ ಬಹುಮತ ನೀಡಿದರು. ನರೇಂದ್ರ ಮೋದಿಯವರ ಸೆಕೆಂಡ್ ಇನ್ನಿಂಗ್ಸ್ ಪ್ರಾರಂಭವಾಗಿದೆ. ಉಜ್ವಲ ಭಾರತವೋ ಅಥವಾ ಜಜ್ಜಿ ಬಜ್ಜಿಯಾದ ಭಾರತವೋ ಎಂಬ ಭಯ ದೇಶವನ್ನು, ಅದರ ಜನತೆಯನ್ನು ಆವರಿಸುತ್ತಿದೆ.

**ನ. ಸುಂದರಮೂರ್ತಿ**
ಮನೆಸಂಖ್ಯೆ ೧೪, ೬ನೇ ಅಡ್ಡರಸ್ತೆ, ಶ್ರೀರಾಮಪುರ, ಬೆಂಗಳೂರು – ೫೬೦ ೦೨೧

# ಬಜೆಟ್ಟಿನ ಹಿನ್ನೆಲೆಯಲ್ಲಿ ದೇಶದ ಆರ್ಥಿಕತೆಯನ್ನು ಕುರಿತು

## ೨೦೧೯ರ ಕೇಂದ್ರ ಬಜೆಟ್ ಕುರಿತು ಎರಡು ವಿಶ್ಲೇಷಣೆಗಳು

"ಪ್ರಜೆಗಳ ಸಂತೋಷವೇ ರಾಜನ ಸಂತೋಷ. ಪ್ರಜೆಗಳ ಯೋಗಕ್ಷೇಮದಲ್ಲೇ ಅವನ ಯೋಗಕ್ಷೇಮ ಇರುವುದು. ರಾಜ ತನಗೆ ಸಂತೋಷ ಕೊಟ್ಟಿದ್ದನ್ನೇ ಒಳ್ಳೆಯದು ಎಂದು ಭಾವಿಸಬಾರದು. ಪ್ರಜೆಗಳಿಗೆ ಖುಷಿ ಕೊಟ್ಟಿದ್ದನ್ನು ಒಳ್ಳೆಯದು ಅಂತ ಭಾವಿಸಬೇಕು. ರಾಜ ಸದಾ ಸಕ್ರಿಯನಾಗಿ ತನ್ನ ಕರ್ತವ್ಯವನ್ನು ಮಾಡುತ್ತಿರಬೇಕು. ಸಂಪತ್ತಿನ ಮೂಲ ಇರುವುದೇ ಇಂತಹ ಕ್ರಿಯೆಯಲ್ಲಿ. ಅದು ಸಾಧ್ಯವಾಗದೇ ಹೋದಾಗ ರಾಜ್ಯಕ್ಕೆ ಕೆಡುಕಾಗುತ್ತದೆ." ಇದು ಕೌಟಿಲ್ಯನ ಮಾತು. ಇದನ್ನು ಈ ವರ್ಷದ ಆರ್ಥಿಕ ಸಮೀಕ್ಷೆಯಲ್ಲಿ ಉಲ್ಲೇಖಿಸಲಾಗಿದೆ.

ಸರ್ಕಾರಕ್ಕೆ ಸದಾ ಪ್ರಜೆಗಳ ಕ್ಷೇಮ ಆದ್ಯತೆಯ ವಿಷಯವಾಗಬೇಕು ಅನ್ನುವುದು ವಿವೇಕದ ಮಾತು. ಪ್ರತಿಯೊಂದು ಯೋಜನೆಯನ್ನು ಇದು ನಿರ್ದೇಶಿಸಬೇಕು. ದೇಶದ ಆರ್ಥಿಕತೆ ಬೆಳೆದರೆ ಜನರಿಗೂ ಹೆಚ್ಚಿನ ಲಾಭ ದಕ್ಕುತ್ತದೆ ಅನ್ನುವುದು ಒಂದು ನಂಬಿಕೆ. ಹಾಗಾಗಿಯೇ ಜಿಡಿಪಿ ಹೆಚ್ಚಳದ ಹಿಂದೆ ಎಲ್ಲರೂ ಬಿದ್ದಿದ್ದಾರೆ. ಅದಕ್ಕೆ ಪ್ರಧಾನ ಮಂತ್ರಿಯವರು ಕೇಕು ದೊಡ್ಡದಾದಷ್ಟೂ ಜನರಿಗೆ ಸಿಗುವ ಪಾಲು ಹೆಚ್ಚಾಗುತ್ತದೆ ಅಂತ ಹೇಳಿದ್ದು. ಆರ್ಥಿಕತೆ ಬೆಳೆದಷ್ಟೂ ಜನರ ಜೀವನಮಟ್ಟದಲ್ಲೂ ಸುಧಾರಣೆಯಾಗುತ್ತದೆ. ಈ ಹಿನ್ನೆಲೆಯಲ್ಲೇ ಅವರು ನಮ್ಮ ದೇಶದ ಆರ್ಥಿಕತೆ ೫ ಟ್ರಿಲಿಯನ್ ಆರ್ಥಿಕತೆಯಾಗಬೇಕು ಅಂದಿದ್ದು. ನಿಜ, ದೇಶದ ಆರ್ಥಿಕತೆ ಬೆಳೆಯುವುದು ಖಂಡಿತಾ ಒಳ್ಳೆಯದು. ಆದರೆ ಆರ್ಥಿಕತೆ ಬೆಳೆದರೆ ಅದರ ಲಾಭ ಎಲ್ಲರಿಗೂ ಅದರಷ್ಟಕ್ಕೇ ಸಿಕ್ಕಿಬಿಡುತ್ತದೆ ಅನ್ನೋದು ಸತ್ಯ ಅಲ್ಲ. ಅನುಕೂಲಸ್ಥರು ಅದರಲ್ಲಿ ಹೆಚ್ಚಿನ ಪಾಲನ್ನು ಕಬಳಿಸಿಕೊಂಡುಬಿಡುತ್ತಾರೆ ಅನ್ನೋದು ವಾಸ್ತವ. ಪಿಕೆಟ್ಟಿ ಅವರ ಅಧ್ಯಯನವೂ ಇದನ್ನೇ ಹೇಳುತ್ತದೆ. ಬಿಲಿಯನೇರುಗಳ ಸಂಪತ್ತು ಹೆಚ್ಚುತ್ತಿರುವ ಪ್ರಮಾಣವನ್ನು ನೋಡಿದರೆ ಇದು ಯಾರಿಗಾದರೂ ಅರ್ಥವಾಗುತ್ತದೆ. ಭಾರತದಲ್ಲೇ ಜಿಡಿಪಿ ಹೆಚ್ಚು ಇದ್ದ ಸಮಯದಲ್ಲೂ ಬಡತನ ಹೆಚ್ಚಾಗಿಯೇ ಇದ್ದ ವೈಪರೀತ್ಯವನ್ನು ಕಾಣಬಹುದು. ಹಲವು ದೇಶಗಳ ಉದಾಹರಣೆಯೂ ಇದನ್ನೇ ಹೇಳುತ್ತದೆ. ಇದು ಗೊತ್ತಿದ್ದ ರಿಕಾರ್ಡೋ "ಆರ್ಥಿಕತೆ ಸ್ಥಗಿತವಾಗಿದ್ದರೂ, ಅದರಿಂದ ಜನರಿಗೆ ಹೆಚ್ಚಿನ ಒಳಿತಾಗುತ್ತಿದ್ದರೆ ನಾನು ಅದನ್ನೇ ಬಯಸುತ್ತೇನೆ" ಎಂದು ಬಹಳ ಹಿಂದೆಯೇ ಹೇಳಿದ್ದ. ಇದರರ್ಥ ಬೆಳವಣಿಗೆ ಆಗಬಾರದು ಅಂತಲ್ಲ. ಅದು ಆಗಬೇಕಾದ್ದೇ. ಆರ್ಥಿಕತೆ ಬೆಳೆಯದೇ ಹೋದರೆ ಹಂಚಲಿಕ್ಕಾದರೂ ಎಲ್ಲಿಂದ ಬರಬೇಕು. ಜನರ ಯೋಗಕ್ಷೇಮದ

ನಮ್ಮ ಆರ್ಥಿಕತೆಯಲ್ಲಿ ಗಂಭೀರವಾದ ಸಮಸ್ಯೆಗಳಿವೆ. ಮೋದಿ ಸರ್ಕಾರದ ಹಿಂದಿನ ಪ್ರಮುಖ ಆರ್ಥಿಕ ಸಲಹೆಗಾರರಾಗಿದ್ದ ಅರವಿಂದ ಸುಬ್ರಮಣಿಯನ್ ಹೇಳುವ ಪ್ರಕಾರ ೨೦೧೧ರಿಂದಲೇ ಜಿಡಿಪಿ ಶೇಕಡ ೭ರಷ್ಟಿಲ್ಲ ಅದು ಶೇಕಡ ೩.೫ರಿಂದ ೫.೫ರಷ್ಟಿದೆ. ಸರಾಸರಿ ತೆಗೆದುಕೊಂಡರೆ ಕೇವಲ ಶೇಕಡ ೪.೫ ಇರಬಹುದು. ವಿತ್ತೀಯ ಕೊರತೆಯೂ ಶೇಕಡ ೩.೩ ಇರಲಿಕ್ಕಿಲ್ಲ, ಅದು ಕನಿಷ್ಠ ೩.೫ರಷ್ಟಾದರೂ ಇರಬೇಕು ಅನ್ನುವ ಅನುಮಾನಗಳಿವೆ. ಪಿಕೆಟ್ಟಿ ಹೇಳುವ ಪ್ರಕಾರ ಅಸಮಾನತೆ ಬಹಳವಾಗಿಯೇ ಹೆಚ್ಚಿದೆ. ಇತ್ತೀಚಿನ ಉದ್ಯೋಗ ಸಮೀಕ್ಷೆಯ ಪ್ರಕಾರ ಉದ್ಯೋಗಸ್ಥರ ಸಂಖ್ಯೆ ಕಡಿಮೆಯಾಗುತ್ತಿದೆ. ನಿರುದ್ಯೋಗ ದರ ಶೇಕಡ ೬.೧ರಷ್ಟು ಹೆಚ್ಚುತ್ತಿದೆ. ಇವೆಲ್ಲಾ ನಾವು ಹಿಡಿದಿರುವ ಉದಾರವಾದಿ ಆರ್ಥಿಕ ನೀತಿಗಳ ಫಲವೂ ಇರಬಹುದು. ಈ ಎಲ್ಲವನ್ನೂ ಗಂಭೀರವಾಗಿ ಗಮನಿಸುವ ಅವಶ್ಯಕತೆ ಸರ್ಕಾರಗಳಿಗಿದೆ.

ಟಿ. ಎಸ್. ವೇಣುಗೋಪಾಲ್

ಅಭಿವೃದ್ಧಿಗೆ ಪ್ರಜ್ಞಾಪೂರ್ವಕ ಪ್ರಯತ್ನ ಆಗಬೇಕು ಅನ್ನೋದಷ್ಟೇ ಈ ವಾದದ ಇಂಗಿತ.

**೫ ಟ್ರಿಲಿಯನ್ ಆರ್ಥಿಕತೆಯ ಪ್ರಶ್ನೆ**

ಈಗ ಪ್ರಧಾನ ಮಂತ್ರಿಯವರ ೫ ಟ್ರಿಲಿಯನ್ ಆರ್ಥಿಕತೆಯ ವಿಷಯಕ್ಕೆ ಬರೋಣ. ಇತ್ತೀಚಿನ ದಿನಗಳಲ್ಲಿ ಪ್ರಧಾನ ಮಂತ್ರಿಯವರ ಆಶಯವೇ ಬಜೆಟ್ಟಿನ ಆಶಯವೂ ಆಗಿಬಿಡುತ್ತದೆ. ಬಜೆಟ್ಟಿನ ಉದ್ದೇಶವನ್ನು ಮೊದಲೇ ಊಹಿಸಿಬಿಡಬಹುದು. ಒಂದು ಆಶಯ ೫ ಟ್ರಿಲಿಯನ್ ಆರ್ಥಿಕತೆಯದಾದರೆ ಇನ್ನೊಂದು ರೈತರ ಆದಾಯವನ್ನು ದ್ವಿಗುಣಗೊಳಿಸುವುದು. ನಿರೀಕ್ಷೆಯಂತೆ ಈ ವರ್ಷದ ಆರ್ಥಿಕ ಸಮೀಕ್ಷೆ ಹಾಗೂ ಬಜೆಟ್ ಎರಡೂ ೫ ಟ್ರಿಲಿಯನ್ ಡಾಲರ್ ಆರ್ಥಿಕತೆಯ ರಾಷ್ಟ್ರವನ್ನಾಗಿ ಭಾರತವನ್ನು ಪರಿವರ್ತಿಸುವ ಆಶಯವನ್ನು ವ್ಯಕ್ತಪಡಿಸಿದೆ. ರೂಪಾಯಿ ಪರಿಭಾಷೆಯನ್ನು ಬಿಟ್ಟು ಯಾಕೆ ಈ ಡಾಲರಿನಲ್ಲಿ ಲೆಕ್ಕಾಚಾರ ಅನ್ನೋದು ಗೊತ್ತಾಗಲಿಲ್ಲ. "೫ ಟ್ರಿಲಿಯನ್ ಆರ್ಥಿಕತೆ" ಅನ್ನೋದು ಒಂದು ಸ್ಲೋಗನ್ ಆಗಿ ಕ್ಯಾಚಿಯಾಗಿದೆ ಅನ್ನಿಸಿರಬಹುದು. ಟ್ರಿಲಿಯನ್ ಅಂದರೆ ಒಂದು ಸಂಖ್ಯೆಯ ಮುಂದೆ ೧೨ ಸೊನ್ನೆಗಳು. ೫ ಟ್ರಿಲಿಯನ್ ಡಾಲರ್ ಅಂದರೆ ಒಂದು ಡಾಲರ್‌ಗೆ ೭೦ರೂಪಾಯಿ ಅಂತ ಇಟ್ಟುಕೊಂಡರೆ ನಮ್ಮ ಒಟ್ಟಾರೆ ದೇಶೀಯ ಉತ್ಪನ್ನ (ಜಿಡಿಪಿ) ೩೫೦,೦೦,೦೦೦ ರೂ.ಗಳಷ್ಟಾಗಬೇಕು. ೨೦೧೪ರಲ್ಲಿ ಭಾರತ ೧.೮೫ ಟ್ರಿಲಿಯನ್ ಡಾಲರ್ ಆರ್ಥಿಕತೆಯಾಗಿತ್ತು. ಈಗ ಸದ್ಯಕ್ಕೆ ನಮ್ಮದು ೨.೭ ಟ್ರಿಲಿಯನ್ ಡಾಲರ್ ಆರ್ಥಿಕತೆ. ಅಂದರೆ ಶೇಕಡ ೮ರ ದರದಲ್ಲಿ ನಮ್ಮ ಜಿಡಿಪಿ ಬೆಳೆದಿದೆ. ೨೦೨೪ರ ವೇಳೆಗೆ ಅದು ೫ ಟ್ರಿಲಿಯನ್‌ನಷ್ಟು ಆಗಬೇಕೆನ್ನೋದು ಆಶಯ. ಅಂದರೆ ಇನ್ನು ಐದು ವರ್ಷಗಳಲ್ಲಿ ಅದು ಶೇಕಡ ೮೪ರಷ್ಟು ಬೆಳೆಯಬೇಕು. ಅದು ಸಾಧ್ಯವಾಗಬೇಕಾದರೆ ಬೆಳವಣಿಗೆಯ ದರ ಶೇಕಡ ೮ರಷ್ಟು ಇರಬೇಕು ಅನ್ನೋದು ಆರ್ಥಿಕ ಸಮೀಕ್ಷೆಯ ಅಂದಾಜು. ಇದನ್ನೇ ಬಜೆಟ್ ಕೂಡ ಹೇಳುತ್ತಿದೆ. ಇಲ್ಲಿ ಸ್ವಲ್ಪ ಲೆಕ್ಕದಲ್ಲಿ ಏನೋ ಎಡವಟ್ಟಾಗಿರಬೇಕು. ಯಾಕೆಂದರೆ ಶೇಕಡ ೮ ಹೆಚ್ಚಳ ಅಂದರೆ ನೂರು ರೂಪಾಯಿ ಇದ್ದರೆ ಅದು ವರ್ಷದ ಕೊನೆಗೆ ೧೦೮ ರೂಪಾಯಿ ಆಗಬೇಕು. ಒಂದು ರೂಪಾಯಿ ಇದ್ದರೆ ಅದು ವರ್ಷದ ಕೊನೆಗೆ ೧.೦೮ ರೂಪಾಯಿ ಆಗಬೇಕು. ಅಂದರೆ ಈಗ ೨.೭ ಟ್ರಿಲಿಯನ್ ಇದೆ. ಅದು ಮುಂದಿನ ವರ್ಷಕ್ಕೆ (೨.೭)(೧.೦೮) = ೨.೯ ಟ್ರಿಲಿಯನ್ ಡಾಲರ್ ಆಗುತ್ತದೆ. ಇದನ್ನು ೫ ವರ್ಷಕ್ಕೆ ವಿಸ್ತರಿಸಿದರೆ (೨.೭)(೧.೦೮)೫ ಸುಮಾರಾಗಿ ೪ ಟ್ರಿಲಿಯನ್ ಆಗುತ್ತದೆ. ಅಂದಾಜಿಗಿಂತ ಒಂದು ಟ್ರಿಲಿಯನ್ ಕಡಿಮೆಯಾಗುತ್ತದೆ. ನಿಜವಾಗಿ ೫ ಟ್ರಿಲಿಯನ್ ಮುಟ್ಟಬೇಕಾದರೆ ಬೆಳವಣಿಗೆಯ ದರ ಶೇಕಡ ೧೩ರಷ್ಟು ಇರಬೇಕು. ಲೆಕ್ಕ ಹಾಕಿ ನೋಡುವ. ೨.೭ (೧.೧೩)೫ = ೫ ಟ್ರಿಲಿಯನ್ ಆಗುತ್ತದೆ. ಅಥವಾ ಶೇಕಡ ೮ರಷ್ಟು ಬೆಳವಣಿಗೆ ಲೆಕ್ಕಕ್ಕೆ ಗಂಟು ಬಿದ್ದರೆ ಕನಿಷ್ಠ ೮ ವರ್ಷ ಬೇಕು. ಹಾಗಾಗಿ ೫ ಟ್ರಿಲಿಯನ್ ಆಗಬೇಕಾದರೆ ಶೇಕಡ ೮ರ ಹಾಗೆ ಬೆಳೆದು ೮ ವರ್ಷ ಕಾಯಬೇಕು. ಅಥವಾ ಶೇಕಡ ೧೩ರ ವೇಗದಲ್ಲಿ ಬೆಳೆದು ೫ ವರ್ಷದಲ್ಲಿ ಸಾಧಿಸಬೇಕು. ನಮ್ಮ ದೇಶದ ಜಿಡಿಪಿ ಶೇಕಡ ೧೩ರಷ್ಟು ಬೆಳೆಯುವುದು ಸದ್ಯದ ಪರಿಸ್ಥಿತಿಯಲ್ಲಿ ಕನಸು.

**ಅಂಕಿಅಂಶಗಳ ಸಮಸ್ಯೆ**

ಈ ವರ್ಷದ ಬಜೆಟ್ಟಿನಲ್ಲಿ ಇನ್ನೊಂದು ಸಮಸ್ಯೆ ಇದೆ. ಸಾಮಾನ್ಯವಾಗಿ ಬಜೆಟ್ ಮಂಡಿಸುವಾಗ ನಿಮಗೆ ಅಂದಾಜು ಬಜೆಟ್ ಸಿಗುತ್ತದೆ. ಅದು ಬಜೆಟ್ ಮಂಡಿಸುವ ಸಮಯದಲ್ಲಿ ಮಾಡಿಕೊಂಡಿರುವ ಅಂದಾಜು. ಆ ವರ್ಷ ಸರ್ಕಾರ ಎಷ್ಟು ಹಣವನ್ನು ಖರ್ಚು ಮಾಡಬಹುದು, ಎಷ್ಟು ಆದಾಯ ಸಂಗ್ರಹವಾಗುತ್ತದೆ ಅಂತ ಅಂದು ಭಾವಿಸಿಕೊಂಡಿದೆ ಅನ್ನೋದರ ಅಂದಾಜನ್ನು ಅದು ನೀಡುತ್ತದೆ. ಆರು ತಿಂಗಳ ನಂತರ ಆವರೆಗೆ ಮಾಡಿದ ಖರ್ಚು ಹಾಗೂ ಸಂಗ್ರಹವಾದ ಆದಾಯವನ್ನು ಆಧರಿಸಿ ಪರಿಷ್ಕೃತ ಅಂದಾಜನ್ನು ನೀಡುತ್ತದೆ. ಅದು ಮಧ್ಯ-ವಾರ್ಷಿಕ ಅಂದಾಜು.

ಅಂತಿಮವಾಗಿ, ಒಂದು ವರ್ಷ ಪೂರ್ಣವಾದ ಮೇಲೆ ನಿಜವಾಗಿ ಸಂಗ್ರಹವಾದ ಹಣ ಹಾಗೂ ಒಟ್ಟು ಖರ್ಚಿಗೆ ಸಂಬಂಧಿಸಿದ ಮಾಹಿತಿ ನಿಮಗೆ ಸಿಗುತ್ತದೆ. ದಿ ಕಂಟ್ರೋಲರ್ ಆಫ್ ಜೆನರಲ್ ಅಕೌಂಟ್ಸ್ ಈ ಅಂಕಿ ಅಂಶಗಳನ್ನು ನೀಡುತ್ತಾರೆ. ಅದು ಸರ್ಕಾರದ ಖರ್ಚು ಆದಾಯಕ್ಕೆ ಸಂಬಂಧಿಸಿದಂತೆ ಹೆಚ್ಚು ಕರಾರುವಾಕ್ಕಾದ ಚಿತ್ರವನ್ನು ಕೊಡುತ್ತದೆ. ಅದು ಆಡಿಟ್ ಆದ ಮೇಲೆ ಮುಂದಿನ ಬಜೆಟ್ಟಿನಲ್ಲಿ ಇದನ್ನು ವಾಸ್ತವ ಅಂಕಿ ಅಂಶವನ್ನಾಗಿ ಬಳಸಿಕೊಳ್ಳಲಾಗುತ್ತದೆ.

ಸ್ನೇಹ

◀ ಆಧ್ಯಾತ್ಮದ ದಾರಿಯಲ್ಲಿ
ಸಾಗುತ್ತಿರುವವನಿಗೆ
ಗುರಿ ಎಲ್ಲಿಗೆ?
ಎಲ್ಲರನ್ನು ಪ್ರೀತಿಸುವವನಿಗೆ
ದ್ವೇಷಿಸುವವನಿಲ್ಲ
ಸ್ನೇಹ ಕಾಣಿಕೆ!

ಉದಾಹರಣೆಗೆ ೨೦೧೮-೧೯ ಸಾಲಿನ ಅಂದಾಜನ್ನು ಬಜೆಟ್ಟಿನ ಭಾಗವಾಗಿ ಫೆಬ್ರವರಿ ೨೦೧೮ರಲ್ಲಿ ಮಂಡಿಸಲಾಗಿತ್ತು. ಹತ್ತು ತಿಂಗಳ ಅನಂತರ ಫೆಬ್ರವರಿ ೨೦೧೯ರಲ್ಲಿ ಅಂಕಿ ಅಂಶಗಳನ್ನು ಪರಿಷ್ಕರಿಸಿ ಪರಿಷ್ಕೃತ ಅಂದಾಜನ್ನು ಮಂಡಿಸಿತು. ಸಿಜಿಎ ೨೦೧೮-೧೯ರ ವಾಸ್ತವಿಕ ಸಂಖ್ಯೆಯನ್ನು ಮೇ ೩೧, ೨೦೧೯ರಲ್ಲಿ ಪ್ರಕಟಿಸಿತು. ಈಗ ಸರ್ಕಾರದ ಬಳಿ ಈ ಅಂಕಿ ಅಂಶ ಇದೆ. ಅಷ್ಟೇ ಅಲ್ಲ ಮಧ್ಯ-ವಾರ್ಷಿಕ ಅಂದಾಜಿಗೂ ಇದಕ್ಕೂ ತುಂಬಾ ವ್ಯತ್ಯಾಸವಿದೆ. ಆದಾಗ್ಯೂ ಸರ್ಕಾರ ತನ್ನ ಬಜೆಟ್ಟಿನ ಲೆಕ್ಕಾಚಾರಕ್ಕೆ ಮಧ್ಯವಾರ್ಷಿಕ ಅಂದಾಜನ್ನೇ ಬಳಸಿಕೊಂಡಿದೆ. ಆದರೆ ಆರ್ಥಿಕ ಸಮೀಕ್ಷೆಯು ದಿ ಕಂಟ್ರೋಲರ್ ಆಫ್ ಜನರಲ್ ಅಕೌಂಟ್ಸ್ ಮಾಹಿತಿಯನ್ನು ಬಳಸಿಕೊಂಡಿದೆ. ಹಾಗಾಗಿಯೇ ಎರಡಕ್ಕೂ ವ್ಯತ್ಯಾಸವಿದೆ.

೨೦೧೮-೧೯ರ ಬಜೆಟ್ ಪ್ರಕಾರ ಸಂಗ್ರಹವಾಗಿರುವ ಸರ್ಕಾರದ ಆದಾಯ ೧೭.೩ ಲಕ್ಷ ಕೋಟಿ. ಆದರೆ ಆರ್ಥಿಕ ಸಮೀಕ್ಷೆ ನೀಡಿರುವ ಅಂಕಿಅಂಶಗಳ ಪ್ರಕಾರ ಇದು ೧೫.೬ ಲಕ್ಷ ಕೋಟಿ. ಅಂದರೆ ೧.೭ ಲಕ್ಷ ಕೋಟಿಯಷ್ಟು ಕಡಿಮೆ ಹಣ ಸಂಗ್ರಹವಾಗಿದೆ. ಇದು ತುಂಬ ದೊಡ್ಡ ಸಂಖ್ಯೆ. ಬರೀ ಆದಾಯದಲ್ಲಿ ಮಾತ್ರವಲ್ಲ ಸರ್ಕಾರ ಮಾಡಿರುವ ವೆಚ್ಚವೂ ಅಂದಾಜಿಗಿಂತ ತುಂಬ ಕಡಿಮೆಯಾಗಿದೆ. ಬಜೆಟ್ಟಿನ ಲೆಕ್ಕಾಚಾರದ ಪ್ರಕಾರ ಕಳೆದ ವರ್ಷ ಸರ್ಕಾರ ೨೪.೬ ಲಕ್ಷ ಕೋಟಿ ರೂಪಾಯಿ ಖರ್ಚು ಮಾಡಿದೆ. ಆದರೆ ಆರ್ಥಿಕ ಸಮೀಕ್ಷೆಯ ಪ್ರಕಾರ ಅದು ೨೩.೧ ಲಕ್ಷ ಕೋಟಿ. ಅಂದರೆ ೧.೫ ಲಕ್ಷ ಕೋಟಿ ಕಡಿತ!

ಆಶ್ಚರ್ಯ ಅಂದರೆ ಆರ್ಥಿಕ ಸಮೀಕ್ಷೆ ಹಾಗೂ ಬಜೆಟ್ ಎರಡೂ ಆರ್ಥಿಕ ವ್ಯವಹಾರಗಳ ಇಲಾಖೆಯ ಆಡಳಿತಕ್ಕೇ ಒಳಪಟ್ಟಿವೆ. ಕಂಟ್ರೋಲರ್ ಆಫ್ ಜನರಲ್ ಅಕೌಂಟ್ಸ್ ಅವರಿಗೂ ಇದೇ ಇಲಾಖೆಯಿಂದಲೇ ಮಾಹಿತಿ ಸಿಗುವುದು. ಆದರೂ ಬಜೆಟ್ ಯಾಕೆ ಈ ಮಾಹಿತಿಯನ್ನು ಬಳಸಿಕೊಂಡಿಲ್ಲ? ವಾಸ್ತವ ಅಂಕಿಅಂಶಗಳನ್ನು ಬಳಸಿಕೊಂಡಿದ್ದರೆ ಬಜೆಟ್ ಹೆಚ್ಚು ವಾಸ್ತವಕ್ಕೆ ಹತ್ತಿರವಿರುತ್ತಿತ್ತು. ಲೆಕ್ಕಾಚಾರದಲ್ಲಿ ಅಷ್ಟೊಂದು ಏರುಪೇರಾಗುತ್ತಿರಲಿಲ್ಲ. ಇದೊಂದು ಗಂಭೀರವಾದ ವಿಷಯ.

ಕಳೆದ ವರ್ಷ ತೆರಿಗೆ ಸಂಗ್ರಹಣೆಯಲ್ಲಿ ದೊಡ್ಡ ಪ್ರಮಾಣದಲ್ಲೇ ಕೊರತೆಯಾಗಿದೆ. ಹಾಗಾಗಿ ಸರ್ಕಾರ ತನ್ನ ವೆಚ್ಚದಲ್ಲೂ ಸುಮಾರು ೧.೫ ಲಕ್ಷ ಕೋಟಿ ಕಡಿಮೆ ಮಾಡಿಕೊಂಡಿದೆ. ಅಂದರೆ ಹಲವು ಇಲಾಖೆಗಳ, ಯೋಜನೆಗಳ ವೆಚ್ಚದಲ್ಲಿ ದೊಡ್ಡ ಪ್ರಮಾಣದ ಕಡಿತ ಆಗಿದ್ದಿರಲೇಬೇಕು. ಆದರೆ ಆ ಬಗ್ಗೆ ಯಾವುದೇ ಪ್ರಸ್ತಾಪವೂ ಬಜೆಟ್ಟಿನಲ್ಲಿ ಇಲ್ಲ. ತಪ್ಪು ಅಂಕಿಅಂಶಗಳನ್ನು ಬಳಸಿಕೊಂಡಿದ್ದು, ಅದಕ್ಕೂ ವಾಸ್ತವಕ್ಕೂ ಅಪಾರ ವ್ಯತ್ಯಾಸವಿದ್ದ ಮೇಲೆ ಇಡೀ ಲೆಕ್ಕಾಚಾರ ಏರುಪೇರಾಗಿರಲೇಬೇಕು. ಹಾಗಾಗಿ ಈ ಬಜೆಟ್ಟನ್ನು ಗಂಭೀರವಾಗಿ ತೆಗೆದುಕೊಳ್ಳುವುದಾದರೂ ಹೇಗೆ? ಹಾಗಾಗಿಯೇ ಕೆಲವರು ಹೊಸ ಬಜೆಟ್ಟನ್ನು ಮಂಡಿಸಬೇಕು ಅಂತ ಹೇಳುತ್ತಿರುವುದು.

ತೆರಿಗೆಯ ಸಂಗ್ರಹಣೆ ತುಂಬ ಕಡಿಮೆ

ಆಗಿರುವುದು ಸ್ಪಷ್ಟ. ಇದ್ದಕ್ಕಿದ್ದ ಹಾಗೆ ತೆರಿಗೆ ಕಳ್ಳರು ಜಾಸ್ತಿಯಾಗಿಬಿಟ್ಟರೆ? ಜಿಎಸ್‌ಟಿ ವ್ಯವಸ್ಥೆಯಲ್ಲಿ ಏನೋ ಸಮಸ್ಯೆ ಇರಬೇಕು. ಅದು ಆರಂಭಿಕ ಸಮಸ್ಯೆಗಳು ಅಂತ ಸುಮ್ಮನಿರುವುದು ಒಳ್ಳೆಯದಲ್ಲ. ಈ ವರ್ಷ ಜಿಎಸ್‌ಟಿಯಿಂದ ಎರಡುಪಟ್ಟು ಹೆಚ್ಚಿನ ಕಂದಾಯ ಸಂಗ್ರಹವಾಗುತ್ತದೆ ಅಂತ ಸುಮ್ಮನೆ ನಂಬಿಕೂರುವುದು ಸಾಧುವಲ್ಲ. ಮತ್ತೆ ಸಕಾಲದಲ್ಲಿ ಕ್ರಮ ತೆಗೆದುಕೊಳ್ಳದೇ ಹೋದರೆ ಕಳೆದ ವರ್ಷವಾದಂತೆ ಆರ್ಥಿಕತೆಯೇ ಕುಗ್ಗುತ್ತದೆ. ಸಂಗ್ರಹ ಕಮ್ಮಿಯಾಗುತ್ತದೆ, ಆಗ ಹೂಡಿಕೆ ಕಮ್ಮಿಯಾಗುತ್ತದೆ. ಹೂಡಿಕೆ ಕಮ್ಮಿಯಾದರೆ, ಬೆಳವಣಿಗೆ ಕಮ್ಮಿಯಾಗುತ್ತದೆ. ಅದೊಂದು ವಿಷವರ್ತುಲ.

**ಶೇಕಡ ೮ರ ಜಿಡಿಪಿ ದರ**

ಜಿಡಿಪಿ ಅನ್ನುವುದು ಒಂದು ದೇಶದ ಒಂದು ವರ್ಷದ ನಿವ್ವಳ ಉತ್ಪನ್ನ. ಅಂದರೆ ಒಂದು ದೇಶದಲ್ಲಿ ಒಂದು ವರ್ಷದ ಅವಧಿಯಲ್ಲಿ ಉತ್ಪಾದನೆಯಾದ ಸೇವೆ ಹಾಗೂ ಉತ್ಪನ್ನಗಳ ನಿವ್ವಳ ಮೌಲ್ಯ. ಇದನ್ನು ಎರಡು ರೀತಿಯಲ್ಲಿ ಲೆಕ್ಕ ಹಾಕುತ್ತಾರೆ. ಒಂದು ಇಂದಿನ ಮಾರುಕಟ್ಟೆಯ ದರದಲ್ಲಿ ಅದನ್ನು ಲೆಕ್ಕ ಹಾಕಲಾಗುತ್ತದೆ. ಆಗ ಹಣದುಬ್ಬರದ ದರವನ್ನು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಅದನ್ನು ನಾಮಿನಲ್ ಜಿಡಿಪಿ ಅಂತ ಕರೆಯುತ್ತಾರೆ. ಇನ್ನೊಂದು ಕ್ರಮವನ್ನು ನೈಜ ಜಿಡಿಪಿ ಅಂತ ಕರೆಯಲಾಗುತ್ತದೆ. ಒಂದು ನಿರ್ದಿಷ್ಟ ವರ್ಷವನ್ನು (ಸದ್ಯಕ್ಕೆ ೨೦೧೧-೧೨) ಹೋಲಿಕೆಯ ವರ್ಷವಾಗಿ ಆರಿಸಿಕೊಂಡು (ಬೇಸ್ ಇಯರ್) ಲೆಕ್ಕ ಹಾಕಲಾಗುತ್ತದೆ. ಈಗ ಅದು ಸುಮಾರು ಶೇಕಡ ೭ರಷ್ಟಿದೆ ಅಂತಲೂ ನಾಮಿನಲ್ ಜಿಡಿಪಿ ಅನ್ನೋದು ಸುಮಾರು ಶೇಕಡ ೧೧ರಷ್ಟು ಇದೆ ಅಂತಲೂ ಅಂದಾಜು ಮಾಡಲಾಗಿದೆ. ಇದನ್ನು ಎಲ್ಲರೂ ಒಪ್ಪಿಕೊಂಡಿಲ್ಲ. ಉದಾಹರಣೆಗೆ ಮೋದಿ ಸರ್ಕಾರದ ಹಿಂದಿನ ಪ್ರಮುಖ ಆರ್ಥಿಕ ಸಲಹೆಗಾರರಾಗಿದ್ದ ಅರವಿಂದ ಸುಬ್ರಮಣಿಯನ್ ಅವರು ೨೦೧೧ರಿಂದಲೇ ಜಿಡಿಪಿ ಎಂದೂ ಶೇಕಡ ೭ರಷ್ಟಿರಲಿಲ್ಲ. ಅದು ಕೇವಲ ಶೇಕಡ ೩.೫ರಿಂದ ೫.೫ ರಷ್ಟಿತ್ತು. ಸರಾಸರಿ ತೆಗೆದುಕೊಂಡರೆ ಕೇವಲ ಶೇಕಡ ೪.೫ ಇದ್ದಿರಬಹುದು ಅಂತ ಅಭಿಪ್ರಾಯ ಪಡುತ್ತಾರೆ.

ಇನ್ನು ನಾಮಿನಲ್ ಜಿಡಿಪಿಯನ್ನು ಕುರಿತಂತೆ ಬಜೆಟ್ಟಿನಲ್ಲೇ ಒಂದೊಂದು ಕಡೆ ಒಂದೊಂದು ರೀತಿಯ ಉಲ್ಲೇಖ ಬರುತ್ತದೆ. ಬಜೆಟ್ಟಿನಲ್ಲಿ ಒಂದು ಕಡೆ ಶೇಕಡ ೧೨ ಅಂತ ಭಾವಿಸಿಕೊಂಡು ಮುಂದಿನ ವರ್ಷದ ಜಿಡಿಪಿಯನ್ನು ಅಂದಾಜು ಮಾಡಲಾಗಿದೆ. ೨೦೧೮-೧೯ರ ಬಜೆಟ್ಟಿನ ಪರಿಷ್ಕೃತ ಜಿಡಿಪಿ ೧೮೮೪೦೭೩೧ ಕೋಟಿ ರೂಪಾಯಿಗಳಿದ್ದು ಅದು ೨೦೧೯-೨೦ರವೇಳೆಗೆ ೨೧೧೦೦೬೦೭ ಕೋಟಿ ರೂಪಾಯಿ ಆಗುತ್ತದೆ ಎಂದು ಅಂದಾಜು ಮಾಡಲಾಗಿದೆ. ಜಿಡಿಪಿಯನ್ನು ಶೇಕಡ ೧೧ ಅಂತ ಲೆಕ್ಕ ಹಾಕಿದರೆ ೨೦೯೧೩೨೧೧ಕೋಟಿ ರೂಪಾಯಿ ಆಗುತ್ತದೆ! ಈ ರೀತಿಯ ಸಂದಿಗ್ಧತೆ ಈ ಬಜೆಟ್ಟಿನ ಪ್ರಧಾನ ಲಕ್ಷಣವಾಗಿಬಿಟ್ಟಿದೆ.

ಶೇಕಡ ೮ ಜಿಡಿಪಿ ಅಸಾಧ್ಯವಾದ ಗುರಿಯೇನಲ್ಲ. ಹಲವು ದೇಶಗಳು ಇದನ್ನು ಸಾಧಿಸಿವೆ. ಆರ್ಥಿಕ ಸಮೀಕ್ಷೆಯೇ ಗುರುತಿಸುವಂತೆ ಚೀನಾದಲ್ಲಿ ಸುಮಾರು ಶೇಕಡ ೧೧ರಷ್ಟು ಪ್ರಮಾಣದಲ್ಲಿ ಜಿಡಿಪಿ ಏರಿಕೆ ಸಾಧ್ಯವಾಗಿದೆ. ಅದಕ್ಕೆ ಹೋಲಿಸಿದರೆ ಶೇಕಡ ೮ ದೊಡ್ಡ ಗುರಿಯೇನಲ್ಲ. ಆದರೆ ಹೆಚ್ಚಿನ ಆರ್ಥಿಕ ಪ್ರಗತಿ ಸಾಧ್ಯವಾಗಿರುವ ಎಲ್ಲಾ ದೇಶಗಳಲ್ಲೂ ಹೂಡಿಕೆ ಹಾಗೂ ಅದರ ಜೊತೆಗೆ ಉಳಿತಾಯವೂ ಅದೇ ಪ್ರಮಾಣದಲ್ಲಿ ಹೆಚ್ಚಿದೆ ಅನ್ನುವುದನ್ನು ಗಮನಿಸಬೇಕು. ಹೂಡಿಕೆಯನ್ನು ಸರ್ಕಾರ ಮತ್ತು ಖಾಸಗೀ ಕ್ಷೇತ್ರಗಳೆರಡೂ ಮಾಡುತ್ತವೆ. ವಿದೇಶದಿಂದಲೂ ಹಣ ಹರಿದುಬರುತ್ತದೆ.

**ಸರ್ಕಾರದ ಹೂಡಿಕೆ**

ಮೊದಲಿಗೆ ಸರ್ಕಾರದ ಹೂಡಿಕೆಯನ್ನು ನೋಡೋಣ. ಬಜೆಟ್ ಗಮನಿಸಿದರೆ ಸರ್ಕಾರದ ಹೂಡಿಕೆಯಲ್ಲಿ ಗಣನೀಯವಾದ ಹೆಚ್ಚಳ ಕಾಣುತ್ತಿಲ್ಲ. ಬದಲಾಗಿ ಕಳೆದ ವರ್ಷಕ್ಕೆ ಹೋಲಿಸಿದರೆ, ಅದು ಹಣದುಬ್ಬರದ ದರವನ್ನು ಗಣನೆಗೆ ತೆಗೆದುಕೊಂಡರೆ ಸರ್ಕಾರದ ಹೂಡಿಕೆ ಕಡಿಮೆಯೇ ಆಗಿದೆ. ಇತ್ತೀಚಿನ ದಿನಗಳಲ್ಲಿ ಅದರಲ್ಲೂ ಉದಾರೀಕರಣದ ನಂತರ ಸರ್ಕಾರಗಳೂ ಹೂಡಿಕೆಯನ್ನು ಹೆಚ್ಚಿಸುವ ಕಡೆ ಗಮನ ಕೊಡುತ್ತಿಲ್ಲ. ಜೊತೆಗೆ ವಿತ್ತೀಯ ಕೊರತೆಯನ್ನು ಶೇಕಡ ೩.೧ರಷ್ಟಕ್ಕೆ ಇಳಿಸಬೇಕು ಅಂತ ಗುರಿ ಇಟ್ಟುಕೊಂಡಿರುವುದರಿಂದ ಹೆಚ್ಚುವರಿ ಸರ್ಕಾರಿ ಖರ್ಚನ್ನು ನಿರೀಕ್ಷಿಸುವಂತೆಯೂ ಇಲ್ಲ. ಆದರೆ ಒಟ್ಟಾರೆ ಆರ್ಥಿಕ ಬೆಳವಣಿಗೆಯ ದೃಷ್ಟಿಯಿಂದ ಸರ್ಕಾರದ ಹೂಡಿಕೆ ಅನಿವಾರ್ಯ. ಇದನ್ನು ಹಲವು ಅಧ್ಯಯನಗಳು ಸ್ಪಷ್ಟಪಡಿಸಿವೆ. ಅಷ್ಟೇ ಏಕೆ ವಿಶ್ವ ಬ್ಯಾಂಕಿನ ಇತ್ತೀಚಿನ ಅಧ್ಯಯನವೂ ಅದನ್ನು ಒಪ್ಪಿಕೊಂಡಿದೆ. ಸರ್ಕಾರಿ ಹೂಡಿಕೆಯು ಖಾಸಗಿ ಹೂಡಿಕೆಯನ್ನು ಉತ್ತೇಜಿಸುತ್ತದೆ. ಇದರ ಪರಿಣಾಮ ಸಾಮಾಜಿಕ ಕ್ಷೇತ್ರದ ಮೇಲಿನ ಹೂಡಿಕೆಯಲ್ಲೂ ಆಗುತ್ತದೆ. ಅಲ್ಲೂ ಕೊರತೆ ಆಗುತ್ತದೆ. ಅವಶ್ಯವಾಗಿ ಬೇಕಾದಷ್ಟು ಬಂಡವಾಳ ಹೂಡಿಕೆ ಸಾಧ್ಯವಾಗುವುದಿಲ್ಲ.

ಹಾಗಾಗಿ ಬಂಡವಾಳ ಹೂಡಿಕೆ ಖಾಸಗೀ ಕ್ಷೇತ್ರದಿಂದಲೇ ಬರಬೇಕು. ಅದು ದೇಶದೊಳಗೆ ಇರಬಹುದು ಅಥವಾ ಹೊರಗಿನಿಂದ ಬರಬಹುದು. ಖಾಸಗೀ ವಲಯವನ್ನು ಆಕರ್ಷಿಸುವುದಕ್ಕೆ ಸರ್ಕಾರ ಮೂಲಭೂತ ವ್ಯವಸ್ಥೆಗಳ (ಇನ್‌ಫ್ರಾಸ್ಟ್ರಕ್ಚರ್) ಮೇಲೆ ಹೂಡಬೇಕು. ಈ ಬಜೆಟ್ಟಿನಲ್ಲಿ ರೈಲ್ವೆಗೆ ಹೆಚ್ಚುವರಿ ೧೩,೦೦೦ ಕೋಟಿ ನೀಡಲಾಗಿದೆ. ರಸ್ತೆ ಸಾರಿಗೆ ಹಾಗೂ ಹೆದ್ದಾರಿ ಅಭಿವೃದ್ಧಿಗೆ ಕೇವಲ ಶೇಕಡ ೫.೭ರಷ್ಟು ಹೆಚ್ಚಿಸಲಾಗಿದೆ. ಹಣದುಬ್ಬರದ ದರವನ್ನು ಶೇಕಡ ೫ರಷ್ಟು ಅಂತ ಇಟ್ಟುಕೊಂಡರೆ ಅದನ್ನು ಹೆಚ್ಚಳ ಅಂತ ಹೇಳುವುದಕ್ಕೆ ಸಾಧ್ಯವಿಲ್ಲ. ಗ್ರಾಮೀಣ ಅಭಿವೃದ್ಧಿಗಂತೂ ಇನ್ನೂ ಕಡಿಮೆ ನೀಡಲಾಗಿದೆ. ಸರ್ಕಾರದ ಕೆಲವು ಪ್ರಮುಖ ಯೋಜನೆಗಳಿಗೂ ಅಂತಹ ಗಮನ ನೀಡಿಲ್ಲ. ಆರು ಪ್ರಮುಖ ಯೋಜನೆಗಳನ್ನು 'ಅತ್ಯಂತ ಪ್ರಮುಖ ಯೋಜನೆಗಳು' ಎಂಬ ಶೀರ್ಷಿಕೆಯಡಿಯಲ್ಲಿ ಉಲ್ಲೇಖಿಸಲಾಗಿದೆ. ಅವುಗಳಿಗೆ ನಿಗದಿಪಡಿಸಿರುವ ಹಣ ಕೂಡ ಕಡಮೆಯೇ. ಮಹಾತ್ಮ ಗಾಂಧಿ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಗೆ ಕೇವಲ ೬೦,೦೦೦ ಕೋಟಿಗಳನ್ನು ಮೀಸಲಿಡಲಾಗಿದೆ. ಅದು ೨೦೧೮-೧೯ರಲ್ಲಿ ಖರ್ಚುಮಾಡಿದ ಮೊತ್ತ ೬೧,೦೮೪ ಕೋಟಿಗಿಂತ ಕಡಿಮೆ. ಅದನ್ನೆ ಕಡಿಮೆ ಎನ್ನಲಾಗಿತ್ತು. ಹಾಗೆಯೇ ಬಜೆಟ್ ಭಾಷಣದಲ್ಲಿ ತುಂಬಾ ಹೊಗಳಿದ ಪ್ರಧಾನ ಮಂತ್ರಿ ಗ್ರಾಂ ಸಡಕ್ ಯೋಜನೆ, ಪ್ರಧಾನ ಮಂತ್ರಿ ಆವಾಸ ಯೋಜನೆ ಇವೆಲ್ಲಕ್ಕೂ ಕಳೆದ ವರ್ಷದಷ್ಟೇ ಮೀಸಲಿಡಲಾಗಿದೆ. ಅಥವಾ ಇನ್ನೂ ಕಡಿಮೆಯಾಗಿದೆ. ರೈತರ ವರಮಾನ ಬೆಂಬಲ ಯೋಜನೆಗೆ ಮಾತ್ರ ೭೫,೦೦೦ ಕೋಟಿ ಮೀಸಲಿಡಲಾಗಿದೆ. ಪ್ರತಿ ನಿರ್ದಿಷ್ಟ ಕುಟುಂಬಗಳಿಗೆ ೬೦೦೦ ರೂಪಾಯಿಗಳನ್ನು ಕೊಡುವ ಉದ್ದೇಶ ಇದಕ್ಕಿದೆ. ಈ ಮೊತ್ತವನ್ನು ಉಳಿದ ಯೋಜನೆಗಳಿಗೆ ಕಡಿತಮಾಡಿ ಇಲ್ಲಿ ಕ್ರೋಢೀಕರಿಸಲಾಗಿದೆ. ಕಳೆದ ವರ್ಷ ಅಷ್ಟೊಂದು ಪ್ರಚಾರ ಮಾಡಿದ ಆಯುಷ್ಮಾನ್ ಭಾರತ ಆರೋಗ್ಯ ವಿಮಾ ಯೋಜನೆಯನ್ನು ಬಜೆಟ್ ಭಾಷಣದಲ್ಲಿ ಉಲ್ಲೇಖಿಸಲೇ ಇಲ್ಲ.

ಅಂದರೆ ಇಷ್ಟು ಹಣವನ್ನು ನೀಡಲಾಗುತ್ತದೆ ಅನ್ನುವ ಖಾತ್ರಿ ಇಲ್ಲ. ಕಳೆದ ವರ್ಷ ಆಗಿಲ್ಲ. ಈ ವರ್ಷ ಕಳೆದ ವರ್ಷದ ಕೊರತೆಯನ್ನೂ ತುಂಬಿಕೊಂಡು ಕಂದಾಯ ಸಂಗ್ರಹವಾಗಬೇಕು. ಆಗಷ್ಟೆ ಈ ಕನಿಷ್ಠ ಹೂಡಿಕೆ ಸಾಧ್ಯ.

**ಇಳಿಯುತ್ತಿರುವ ಕಂದಾಯ ಸಂಗ್ರಹಣೆ**

ಸರ್ಕಾರದ ತೆರಿಗೆ ಆದಾಯ ಕಳೆದ ಎರಡು ವರ್ಷಗಳಲ್ಲಿ ಗಣನೀಯವಾಗಿ ಕಡಿಮೆಯಾಗುತ್ತಿದೆ. ೨೦೧೬-೧೭ರಲ್ಲಿ ಅದರ ದರ ಶೇಕಡ ೧೭ರಷ್ಟಿತ್ತು. ೧೭-೧೮ರಲ್ಲಿ ಅದು ಶೇಕಡ ೧೧ರಷ್ಟು ನಂತರ ೨೦೧೮-೧೯ರಲ್ಲಿ ಕೇವಲ ಶೇಕಡ ೮ಕ್ಕೆ ಇಳಿದಿದೆ. ಅಂದರೆ ಕೇಂದ್ರದ ತೆರಿಗೆ ಆದಾಯ ಕಡಿಮೆಯಾಗುತ್ತಲೇ ಇದೆ. ತೆರಿಗೆ ಆದಾಯದ ಇಳಿತ ನಿಜವಾಗಿ ಆಗಿರುವುದು ಪರೋಕ್ಷ ತೆರಿಗೆಯಲ್ಲಿ. ನೇರ ತೆರಿಗೆ ಹೆಚ್ಚು ಕಮ್ಮಿ ಜಿಡಿಪಿಗೆ ಹೋಲಿಸಿ ನೋಡಿದರೆ ಅಷ್ಟೇ ಇದೆ. ಕೇಂದ್ರಕ್ಕೆ ಬರುತ್ತಿದ್ದ ಒಟ್ಟು ಪರೋಕ್ಷ ತೆರಿಗೆ ೨೦೧೬-೧೭ರಲ್ಲಿ ಶೇಕಡ ೨೦ರಷ್ಟಿತ್ತು. ಅದು ಜಿಎಸ್‌ಟಿ ಜಾರಿಗೆ ಬಂದ ಮೇಲೆ ೨೦೧೭-೧೮ರಲ್ಲಿ ಕೇವಲ ಶೇಕಡ ೬.೩ರಷ್ಟಾಗಿತ್ತು. ೨೦೧೮-೧೯ರಲ್ಲಿ ಅದು ಕೇವಲ ಶೇಕಡ ೨.೭ರಷ್ಟಾಗಿದೆ. ಇದನ್ನು ಗಂಭೀರವಾಗಿ ಪರಿಗಣಿಸಬೇಕು.

ಪ್ರಸ್ತುತ ಬಜೆಟ್ಟಿನ ವಿಷಯಕ್ಕೆ ಬಂದರೆ ಈಗಾಗಲೇ ಗಮನಿಸಿರುವಂತೆ ಅದರಲ್ಲಿ ಕೇಂದ್ರದ ತೆರಿಗೆ ಆದಾಯಕ್ಕೆ ಸಂಬಂಧಿಸಿದಂತೆ ೨೦೧೮-೧೯ರ ಪರಿಷ್ಕೃತ ಅಂದಾಜನ್ನು ಗಣನೆಗೆ ತೆಗೆದುಕೊಂಡು ಒಟ್ಟು ೨೨,೪೮,೧೭೫ ಕೋಟಿ ರೂಪಾಯಿಗಳು ಸಂಗ್ರಹವಾಗಿದೆ ಅನ್ನುವ ಅಂದಾಜನ್ನು ನೀಡಲಾಗಿದೆ. ಆದರೆ ಸಿಜಿಎ ಮಾಹಿತಿಯ ಪ್ರಕಾರ ಆ ಸಾಲಿನಲ್ಲಿ ಸಂಗ್ರಹವಾಗಿರುವ ತೆರಿಗೆ ೨೦,೮೦,೨೦೩ ಕೋಟಿ ರೂಪಾಯಿಗಳು. ಅಂದರೆ ಕೇಂದ್ರದ ತೆರಿಗೆ ಆದಾಯದಲ್ಲಿ ೧,೬೭,೯೭೨ ಕೋಟಿ ಕಡಿಮೆಯಾಗಿದೆ. ಅದು ಒಟ್ಟು ತೆರಿಗೆ ಆದಾಯದ ಪರಿಷ್ಕೃತ ಅಂದಾಜಿನ ಶೇಕಡ ೧೩.೫ರಷ್ಟು! ಜಿಡಿಪಿ ಪ್ರಮಾಣಕ್ಕೆ ಹೋಲಿಸಿದರೆ ಶೇಕಡ ೧ರಷ್ಟು. ಅದರಲ್ಲಿ ವಿಶೇಷವಾಗಿ ಆದಾಯ ತೆರಿಗೆಯಲ್ಲಿ ೬೭,೩೪೬ ಕೋಟಿ ಮತ್ತು ಜಿಎಸ್‌ಟಿಯಲ್ಲಿ

೫೯,೯೩೦ ಕೋಟಿ ರೂಪಾಯಿಗಳಷ್ಟು ಕಡಮೆಯಾಗಿದೆ. ತೆರಿಗೆ ಆದಾಯದಲ್ಲಿ ಆಗಿರುವ ಈ ಕೊರತೆಯನ್ನು ಸರಿದೂಗಿಸಿಕೊಳ್ಳುವುದಕ್ಕೆ ಸರ್ಕಾರ ತನ್ನ ಖರ್ಚನ್ನೇ ಕಡಮೆ ಮಾಡಿಕೊಂಡಿದೆ. ಇದರ ಪರಿಣಾಮ ಅಂದರೆ ಇಡೀ ಬಜೆಟ್ಟಿನ ಗಾತ್ರವೇ ಜಿಡಿಪಿಯ ಶೇಕಡ ಒಂದರಷ್ಟು ಕಡಮೆಯಾಗಿದೆ. ಆಶ್ಚರ್ಯ ಅಂದರೆ ಇದ್ಯಾವುದರ ಉಲ್ಲೇಖವೂ ಬಜೆಟ್ಟಿನಲ್ಲಿಲ್ಲ. ಈ ಅಂಕಿಅಂಶಗಳನ್ನು ಗಮನಿಸಿದರೆ ಮುಂದಿನ ವರ್ಷದ ತೆರಿಗೆ ಅಂದಾಜಿನ ಬಗ್ಗೆಯೂ ಅನುಮಾನ ಸ್ವಾಭಾವಿಕವಾಗಿಯೇ ಬರುತ್ತದೆ. ಯಾಕೆಂದರೆ ಈ ಬಜೆಟ್ಟಿನ ಈ ಅಂಕಿಅಂಶವನ್ನು ಇಟ್ಟುಕೊಂಡೇ ಮುಂದಿನ ವರ್ಷದ ಸಂಗ್ರಹವನ್ನು ಲೆಕ್ಕಹಾಕಲಾಗಿದೆ. ಅದು ಸರಿಹೋಗಬೇಕಾದರೆ ಕಳೆದ ವರ್ಷಕ್ಕಿಂತ ಈ ವರ್ಷ ಶೇಕಡ ೨೫.೩ರಷ್ಟು ಅಂದರೆ ಸುಮಾರು ೪,೦೦,೦೦೦ ಕೋಟಿ ರೂಪಾಯಿಗಳಷ್ಟು ಹೆಚ್ಚಿಗೆ ಸಂಗ್ರಹವಾಗಬೇಕು. ಜಿಡಿಪಿ ದರಕ್ಕೆ ಹೋಲಿಸಿದರೆ ಇದರ ಸಾಧ್ಯತೆಯ ಬಗ್ಗೆ ಅನುಮಾನ ಬರುತ್ತದೆ.

ಹೆಚ್ಚಿನ ಹಣ ಸಂಗ್ರಹಣೆಗೆ ಅತಿ ಶ್ರೀಮಂತರ ಮೇಲೆ ಹೆಚ್ಚಿನ ಆದಾಯ ತೆರಿಗೆಯನ್ನು ವಿಧಿಸಲಾಗಿದೆ. ೨ರಿಂದ ೫ ಕೋಟಿ ಹಾಗೂ ೫ ಕೋಟಿಗಿಂತ ಹೆಚ್ಚು ಆದಾಯ ಇರುವವರ ಆದಾಯದ ಮೇಲೆ ಸರ್ ಚಾರ್ಜ ವಿಧಿಸಲಾಗಿದೆ. ಆದರೆ ಕಾರ್ಪೊರೇಟ್ ತೆರಿಗೆಯಲ್ಲಿ ಆಗಿರುವ ಕಡಿತ ಇದನ್ನು ನುಂಗಿಬಿಡುತ್ತದೆ. ಹಾಗಾಗಿ ತೆರಿಗೆಯಿಂದ ಅವಶ್ಯಕ ಬಂಡವಾಳ ಸಂಗ್ರಹವಾಗುತ್ತದೆ ಅನ್ನುವುದು ಅನುಮಾನ. ಜೊತೆಗೆ ಇನ್ನೊಂದು ಅಪಾಯ ಇದೆ. ಇದನ್ನು ರಾಜ್ಯ ಸರ್ಕಾರಗಳ ಜೊತೆ ಹಂಚಿಕೊಳ್ಳಬೇಕಾಗಿಲ್ಲ. ರಾಜ್ಯ ಸರ್ಕಾರಗಳಿಗೆ ನಿಜವಾಗಿ ಬೇಕಾಗಿದ್ದಾಗ ಇದು ದಕ್ಕುವುದಿಲ್ಲ.

**ಡಿಸ್ ಇನ್ವೆಸ್ಟ್‌ಮೆಂಟ್**

ಹಣ ಸಂಗ್ರಹಣೆಗೆ ಇನ್ನೊಂದು ದಾರಿ ಅಂದರೆ ಖಾಸಗೀಕರಣ ಮತ್ತು ಡಿಸ್‌ಇನ್ವೆಸ್ಟ್‌ಮೆಂಟ್. ಇದರಿಂದ ಸುಮಾರು ೧,೦೫,೦೦೦ ಕೋಟಿ ರೂಪಾಯಿಗಳು ಸಂಗ್ರಹವಾಗಬಹುದೆಂಬ ಅಂದಾಜು ಮಾಡಲಾಗಿದೆ. ಇದು ಸರ್ಕಾರದ ಖರ್ಚುಗಳಿಗೆ ಸಾಲುವುದಿಲ್ಲ. ಇದೊಂದು ಉತ್ತಮ ಕ್ರಮವೂ ಅಲ್ಲ.

**ಅಂತರರಾಷ್ಟ್ರೀಯ ಮಾರುಕಟ್ಟೆಯಿಂದ ಸಾಲಪಡೆಯುವುದು**

ಈ ಬಜೆಟ್ಟಿನಲ್ಲಿ ಇದೊಂದು ಪ್ರವೃತ್ತಿ ಕಾಣಿಸಿಕೊಂಡಿದೆ. ಬಹುಶಃ ಇದೊಂದು ಅಪಾಯಕಾರಿಯಾದ ಪ್ರವೃತ್ತಿ. ಬಂಡವಾಳಕ್ಕಾಗಿ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸಾಲಕ್ಕಾಗಿ ಕೈಚಾಚುವ ಪ್ರಯತ್ನವನ್ನಿಲ್ಲಿ ಕಾಣಬಹುದು. ಈವರೆಗೆ ವಿದೇಶಿ ಸಾಲ ಒಟ್ಟು ಜಿಡಿಪಿಯ ಕೇವಲ ಶೇಕಡ ೫ನ್ನೂ ಮೀರಿರಲಿಲ್ಲ. ಅದು ಇಡೀ ಜಗತ್ತಿನ ರಾಷ್ಟ್ರಗಳಿಗೆ ಹೋಲಿಸಿದರೆ ತುಂಬ ಕಡಮೆ. ಈ ಬಾರಿ ಹಣಕಾಸು ಸಚಿವೆ ಬಜೆಟ್ ಮಂಡನೆಯಲ್ಲಿ ಮಾತನಾಡುತ್ತಾ ಭಾರತ ಇನ್ನು ಮುಂದೆ ವಿದೇಶಿ ಮಾರುಕಟ್ಟೆಯಲ್ಲಿ ವಿದೇಶಿ ಕರೆನ್ಸಿಯಲ್ಲೇ ಸಾಲಪಡೆಯುತ್ತದೆ ಎಂದು ಹೇಳಿದ್ದಾರೆ. ವಿದೇಶಿ ಕರೆನ್ಸಿಯಲ್ಲಿ ಸಾಲ ಪಡೆಯುವುದನ್ನು ಈವರೆಗೂ ಎಲ್ಲರೂ ವಿರೋಧಿಸಿಕೊಂಡು ಬಂದಿದ್ದರು. ವಿದೇಶಿ ಬ್ಯಾಂಕರುಗಳು ಇದಕ್ಕೆ ಒತ್ತಾಯ ಮಾಡುತ್ತಲೇ ಇದ್ದರು. ಒಂದಲ್ಲ ಒಂದು ಹುಸಿ ವಾದವನ್ನು ನೀಡುತ್ತಲೇ ಬಂದಿದ್ದರು. ಆದರೆ ಅವ್ಯಾವುದಕ್ಕೂ ಈವರೆಗೂ ಮಣೆಹಾಕಿರಲಿಲ್ಲ. ಆದರೆ ಈಗ ಅದಕ್ಕೆ ಕೈಒಡ್ಡಲಾಗಿದೆ. ವಿದೇಶಿ ಸಾಲದ ಪ್ರಮಾಣ ಕಡಿಮೆ ಇತ್ತು ಅನ್ನುವ ಕಾರಣಕ್ಕೆ ಈಗ ಸಾಲ ಪಡೆಯಬೇಕೆ? ದೇಶದೊಳಗೆ ಹಣ ಒಟ್ಟುಮಾಡಿಕೊಂಡಿದ್ದರೆ ಅದನ್ನು ಹೆಚ್ಚಿನ ತೆರಿಗೆಯಿಂದಲೋ ಅಥವಾ ಮತ್ತ್ಯಾವುದೋ ಕ್ರಮದಿಂದ ತೀರಿಸಬಹುದು. ಆದರೆ ವಿದೇಶಿ ಸಾಲದ ವಿಷಯದಲ್ಲಿ ಹಾಗಲ್ಲ. ನಿಮಗೆ ವಿದೇಶಿ ವಿನಿಮಯದಲ್ಲಿ ಕೊರತೆ ಉಂಟಾದರೆ ಹೆಚ್ಚಿನ ತೆರಿಗೆಯಿಂದ ಅದನ್ನು ಭರಿಸುವುದಕ್ಕೆ ಸಾಧ್ಯವಿಲ್ಲ. ಆಗ ಸಾಲಕೊಟ್ಟವರು "ಉಳಿತಾಯ ಕ್ರಮ" ತೆಗೆದುಕೊಳ್ಳಲು ಒತ್ತಾಯಿಸುತ್ತಾರೆ. ಗ್ರೀಸಿನಲ್ಲಿ ಆಗಿದ್ದು ಹಾಗೆಯೇ. ಕ್ಷೇಮಾಭಿವೃದ್ಧಿಯ ಖರ್ಚುಗಳನ್ನು ಕಡಮೆ ಮಾಡಿ, ಸಬ್ಸಿಡಿಯಲ್ಲಿ ಕಡಿತಮಾಡಿ, ಸರ್ಕಾರಿ ನೌಕರರ ಸಂಬಳವನ್ನು ತಡೆಯಿರಿ ಇತ್ಯಾದಿ ಹಲವಾರು ಸಲಹೆಗಳು ಬರುತ್ತವೆ. ಇದೆಲ್ಲಾ ನಮ್ಮಲ್ಲಿ ತಕ್ಷಣ ಆಗಿಬಿಡುತ್ತದೆ ಅಂತ ಅಲ್ಲ.

ರಘುರಾಂ ರಾಜನ್ ಈ ಬಗ್ಗೆ ವಿವರವಾಗಿ ಬರೆದಿದ್ದಾರೆ. "ಸಣ್ಣ ಪ್ರಮಾಣದಲ್ಲಿ ಇದು ಸಮಸ್ಯೆ ಅಲ್ಲದೇ ಇರಬಹುದು. ಆದರೆ ಒಮ್ಮೆ ನೀವು ಬಾಗಿಲು ತೆಗೆದರೆ ಇನ್ನಷ್ಟು ಬಾಂಡುಗಳನ್ನು ಬಿಡುಗಡೆಮಾಡಿ ಹಣ ಕೂಡಿಸಲು ಮನಸ್ಸಾಗುತ್ತದೆ. ಅದರ ಬೆನ್ನಲ್ಲೇ ಅದಕ್ಕೆ ತೆಕ್ಕೆಹಾಕಿಕೊಂಡ ಅಪಾಯಗಳು ಹೆಚ್ಚುತ್ತಾ ಹೋಗುತ್ತವೆ. ಯಾವುದೇ ಚಟವೂ ಸಣ್ಣದಾಗೇ ಶುರುವಾಗುವುದು. ವಿದೇಶಿ ಸಾಲ ಒಳ್ಳೆಯದಲ್ಲ ಅನ್ನುವುದಕ್ಕೆ ಇದೊಂದೇ ಕಾರಣವಲ್ಲ. ಹಿಂದೆ ಸರ್ಕಾರ ರೂಪಾಯಿಯನ್ನು ಅಂತಾರಾಷ್ಟ್ರೀಯಗೊಳಿಸುವ ಉದ್ದೇಶವನ್ನು ಇಟ್ಟುಕೊಂಡಿತ್ತು. ಅಂತಿಮವಾಗಿ ರೂಪಾಯಿಯನ್ನು ಬೇರೆ ದೇಶದವರೂ ಬಳಸುವಂತಾಗಬೇಕು ಅಂತ ಭಾವಿಸಲಾಗಿತ್ತು. ಅದು ಸಾಧ್ಯವಾಗಬೇಕಾದರೆ ದೇಶದ ಹಣದುಬ್ಬರದ ದರ ಕಡಮೆಯಾಗಬೇಕು. ಆಗ ರೂಪಾಯಿ ಹೆಚ್ಚು ಆಕರ್ಷಕವಾಗುತ್ತದೆ. ನಮ್ಮ ಉದ್ದೇಶ ಈಗಲೂ ಅದೇ ಆಗಿದ್ದರೆ ರೂಪಾಯಿಗೆ ಅನಾವಶ್ಯಕವಾಗಿ ಯಾಕೆ ಸ್ಪರ್ಧೆಯನ್ನು ಸೃಷ್ಟಿಸಬೇಕು?"

ಇನ್ನೊಂದು ಹಣದ ಮೂಲ ಅಂದರೆ ಆರ್‌ಬಿಐನಲ್ಲಿ ಶೇಖರವಾಗಿರುವ ಹಣ. ಸರ್ಕಾರ ಇದಕ್ಕೆ ಒಲವು ತೋರಿಸಿದೆ. ಈಗ ಅದಕ್ಕೆ ಒಂದು ಸಮಿತಿಯೂ ರಚನೆಯಾಗಿದೆ. ಅದರ ವರದಿಗಾಗಿ ಕಾಯಲಾಗುತ್ತಿದೆ. ಒಟ್ಟಿನಲ್ಲಿ ಹಿಂದಿನವರು ಕೂಡಿಟ್ಟ ಹಣ, ಮಾಡಿಟ್ಟಿರುವ ಆಸ್ತಿಯನ್ನು ಬಳಸಿಕೊಳ್ಳುವ ಹಂತವನ್ನು ತಲುಪಿದ್ದೇವೆ. ಇದು ಒಳ್ಳೆಯ ಬೆಳವಣಿಗೆಯೇನಲ್ಲ.

ತೆರಿಗೆ ಸಂಗ್ರಹಣೆಯಲ್ಲಿ ಕೊರತೆಯಾದರೆ ಉಂಟಾಗುವ ಇನ್ನೊಂದು ಮುಖ್ಯ ಸಮಸ್ಯೆ ಅಂದರೆ ರಾಜ್ಯಗಳ ಪಾಲು ಕಡಮೆಯಾಗುತ್ತದೆ. ಅದರ ಯೋಜನೆಗಳೆಲ್ಲಾ ಅಸ್ತವ್ಯಸ್ತವಾಗುತ್ತದೆ. ಅವು ಕೇಂದ್ರದ ಮುಂದೆ ಕೈಒಡ್ಡಿ ನಿಲ್ಲಬೇಕಾದ ಸ್ಥಿತಿ ಬರುತ್ತದೆ. ಆಗ ನಮ್ಮ ಫೆಡರಲ್ ವ್ಯವಸ್ಥೆ ಅರ್ಥಹೀನವಾಗುತ್ತದೆ. ರಾಜ್ಯ ಸರ್ಕಾರಗಳ ಜೊತೆ ಹಂಚಿಕೊಳ್ಳುವ ಅವಶ್ಯಕತೆಯಿಲ್ಲದ ರೀತಿಯ ತೆರಿಗೆಗಳನ್ನು ಕೇಂದ್ರ ವಿಧಿಸುತ್ತಿರುವುದು ರಾಜ್ಯ ಸರ್ಕಾರಗಳ ಆರ್ಥಿಕ ಸ್ಥಿತಿಯನ್ನು ಹೆಚ್ಚು ಕಷ್ಟಕ್ಕೀಡು ಮಾಡುತ್ತಾ ಹೋಗುತ್ತದೆ.

**ಸಂಪನ್ಮೂಲ ಸಂಗ್ರಹಕ್ಕೆ ಪರ್ಯಾಯ ಮಾರ್ಗಗಳು**

ಬೇರೆ ಯಾವುದೇ ಮಾರ್ಗವೂ ಇಲ್ಲ ಹಾಗಾಗಿ ಈ ಮಾರ್ಗವನ್ನು ಹಿಡಿದಿದ್ದೇವೆ ಅನ್ನುವುದು ವಾದವಾದರೆ, ಅದು ಸರಿಯಲ್ಲ. ಪಿಕೆಟ್ಟಿ ಭಾರತದ ಅಸಮಾನತೆಯನ್ನು ಕುರಿತ ತಮ್ಮ ಲೇಖನದಲ್ಲಿ ಸಂಪತ್ತಿನ ಮೇಲೆ ತೆರಿಗೆಯನ್ನು ವಿಧಿಸುವುದನ್ನು ಕುರಿತು ಹೇಳುತ್ತಾರೆ. ಅದರ ಅನುಕೂಲಗಳನ್ನು ಕುರಿತು ದೀರ್ಘವಾಗಿ ಚರ್ಚಿಸಿದ್ದಾರೆ. ಪ್ರಭಾತ್ ಪಟ್ನಾಯಕ್ ಅಂತಹವರು ಕೂಡ ಇದನ್ನು ಪ್ರತಿಪಾದಿಸುತ್ತಿದ್ದಾರೆ. ಅವರು ಹೇಳುವಂತೆ "ಈಗ ಶ್ರೀಮಂತ ಬಿಲಿಯನ್ನೇರುಗಳ ಒಟ್ಟು ೫೬೦ ಲಕ್ಷಕೋಟಿ ಸಂಪತ್ತಿನ ಮೇಲೆ ಶೇಕಡ ೧ರಷ್ಟು ತೆರಿಗೆ ಹಾಕಿದರೂ ೫.೬ ಲಕ್ಷಕೋಟಿ ಸಂಗ್ರಹವಾಗುತ್ತದೆ. ಹಾಗೆಯೇ ಉತ್ತರಾಧಿಕಾರಿ (ಇನ್‌ಹರಿಟೆನ್ಸ್) ತೆರಿಗೆ ಹಾಕಿದರೆ ಸುಮಾರು ೯.೩ ಲಕ್ಷ ಕೋಟಿ ಸಂಗ್ರಹವಾಗುತ್ತದೆ. ಅಂದರೆ ಒಟ್ಟಾರೆಯಾಗಿ ಸುಮಾರು ೧೫ ಲಕ್ಷ ಕೋಟಿ ಸಂಗ್ರಹವಾಗುತ್ತದೆ." ಈ ಹಣದಿಂದ ನಮ್ಮನ್ನು ಕಾಡುತ್ತಿರುವ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಅಸಮಾನತೆಯ ಸಮಸ್ಯೆಯನ್ನು ಸ್ವಲ್ಪಮಟ್ಟಿಗಾದರೂ ಎದುರಿಸಿದಂತಾಗುತ್ತದೆ.

ಒಂದಂತೂ ನಿಜ, ನಮ್ಮ ಆರ್ಥಿಕತೆಯಲ್ಲಿ ಗಂಭೀರವಾದ ಸಮಸ್ಯೆಗಳಿವೆ. ಮೋದಿ ಸರ್ಕಾರದ ಹಿಂದಿನ ಪ್ರಮುಖ ಆರ್ಥಿಕ ಸಲಹೆಗಾರರಾಗಿದ್ದ ಅರವಿಂದ ಸುಬ್ರಮಣಿಯನ್ ಹೇಳುವ ಪ್ರಕಾರ ೨೦೧೧ರಿಂದಲೇ ಜಿಡಿಪಿ ಶೇಕಡ ೭ರಷ್ಟಿಲ್ಲ ಅದು ಶೇಕಡ ೩.೫ರಿಂದ ೫.೫ರಷ್ಟಿದೆ. ಸರಾಸರಿ ತೆಗೆದುಕೊಂಡರೆ ಕೇವಲ ಶೇಕಡ ೪.೫ ಇರಬಹುದು. ವಿತ್ತೀಯ ಕೊರತೆಯೂ ಶೇಕಡ ೩.೩ ಇರಲಿಕ್ಕಿಲ್ಲ, ಅದು ಕನಿಷ್ಠ ೩.೫ರಷ್ಟಾದರೂ ಇರಬೇಕು ಅನ್ನುವ ಅನುಮಾನಗಳಿವೆ. ಪಿಕೆಟ್ಟಿ ಹೇಳುವ ಪ್ರಕಾರ ಅಸಮಾನತೆ ಬಹಳವಾಗಿಯೇ ಹೆಚ್ಚಿದೆ. ಇತ್ತೀಚಿನ ಉದ್ಯೋಗ ಸಮೀಕ್ಷೆಯ ಪ್ರಕಾರ ಉದ್ಯೋಗಸ್ಥರ ಸಂಖ್ಯೆ ಕಡಿಮೆಯಾಗುತ್ತಿದೆ. ನಿರುದ್ಯೋಗ ದರ ಶೇಕಡ ೬.೧ರಷ್ಟು ಹೆಚ್ಚುತ್ತಿದೆ. ಇವೆಲ್ಲಾ ನಾವು ಹಿಡಿದಿರುವ ಉದಾರವಾದಿ ಆರ್ಥಿಕ ನೀತಿಗಳ ಫಲವೂ ಇರಬಹುದು. ಈ ಎಲ್ಲವನ್ನೂ ಗಂಭೀರವಾಗಿ ಗಮನಿಸುವ ಅವಶ್ಯಕತೆ ಸರ್ಕಾರಗಳಿಗೆ ಇದೆ. ಚುನಾವಣೆಯನ್ನು ಮೀರಿ ಯೋಚಿಸುವ, ಚಿಂತಿಸುವ ಅವಶ್ಯಕತೆ ದಿನೇ ದಿನೇ ಹೆಚ್ಚುತ್ತಿದೆ. ನಮ್ಮ ಮುಂದಿನ ಪೀಳಿಗೆಯವರಿಗೆ ಒಂದಿಷ್ಟಾದರೂ ಒಳ್ಳೆಯ ಸ್ಥಿತಿಯಲ್ಲಿ ನಮ್ಮ ದೇಶವನ್ನು ಬಿಟ್ಟುಹೋಗಬೇಕು.

**ಟಿ. ಎಸ್. ವೇಣುಗೋಪಾಲ್**
ನಂ. ಸಿಎಚ್ ೭೩, ೭ನೇ ಮುಖ್ಯರಸ್ತೆ, ಸರಸ್ವತೀಪುರಂ
ಮೈಸೂರು – ೫೭೦ ೦೦೯

# ಹಿಂದೀಗಿಂತಲೂ ಇಂಗ್ಲಿಷ್ ಅಪಾಯಕಾರಿ, ಅದನ್ನು ವಿರೋಧಿಸೋಣ






ರಾಜ್ಯದಲ್ಲೀಗ ಕಳೆದ ಕೆಲದಿನಗಳಿಂದ ಕೇಂದ್ರ ಸರಕಾರದ ತ್ರಿಭಾಷಾ ಸೂತ್ರದ್ದೇ ಸದ್ದು. ಈ ಸೂತ್ರದ ಮೂಲಕ ಕೇಂದ್ರ ಸರ್ಕಾರ ಉತ್ತರದ ರಾಜ್ಯಗಳ ಭಾಷೆಯಾಗಿರುವ ಹಿಂದಿಯನ್ನು ಬಲವಂತವಾಗಿ ನಮ್ಮ ಮೇಲೆ ಹೇರುತ್ತಿದೆ ಯೆಂಬುದು ದಕ್ಷಿಣ ರಾಜ್ಯಗಳ ಆರೋಪ. ಕೇಂದ್ರ ಸರ್ಕಾರ ತನ್ನ ನೂತನ ರಾಷ್ಟ್ರೀಯ ಶಿಕ್ಷಣ ನೀತಿಯ ಕರಡನ್ನು ರಾಜ್ಯಗಳ ಪರಿಶೀಲನೆಗೆ ಕಳಿಸಿದ್ದೇ ತಡ ಮೊದಲು ತೀವ್ರ ಪ್ರತಿಭಟನೆಯ ದನಿ ಎತ್ತಿದ್ದೇ ತಮಿಳುನಾಡು. ಮೊದಲಿನಿಂದಲೂ ತ್ರಿಭಾಷಾ ಸೂತ್ರವನ್ನು ವಿರೋಧಿಸುತ್ತಲೇ ಬಂದಿರುವ ತಮಿಳುನಾಡು ಈಗ ಮತ್ತೆ ಪ್ರತಿಭಟಿಸಿದ್ದರಲ್ಲೇನೂ ವಿಶೇಷವಿಲ್ಲ. ಆದರೆ ಮೊದಲಿನಿಂದಲೂ ಗೊತ್ತಿದ್ದೋ ಗೊತ್ತಿಲ್ಲದೆಯೋ ಇದನ್ನು ಪರೋಕ್ಷವಾಗಿ ಒಪ್ಪಿಕೊಂಡು ಬಂದಿದ್ದ ನಮ್ಮ ರಾಜ್ಯ ಈಗ ಒಮ್ಮೆಲೆ ತ್ರಿಭಾಷಾ ಸೂತ್ರದ ವಿರುದ್ಧ ಅಪಸ್ವರ ಎತ್ತಿದ್ದು ಸೋಜಿಗವೇ ಸರಿ. ಅದೂ ಸರ್ಕಾರಿ ಮಟ್ಟದಲ್ಲಿ.

ಹಿಂದಿಯೇತರ ರಾಜ್ಯಗಳ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಲ್ಲಿ ಹಿಂದಿ ಭಾಷೆಯನ್ನು ಕಡ್ಡಾಯವಾಗಿ ಕಲಿಯಬೇಕು ಎಂಬ ವಿವಾದಾತ್ಮಕ ಅಂಶ ಕೇಂದ್ರ ಸರ್ಕಾರ ಜಾರಿಗೊಳಿಸಹೊರಟಿರುವ ನೂತನ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಅಡಕವಾಗಿರುವುದೇ ಈ ಪ್ರತಿಭಟನೆಗೆ ಮೂಲ. ಪ್ರತಿಭಟನೆಯ ದನಿ ದಕ್ಷಿಣದ ರಾಜ್ಯಗಳಿಂದ ಬಂದೊಡನೆ ಎಚ್ಚೆತ್ತುಕೊಂಡ ಕೇಂದ್ರ ಸರ್ಕಾರ ಈ ಪ್ರಸ್ತಾವನೆಯನ್ನು ಕರಡಿನಿಂದ ತೆಗೆದುಹಾಕಲಾಗಿದೆಯೆಂದು ಕೂಡಲೇ ಪ್ರಕಟಿಸಿ ದಕ್ಷಿಣ ರಾಜ್ಯಗಳ ವಿರೋಧ ಕಟ್ಟಿಕೊಳ್ಳುವುದರಿಂದ ತಪ್ಪಿಸಿಕೊಂಡಿತು. ಇದು ಕೇಂದ್ರದ ಸರಿಯಾದ ನಡೆಯೂ ಹೌದು.

೧೯೬೦ರ ದಶಕದಿಂದಲೂ ದೇಶದಲ್ಲಿ ತ್ರಿಭಾಷಾ ಸೂತ್ರ ಜಾರಿಯಲ್ಲಿದೆ. ೧೯೬೮ರ ಜುಲೈ ೧೯ರಂದು ಇದನ್ನು ಅಂದಿನ ಶಿಕ್ಷಣ ಸಚಿವ ತ್ರಿಗುಣ ಸೇನ ಲೋಕಸಭೆಯಲ್ಲಿ ಮಂಡಿಸಿದ್ದರು. ನಂತರ ಕೆಲವೇ ದಿನಗಳಲ್ಲಿ ತ್ರಿಭಾಷಾ ಸೂತ್ರವನ್ನು ಯಾವುದೇ ತಿದ್ದುಪಡಿಯಿಲ್ಲದೆ ಕೇಂದ್ರವು ಲೋಕಸಭೆಯಲ್ಲಿ ಸ್ವೀಕರಿಸಿ ಅನುಷ್ಠಾನಗೊಳಿಸಿ ಆದೇಶ ಹೊರಡಿಸಿತು. ಇದರ ಹಿಂದೆ ಹಿಂದಿ ಭಾಷಿಕರ ಒತ್ತಾಯವೂ ಇತ್ತು. ಹೀಗಾಗಿ ತ್ರಿಭಾಷಾ ಸೂತ್ರ ಬಲಿಷ್ಠರೂಪದಲ್ಲಿ ದೇಶದಲ್ಲಿ ಜಾರಿಗೊಂಡಿತು. ತಮಿಳುನಾಡು (ಆಗಿನ ಮದ್ರಾಸ ರಾಜ್ಯ) ಸ್ವಲ್ಪಮಟ್ಟಿಗೆ ಪ್ರತಿಭಟಿಸಿದ್ದನ್ನು ಹೊರತುಪಡಿಸಿದರೆ ಆಗೇನೂ ಅಂತಹ ತೀವ್ರತರವಾದ ಪ್ರತಿಭಟನೆಗಳು ಬೇರೆ ರಾಜ್ಯಗಳಲ್ಲಿ ನಡೆಯಲಿಲ್ಲ. ನಾವೆಲ್ಲರೂ ತ್ರಿಭಾಷಾ ಸೂತ್ರದಂತೆ ಹಿಂದಿಯನ್ನೇ ಕಲಿತವರು, ಜತೆಗೆ ಸಂಸ್ಕೃತವನ್ನೂ ಕೂಡ. ಕನ್ನಡವಂತೂ ಮೊದಲಿನಿಂದಲೂ ಮಾತೃಭಾಷೆಯಾಗಿ ಕಡ್ಡಾಯ ರೂಪದಲ್ಲೇ ಇತ್ತು. ಆಗೆಲ್ಲ ಈಗಿನಷ್ಟು ಇಂಗ್ಲಿಷಿನ ಹುಚ್ಚು ಹಾವಳಿ ಇರಲಿಲ್ಲ. ಹಿಂದಿಗೆ ಆಗ ೫೦ ಅಂಕಗಳಿದ್ದವು. ಕಳೆದ ಐವತ್ತು ವರ್ಷಗಳಿಂದಲೂ ತ್ರಿಭಾಷಾ ಸೂತ್ರವೇ ದೇಶದಲ್ಲಿ ಜಾರಿಯಲ್ಲಿದೆ. ಆಗಾಗ ಇದರ ವಿರುದ್ಧ ಅಲ್ಲಲ್ಲಿ ದನಿ ಎತ್ತಲಾಗುತ್ತಿದ್ದರೂ ಅದೇನೂ ಅಷ್ಟು ಪ್ರಬಲವಾಗಿರಲಿಲ್ಲ. ಈಗ ಕೇಂದ್ರ ಸರ್ಕಾರ ತನ್ನ ನೂತನ ರಾಷ್ಟ್ರೀಯ ಶಿಕ್ಷಣ ನೀತಿ ಸಿದ್ಧಪಡಿಸಿ ಅದರ ಕರಡನ್ನು ರಾಜ್ಯಗಳ ಪರಿಶೀಲನೆಗೆ ಕಳಿಸಿದಾಗ ಮಹಾರಾಷ್ಟ್ರದಿಂದೀಚಿನ ದಕ್ಷಿಣದ ರಾಜ್ಯಗಳು ಕರಡಿನಲ್ಲಿಯ ಕಡ್ಡಾಯ ಹಿಂದಿ ಕಲಿಕೆಯನ್ನು ಪ್ರಬಲವಾಗಿ ವಿರೋಧಿಸಿದವು. ಪಶ್ಚಿಮ ಬಂಗಾಲವೂ ಕೂಡ. ಈಗ ಈ ರಾಜ್ಯಗಳಲ್ಲಿ ಜಾಗೃತಿಯಾಗಿದೆ. ಹಿಂದಿ ಎಂದರೆ ಅದು ಉತ್ತರ ಭಾರತೀಯರ ಭಾಷೆ. ಉತ್ತರದ ಭಾಷೆಯನ್ನು ನಾವೇಕೆ ಕಡ್ಡಾಯವಾಗಿ ಸ್ವೀಕರಿಸಬೇಕೆಂಬ ಭಾವನೆ ಈಗ ದಕ್ಷಿಣದವರೆಲ್ಲರಲ್ಲೂ ಮೂಡಿದೆ. ಕೇಂದ್ರ ಸರ್ಕಾರ ತನ್ನ ಇಲಾಖೆಗಳ ಮೂಲಕ ಹಿಂದಿಯನ್ನು ನಮ್ಮ ಮೇಲೆ ಹೇರುತ್ತಿದೆಯೆಂಬ ಮನೋಭಾವ ನಮ್ಮ ಜನರದ್ದಾಗಿದೆ. ಹೀಗಾಗಿಯೇ ಬೆಂಗಳೂರಿನಲ್ಲಿ ನಮ್ಮ ಮೆಟ್ರೊದಲ್ಲಿ ಹಿಂದಿ ಬರಹವನ್ನು ತೀವ್ರವಾಗಿ ವಿರೋಧಿಸಿದ್ದಾಯಿತು. ಹಿಂದಿಯ ವಿರುದ್ಧದ ನಮ್ಮ ಮನೋಭಾವ ಇನ್ನೂ ಬೆಳೆಯುತ್ತಲೇ ಇದೆ. ಇದಕ್ಕೆ ಇದೇ

**ಪ್ರಕಾಶ ದೇಶಪಾಂಡೆ**

ಮೊದಲ ಸಲ ಸರ್ಕಾರಿ ಮಟ್ಟದಲ್ಲೂ ಭಾರೀ ಬೆಂಬಲ ದೊರೆತಿದೆ. ಸ್ವತಃ ಮುಖ್ಯಮಂತ್ರಿ ಕುಮಾರಸ್ವಾಮಿ ಹಾಗೂ ಉಪಮುಖ್ಯಮಂತ್ರಿ ಡಾ॥ ಪರಮೇಶ್ವರ, ಮಾಜಿ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರೂ ಕೂಡ ಹಿಂದಿ ಹೇರಿಕೆ ವಿರೋಧಕ್ಕೆ ದನಿಗೂಡಿಸಿದ್ದು ವಿಶೇಷವೇ. ಇದೆಲ್ಲ ಹಿಂದಿಯ ರಾಮಾಯಣವಾಯಿತು. ಆದರೆ ಇದಕ್ಕಿಂತಲೂ ಅಪಾಯಕಾರಿ ರೀತಿಯಲ್ಲಿ ಇಂಗ್ಲಿಷು ಮಹಾಭಾರ ನಮ್ಮ ಮೇಲೆ ವಕ್ಕರಿಸುತ್ತಿದೆಯಲ್ಲ. ಇದಕ್ಕೇಕೆ ಯಾರೂ ಯಾವ ರೀತಿಯಲ್ಲೂ ವಿರೋಧಿಸುತ್ತಿಲ್ಲ? ರಾಜ್ಯದಲ್ಲಿ ಮೈತ್ರಿ ಸರ್ಕಾರ ಅಧಿಕಾರಕ್ಕೆ ಬಂದು ಕುಮಾರಸ್ವಾಮಿ ಅವರು ಮುಖ್ಯಮಂತ್ರಿಯಾದ ಹೊಸದರಲ್ಲೇ ರಾಜ್ಯದಲ್ಲಿ ಸರ್ಕಾರವೇ ೧,೦೦೦ ಹೊಸ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆಯುವ ವಿಚಾರವನ್ನು ಪ್ರಸ್ತಾಪಿಸಿ ಆಗಾಗ ಅದರ ಬಗ್ಗೆ ಮಾತನಾಡುತ್ತಿದ್ದರು. ಆದರೆ ಅದು ಬಹುಬೇಗನೇ ಮೂರ್ತ ಸ್ವರೂಪ ಪಡೆಯುವುದೆಂದು ಯಾರೂ ನಿರೀಕ್ಷಿಸಿರಲಿಲ್ಲ. ಕಳೆದ ಜನವರಿಯಲ್ಲಿ ಧಾರವಾಡದಲ್ಲಿ ಜರುಗಿದ ಕನ್ನಡ ಸಾಹಿತ್ಯ ಪರಿಷತ್ತಿನ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ೧,೦೦೦ ಹೊಸ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ಸರ್ಕಾರವೇ ಪ್ರಾರಂಭಿಸುವುದನ್ನು ಮತ್ತೆ ಪ್ರಸ್ತಾಪಿಸಿದ ಮುಖ್ಯಮಂತ್ರಿ ಕುಮಾರಸ್ವಾಮಿಯವರು ಈ ಶಾಲೆಗಳನ್ನು ಇದೇ ಶೈಕ್ಷಣಿಕ ವರ್ಷದಿಂದ (ಇದೇ ಜೂನ್‌ನಿಂದ) ಆರಂಭಿಸುವುದಾಗಿಯೂ ಪ್ರಕಟಿಸಿದರು. ಆಗ ವೇದಿಕೆಯ ಮೇಲಿದ್ದ ಸಮ್ಮೇಳನದ ಸರ್ವಾಧ್ಯಕ್ಷ ಡಾ॥ ಚಂದ್ರಶೇಖರ ಕಂಬಾರ, ಹಿರಿಯ ಸಾಹಿತಿ ಚಂಪಾ ಅವರೂ ಸೇರಿದಂತೆ ಅನೇಕರು ಮುಖ್ಯಮಂತ್ರಿಯವರ ಆ ಪ್ರಸ್ತಾವನೆಯನ್ನು ವಿರೋಧಿಸಿದರು. ಸಭಿಕರಿಂದಲೂ ಕೂಡ ಭಾರೀ ವಿರೋಧ ಬಂದಿತು, ಘೋಷಣೆಗಳೂ ಮೊಳಗಿದವು. ಸನ್ನಿವೇಶ ಅರಿತ ಮುಖ್ಯಮಂತ್ರಿ ಕುಮಾರಸ್ವಾಮಿಯವರು ತಕ್ಷಣ "ಈ ಕುರಿತು ಒಮ್ಮೆಲೆ ನಿರ್ಣಯ ಕೈಕೊಳ್ಳುವುದಿಲ್ಲವೆಂದೂ ಮುಂದಿನ ಎಂಟ್ಹತ್ತು ದಿನಗಳಲ್ಲಿ ಬೆಂಗಳೂರಿನಲ್ಲಿ ಡಾ॥ ಕಂಬಾರ, ಚಂಪಾ ಸೇರಿದಂತೆ ನಾಡಿನ ಹಿರಿಯ ಸಾಹಿತಿಗಳ ಹಾಗೂ ಕಸಾಪ ಸೇರಿದಂತೆ ವಿವಿಧ ಕನ್ನಡ ಸಂಘಟನೆಗಳ ಪ್ರಮುಖರ ಸಭೆ ಕರೆದು ಇವರೆಲ್ಲರೊಂದಿಗೆ ಸಮಾಲೋಚಿಸಿ ಇವರುಗಳ ಸಲಹೆ ಪಡೆದು ನಿರ್ಧರಿಸುವುದಾಗಿ" ಘೋಷಿಸಿ ಅಲ್ಲಿಯ ವಿರೋಧವನ್ನು ತತ್ಕಾಲ ಶಾಂತವಾಗಿಸಿದರು. ಆ ನಂತರ ಮುಖ್ಯಮಂತ್ರಿಯವರು ಈ ವಿಷಯದ ಕುರಿತು ಹಿರಿಯ ಸಾಹಿತಿಗಳ, ಕನ್ನಡ ಸಂಘಟನೆಗಳವರ ಸಭೆ ಕರೆದರೋ ಇಲ್ಲವೋ ಇಂದಿನವರೆಗೂ ತಿಳಿಯಲೇ ಇಲ್ಲ. ಆದರೆ ಕಳೆದ ತಿಂಗಳು ಸರ್ಕಾರ ಧಿಡೀರನೇ ೧,೦೦೦ ನೂತನ ಇಂಗ್ಲಿಷ್ ಮಾಧ್ಯಮದ ಶಾಲೆಗಳನ್ನು ಪ್ರಾರಂಭಿಸಿ ಈಗ ಇವುಗಳನ್ನು ಆರಂಭಿಸಿಯೂಬಿಟ್ಟಿದೆ. ಈಗ ತಮ್ಮ ಮಕ್ಕಳನ್ನು ಈ ಹೊಸ ಇಂಗ್ಲಿಷ್ ಶಾಲೆಗಳಿಗೆ ಸೇರಿಸಲು ಪಾಲಕರು ಎಲ್ಲೆಡೆ ಸರತಿಯ ಸಾಲಿನಲ್ಲಿ ನಿಂತಿದ್ದಾರೆ. ಈ ಒಂದು ಸಾವಿರ ಶಾಲೆಗಳ ಪೈಕಿ ಕನಿಷ್ಠ ಮುನ್ನೂರು ಶಾಲೆಗಳಲ್ಲಿ ಹೆಚ್ಚಿನ ಬೇಡಿಕೆ ಬಂದಿದೆ. ಈ ಆಂಗ್ಲ ಶಾಲೆಗಳಿಗೀಗ ಕನ್ನಡದ ಮಕ್ಕಳ ನೂಕುನುಗ್ಗಲು.

"ಸರ್ಕಾರ ಪ್ರಾರಂಭಿಸಿರುವ ಹೊಸ ೧,೦೦೦ ಇಂಗ್ಲಿಷ್ ಮಾಧ್ಯಮದ ಶಾಲೆಗಳಿಗೆ ಪಾಲಕರ ಸ್ಪಂದನೆ ಉತ್ತಮವಾಗಿದ್ದು ತಮ್ಮ ಮಕ್ಕಳನ್ನು ಈ ಶಾಲೆಗಳಿಗೆ ಸೇರಿಸಲು ಪೋಷಕರು ತುದಿಗಾಲ ಮೇಲೆ ಕ್ಯೂನಲ್ಲಿ ನಿಂತಿದ್ದಾರೆಂದು" ಶಿಕ್ಷಣ ಇಲಾಖೆಯ ಹಿರಿಯ ಅಧಿಕಾರಿಗಳು ತಿಳಿಸಿದ್ದಾರೆ. ಈ ಶಾಲೆಗಳಲ್ಲಿ ಓರ್ವ ಶಿಕ್ಷಕನಿಗೆ ೩೦ ವಿದ್ಯಾರ್ಥಿಗಳು ಇರಬೇಕೆಂದು ಸರ್ಕಾರ ನಿಯಮ ರೂಪಿಸಿದ್ದು ಇದರಿಂದಾಗಿ ಮಕ್ಕಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಸೇರ್ಪಡೆ ಮಾಡಿಕೊಳ್ಳಲು ಆಗುತ್ತಿಲ್ಲವೆಂದೂ ಈ ನಿಯಮ ಸಡಿಲಿಸಿ ಇದನ್ನು ೪೦ ವಿದ್ಯಾರ್ಥಿಗಳಿಗೆ ಓರ್ವ ಶಿಕ್ಷಕನಂತೆ ಮಾರ್ಪಡಿಸುವಂತೆ ಪಾಲಕರು ಈಗ ಸರಕಾರವನ್ನು ಒತ್ತಾಯಿಸುತ್ತಿದ್ದಾರೆ. ಮಾನ್ಯ ಕುಮಾರಸ್ವಾಮಿ ಅವರು ಬೇಡಿಕೆ ಬಂದಿರುವ ಆಂಗ್ಲ ಮಾಧ್ಯಮ ಸರ್ಕಾರಿ ಶಾಲೆಗಳಲ್ಲಿ ನುರಿತ ಶಿಕ್ಷಕರು ಲಭ್ಯವಿದ್ದಲ್ಲಿ ಇನ್ನೂ ಒಂದು ಹೆಚ್ಚುವರಿ ತರಗತಿ ಆರಂಭಿಸುವಂತೆ ಶಿಕ್ಷಣ ಅಧಿಕಾರಿಗಳಿಗೆ ಸೂಚಿಸಿದ್ದಾರೆ. ಹೆಚ್ಚುವರಿ ತರಗತಿ ಪ್ರಾರಂಭಿಸಿದರೆ ಇನ್ನೂ ೯,೦೦೦ ಕನ್ನಡ ಮಕ್ಕಳಿಗೆ ಆಂಗ್ಲ ಮಾಧ್ಯಮದಲ್ಲಿ ಪ್ರವೇಶಾವಕಾಶ ಲಭಿಸಿದಂತಾಗುತ್ತದೆ. ಇದರರ್ಥ ಎಂದರೆ ಜನರಿಗೆ ಕನ್ನಡ ಶಾಲೆಗಳು ಬೇಕಿಲ್ಲ, ಇಂಗ್ಲಿಷ್ ಶಾಲೆಗಳೇ ಬೇಕು ಎನ್ನುವುದು ಸ್ಪಷ್ಟ. ಶಾಲೆಗಳಿಗೆ ಜನರಿಂದ ದೊರೆತ ಪ್ರೋತ್ಸಾಹ ಕಂಡು ಸರ್ಕಾರ ಮುಂದಿನ ವರ್ಷ ಮತ್ತಷ್ಟು ಹೆಚ್ಚು ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆಯುವುದರಲ್ಲಿ ಸಂದೇಹವಿಲ್ಲ. ಆಗ ಕನ್ನಡ ಶಾಲೆಗಳಿಗೆ ಹೋಗಬೇಕಾದ ಮಕ್ಕಳು ನೇರವಾಗಿ ಇಂಗ್ಲಿಷ್ ಶಾಲೆಗಳತ್ತಲೇ ಮುಖ




ಮಾಡುತ್ತಾರೆ. ಕನ್ನಡ ಶಾಲೆಗಳು ಖಾಲಿಖಾಲಿಯಾಗಿ ಇರಬೇಕಾದ ಕೆಟ್ಟ ಪರಿಸ್ಥಿತಿ ಮುಂದಿನ ದಿನಗಳಲ್ಲಿ ಉದ್ಭವವಾಗುವ ಆತಂಕವಿದೆ. ಪ್ರಸಕ್ತ ವರ್ಷವೇ ಕನ್ನಡ ಶಾಲೆಗಳಲ್ಲಿ ಮಕ್ಕಳ ಸಂಖ್ಯೆ ಕಡಿಮೆಯಾಗುವ ಎಲ್ಲ ಲಕ್ಷಣಗಳೂ ತೋರಿವೆ. ಇದು ಹೊಸ ಇಂಗ್ಲಿಷ್ ಮಾಧ್ಯಮ ಶಾಲೆಗಳಿಂದ ಆಗುವ ದುಷ್ಪರಿಣಾಮ.

ಸರ್ಕಾರವೇ ಆರಂಭಿಸಿರುವ ಹೊಸ ಇಂಗ್ಲಿಷ್ ಮಾಧ್ಯಮ ಶಾಲೆಗಳತ್ತ ಕನ್ನಡ ಮಕ್ಕಳ ದಂಡೇ ಹರಿದುಬರುತ್ತಿರುವುದನ್ನು ಕಂಡು ಈ ಯೋಜನೆ ಕಾರ್ಯಗತಗೊಳಿಸಿದ ಮುಖ್ಯಮಂತ್ರಿ ಕುಮಾರಸ್ವಾಮಿಯವರಿಗೆ ಅಪಾರ ಸಂತೋಷ ಆಗಿರಬಹುದು. ಆದರೆ ಅವರೇನಾದರೂ ಇದರಿಂದ ಕನ್ನಡ ಶಾಲೆಗಳ ಮೇಲೆ ಆಗುವ ದುಷ್ಪರಿಣಾಮದ ಕುರಿತು ಚಿಂತಿಸಿದ್ದಾರೆಯೇ? ಈ ಶಾಲೆಗಳನ್ನು ಆರಂಭಿಸುವ ಬಗ್ಗೆ ನಾಡಿನ ಹಿರಿಯ ಸಾಹಿತಿಗಳು, ಕನ್ನಡ ಸಂಘಟನೆಗಳ ಪ್ರಮುಖರೊಂದಿಗೆ ಸಮಾಲೋಚಿಸಿ ಅವರಿಂದ ಸಲಹೆ ಪಡೆದರೆ? ಹಾಗಾದರೆ ಅವರುಗಳು ನೀಡಿದ ಸಲಹೆಗಳೇನು? ಅವರೇನಾದರೂ ಸರ್ಕಾರದ ನಿರ್ಧಾರ ಸ್ವಾಗತಿಸಿ ಬೆನ್ನು ತಟ್ಟಿದರೆ? ಇವರುಗಳು ನೀಡಿದ ಸಲಹೆ ಸೂಚನೆಗಳನ್ವಯವೇ ಸರ್ಕಾರ ಹೊಸದಾಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆಯಿತೇ?

ಈ ಎಲ್ಲ ಪ್ರಶ್ನೆಗಳಿಗೆ ಈಗ ಉತ್ತರಿಸಬೇಕಾದವರು ನಾಡಿನ ಹಿರಿಯ ಸಾಹಿತಿಗಳು ಹಾಗೂ ಕನ್ನಡಪರ ಸಂಘಟನೆಗಳ ಪ್ರಮುಖರು. ಸರ್ಕಾರವೂ ಕೂಡ ಉತ್ತರದಾಯಿಯೇ. ಧಾರವಾಡದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಈ ಪ್ರಸ್ತಾವನೆ ವಿರೋಧಿಸಿದ ಹಿರಿಯ ಸಾಹಿತಿಗಳು ಈಗೇಕೆ ಮಾತನಾಡುತ್ತಿಲ್ಲ? ಕನ್ನಡ ರಕ್ಷಣೆಯ ಜವಾಬ್ದಾರಿ ಹೊತ್ತಿರುವ ಕನ್ನಡ ಸಾಹಿತ್ಯ ಪರಿಷತ್ತು ಏಕೆ ಮೌನವಾಗಿದೆ? ಕನ್ನಡಪರ ಸಂಘಟನೆಗಳ ಪ್ರಮುಖರು ಏಕೆ ಬಾಯಿ ಬಿಡುತ್ತಿಲ್ಲ? ಕನ್ನಡದ ಹುಟ್ಟು ಹೋರಾಟಗಾರರು ಏನು ಮಾಡುತ್ತಿದ್ದಾರೆ? ಕನ್ನಡ ಶಾಲೆಗಳನ್ನು ಕ್ರಮೇಣ ಸಾಯಿಸಿ ಇಂಗ್ಲಿಷ್ ಶಾಲೆಗಳನ್ನು ಸರ್ಕಾರವೇ ಬೆಳೆಸುವ ಕರ್ನಾಟಕ ಸರಕಾರದ ನೀತಿ ಎಂತಹದು? ಮುಂದಿನ ದಿನಗಳಲ್ಲಿ ಕನ್ನಡ ಶಾಲೆಗಳನ್ನು ಮುಚ್ಚುವ ಪರಿಸ್ಥಿತಿಯನ್ನು ಸರ್ಕಾರವೇ ಹುಟ್ಟುಹಾಕುತ್ತಿರುವುದಕ್ಕೆ ಏನೆನ್ನಬೇಕು? ಢಾಣಾಡಂಗುರವಾಗಿ ಕನ್ನಡ ವಿರೋಧಿ ನೀತಿ ಅನುಸರಿಸುತ್ತಿರುವ ಸರ್ಕಾರಕ್ಕೆ ಏನು ಮಾಡಬೇಕು? ಚೋದ್ಯವೆಂದರೆ ಸರ್ಕಾರದ ಹೊಸ ಇಂಗ್ಲಿಷ್ ಶಾಲೆಗಳ ಆರಂಭದ ವಿಚಾರದ ಬಗ್ಗೆ ಸಾಹಿತಿಗಳು, ಕನ್ನಡ ಸಂಘಟನೆಗಳ ಬಾಯಿಗೆ ಸರ್ಕಾರವೇ ಏನಾದರೂ ಬೀಗ ಜಡಿದಿದೆಯೇ? ಇವರುಗಳ ಮೌನ ಅರ್ಥವಾಗುತ್ತಿಲ್ಲ.

ಈಗ ಹೇಳಿ, ಕನ್ನಡ ಸಾಯಿಸಿ ಇಂಗ್ಲಿಷ್ ಬೆಳೆಸುವ ಸರ್ಕಾರದ ನೀತಿ ಸರಿಯೋ ಅಥವಾ ಕನ್ನಡದೊಂದಿಗೆ ಹಿಂದಿಯನ್ನೂ ಒಂದು ಭಾಷೆಯನ್ನಾಗಿ ಕಲಿಯಿರಿ ಎನ್ನುವ ಕೇಂದ್ರ ಸರ್ಕಾರದ ತ್ರಿಭಾಷಾ ಸೂತ್ರ ಸರಿಯೋ?

ಹಿಂದಿ ಈಗ ದೇಶವ್ಯಾಪಿ ಭಾಷೆಯಾಗಿದೆ. ಮೂರ್‍ನಾಲ್ಕು ರಾಜ್ಯಗಳನ್ನು ಹೊರತುಪಡಿಸಿದರೆ ಇನ್ನುಳಿದ ರಾಜ್ಯಗಳಲ್ಲಿ ಹಿಂದಿ ವಿರೋಧಿತನವಿಲ್ಲ. ದೇಶದ ಯಾವ ಮೂಲೆಗೆ ಹೋದರೂ ಹಿಂದಿ ಮಾತನಾಡುವವರು ಸಿಕ್ಕೇಸಿಗುತ್ತಾರೆ. ಕೊನೆಯಪಕ್ಷ ಹಿಂದಿ ಮಾತನಾಡುವ ರೈಲು, ಬಸ್ಸುಗಳ ಹಮಾಲಿಗಳು,

> ಭಾಷಾ ಮಾಧ್ಯಮ ಕುರಿತು ಚರ್ಚೆಗಾಗಿ ಈ ಲೇಖನ.
>
> ಪ್ರತಿಕ್ರಿಯೆಗಳಿಗೆ ಸ್ವಾಗತವಿದೆ.
>
> *– ಸಂಪಾದಕ*

ಕಾರ್ಮಿಕರಂತೂ ದೊರೆಯುತ್ತಾರೆ. ಅದೇ ಇಂಗ್ಲಿಷು ಮಾತನಾಡುವವರು? ಬೇರೆ ರಾಜ್ಯಗಳಿಗೆ ನಾವು ಹೋದಾಗ ನಾವು ಅಲ್ಲಿಯವರೊಂದಿಗೆ ಕನ್ನಡ ಯಾ ಠುಸ್‌ಪುಸ್ ಎಂದು ಇಂಗ್ಲಿಷಿನಲ್ಲಿ ಮಾತನಾಡಲು ಆಗುವುದೇ? ಅಲ್ಲಿ ನಮಗೆ ನೆರವಾಗುವುದು ಹಿಂದಿಯೇ ವಿನಾ ನಮ್ಮ ಕನ್ನಡವೂ ಅಲ್ಲ, ಇಂಗ್ಲಿಷೂ ಅಲ್ಲ.

ವಸ್ತುಸ್ಥಿತಿ ಹೀಗಿರುವಾಗ ತ್ರಿಭಾಷಾ ಸೂತ್ರ ವಿರೋಧಿಸುವುದೇಕೋ ತಿಳಿಯುತ್ತಿಲ್ಲ. ಹಿಂದಿ ರಾಷ್ಟ್ರಭಾಷೆಯೇ ಅಲ್ಲ ನಿಜ. ಇದರಿಂದ ನಮ್ಮ ಕನ್ನಡಕ್ಕೇನೂ ಅಪಾಯವಿಲ್ಲ. ಕನ್ನಡದ ಜತೆಜತೆಗೆಯೇ ಒಂದು ಭಾಷೆಯಾಗಿ ಹಿಂದಿ ಕಲಿಯುವುದರಲ್ಲಿ ಯಾವ ತಪ್ಪೂ ಇಲ್ಲ. ಇದರಿಂದ ಕನ್ನಡದ ಅಸ್ಮಿತೆಗೆ ಯಾವ ಧಕ್ಕೆಯೂ ಬರುವುದಿಲ್ಲ. ಕನ್ನಡದ ಅಸ್ಮಿತೆಗೆ ಧಕ್ಕೆ ಬರುತ್ತಿರುವುದು ಇಂಗ್ಲಿಷಿನಿಂದಲೆ ಹೊರತು ಹಿಂದಿಯಿಂದಲ್ಲ ಎನ್ನುವುದನ್ನು ಮೊದಲು ಪ್ರಜ್ಞಾವಂತ ಕನ್ನಡಿಗರು ತಿಳಿದುಕೊಳ್ಳಬೇಕು. ಈಗ ನಾವು ಪ್ರಬಲವಾಗಿ ವಿರೋಧಿಸಬೇಕಾಗಿರುವುದು ಸರ್ಕಾರದ ಇಂಗ್ಲಿಷ್ ಪರ ನಿಲುವನ್ನು; ಹೊಸದಾಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ಪ್ರಾರಂಭಿಸಿ ಕನ್ನಡ ಶಾಲೆಗಳಿಗೆ ಗದಾ ಪ್ರಹಾರ ಮಾಡುವ ಸರ್ಕಾರದ ಕನ್ನಡಕ್ಕೆ ಕುಠಾರಪ್ರಾಯವಾಗಿರುವ ನೀತಿಯನ್ನು. ಅಂತೆಯೇ ನಮಗೀಗ ಹಿಂದಿಗಿಂತಲೂ ಇಂಗ್ಲಿಷೇ ಅಪಾಯಕಾರಿ. ನಾವು ವಿರೋಧಿಸಬೇಕಾಗಿರುವುದು ಇಂಗ್ಲಿಷನ್ನೇ ವಿನಾ ಹಿಂದಿಯನ್ನಲ್ಲ.

ಕಳೆದ ಶುಕ್ರವಾರ ದಿ. ೧೪ರಂದು ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ನೂತನ ಆಂಗ್ಲ ಮಾಧ್ಯಮ ಶಾಲೆಗಳ ಉದ್ಘಾಟನೆ ನೆರವೇರಿಸಿ ಮಾತನಾಡಿದ ಮುಖ್ಯಮಂತ್ರಿ ಕುಮಾರಸ್ವಾಮಿಯವರು "ಆಂಗ್ಲ ಮಾಧ್ಯಮ ಶಾಲೆಗಳನ್ನು ಪ್ರಾರಂಭಿಸಿದ ಮಾತ್ರಕ್ಕೆ ನಾವು ಕನ್ನಡ ವಿರೋಧಿಗಳಲ್ಲ. ಕನ್ನಡದ ಬಗೆಗಿನ ನಮ್ಮ ಕಳಕಳಿಯನ್ನು ಯಾರೂ ಸಂಶಯದಿಂದ ನೋಡಬಾರದು. ಆಧುನಿಕ ಯುಗದಲ್ಲಿ ಇಂಗ್ಲಿಷ್ ಅನಿವಾರ್ಯವಾಗಿದ್ದು ಬಡ ಕುಟುಂಬದ ಮಕ್ಕಳಿಗೂ ಉತ್ತಮ ಶಿಕ್ಷಣ ದೊರಕಬೇಕೆಂಬುದೇ ಸರ್ಕಾರದ ಕಾಳಜಿ" ಎಂದು ಹೇಳಿದರಲ್ಲದೆ ಮುಂದಿನ ಬಾರಿ ಈ ಶಾಲೆಗಳಲ್ಲಿ ಹೆಚ್ಚುವರಿ ಪ್ರವೇಶಾವಕಾಶ ಕಲ್ಪಿಸುವುದಾಗಿಯೂ ಭರವಸೆ ನೀಡಿದರು.

ಈ ಹೇಳಿಕೆ ಏನನ್ನು ಸೂಚಿಸುತ್ತದೆ? ಈಗಿರುವ ನೂರಾರು ಕನ್ನಡ ಶಾಲೆಗಳಲ್ಲಿ ಮಕ್ಕಳಿಗೆ ಸೂಕ್ತ ಸೌಲಭ್ಯಗಳಿಲ್ಲ. ಶಾಲಾ ಕಟ್ಟಡಗಳು ಬಿದ್ದುಹೋಗುವ ಸ್ಥಿತಿಯಲ್ಲಿದ್ದು ಅವುಗಳ ದುರುಸ್ತಿಗೆ ಸರ್ಕಾರ ಹಣ ಕೊಡುತ್ತಿಲ್ಲ. ಕನ್ನಡ ಶಾಲೆಗಳೇ ದುಸ್ಥಿತಿ ಯಲ್ಲಿರುವಾಗ ಹೊಸದಾಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ಪ್ರಾರಂಭಿಸುವುದು ಯಾವ ಪುರುಷಾರ್ಥಕ್ಕೆ? ಇವುಗಳ ಅವಶ್ಯಕತೆಯಾದರೂ ಏನಿದೆ? ಇದಕ್ಕಿಂತ ಕನ್ನಡ ಶಾಲೆಗಳಲ್ಲಿ ಇಂಗ್ಲಿಷನ್ನು ಒಂದು ಭಾಷೆಯಾಗಿ ಏಕೆ ಕಲಿಸಬಾರದು? ಇದರಿಂದ ಬಡ ಮಕ್ಕಳು ಇಂಗ್ಲಿಷನ್ನು ಸಹ ಕಲಿಯುತ್ತಾರಲ್ಲ. ಇದರಿಂದಾಗಿ ಸರ್ಕಾರದ ಸದುದ್ದೇಶವೂ ಈಡೇರುತ್ತದಲ್ಲ. ಈ ದಿಶೆಯಲ್ಲಿ ಸರ್ಕಾರ ಏಕೆ ವಿಚಾರ ಮಾಡಬಾರದು?

ಕನ್ನಡ ಪ್ರಾಥಮಿಕ ಶಾಲೆಗಳಲ್ಲಿ ಇಂಗ್ಲಿಷ್‌ಅನ್ನು ಒಂದು ಭಾಷೆಯನ್ನಾಗಿ ಕಲಿಸಲು ಯಾರ ತಕರಾರೂ ಇಲ್ಲ. ಆದರೆ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆಯುವುದು ಸರಿಯಲ್ಲ. ಮುಂದಿನ ವರ್ಷ ಇಂಗ್ಲಿಷ್ ಮಾಧ್ಯಮ ಶಾಲೆಗಳಲ್ಲಿ ಹೆಚ್ಚುವರಿ ಪ್ರವೇಶಾವಕಾಶ ನೀಡಿದರೆ ಕನ್ನಡ ಶಾಲೆಗಳ ಪರಿಸ್ಥಿತಿ ಏನು? ಇದರಿಂದ ಕನ್ನಡಕ್ಕೆ, ಕನ್ನಡ ಶಾಲೆಗಳಿಗೆ ಆಪತ್ತು ತಪ್ಪಿದ್ದಲ್ಲ. ಮುಖ್ಯಮಂತ್ರಿ ಕುಮಾರಸ್ವಾಮಿ ಯವರು ಮೊಂಡಾಟಕ್ಕೆ ಬಿದ್ದವರಂತೆ ಈ ವಿಷಯದಲ್ಲಿ ವರ್ತಿಸುತ್ತಿರುವುದು ಖಂಡನೀಯ. ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ಆರಂಭಿಸುವುದನ್ನು ಬಲವಾಗಿ ವಿರೋಧಿಸಿದ್ದ ಮಾಜಿ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರೇಕೆ ಈಗ ಮೌನವಾಗಿದ್ದಾರೆ? ಸರ್ಕಾರದಲ್ಲಿರುವ ಇತರ ಸಚಿವರು, ಶಾಸಕರು, ವಿಪಕ್ಷ ಧುರೀಣರು ಅದೇಕೆ ಸುಮ್ಮನಿದ್ದಾರೆ? ಅರ್ಥವಾಗುತ್ತಿಲ್ಲ. ಇವರಿಗೆಲ್ಲ ಕನ್ನಡ ಶಾಲೆಗಳನ್ನು ರಕ್ಷಿಸುವ ಕಾಳಜಿ ಇಲ್ಲವೆ?

ಕನ್ನಡದ ಅಸ್ಮಿತೆಗಾಗಿ, ಕನ್ನಡ ಶಾಲೆಗಳ ಉಳಿವಿಗಾಗಿ ಹಿರಿಯ ಕನ್ನಡ ಸಾಹಿತಿಗಳು ಮನೆಯಿಂದ ಹೊರಬಂದು ಸರ್ಕಾರದ ಕನ್ನಡ ನಿರ್ಲಕ್ಷ್ಯ ನೀತಿಯ ಹಾಗೂ ಇಂಗ್ಲಿಷ್ ಉದ್ಧಾರದ ನೀತಿಯ ವಿರುದ್ಧ ಬೀದಿಗಿಳಿಯಬೇಕು. ಸರ್ಕಾರದ ಅನುದಾನ ದೊರೆಯುತ್ತದೆಂದು ಸರ್ಕಾರದ ಮರ್ಜಿ ಕಾಯದೇ ಕನ್ನಡ ಸಾಹಿತ್ಯ ಪರಿಷತ್ತು ಕೂಡ ಹೋರಾಟಕ್ಕಿಳಿಯಬೇಕಿದೆ. ಸಿಕ್ಕಸಿಕ್ಕವುಗಳಿಗೆಲ್ಲ ಹೋರಾಟ ನಡೆಸುವ ರಾಜ್ಯದ ಪ್ರಮುಖ ಕನ್ನಡ ಸಂಘಟನೆಗಳು, ಹುಟ್ಟುಹೋರಾಟಗಾರರು ಹೋರಾಟದ ಹೊಸ ಮಟ್ಟು ತೋರಿಸಬೇಕು. ಅಂತೆಯೇ ಹಿಂದಿ ವಿರೋಧ ಬದಿಗಿರಿಸಿ ಇಂಗ್ಲಿಷ್ ಮಾಧ್ಯಮ ಶಾಲೆ ವಿರೋಧಿಸೋಣ ಕನ್ನಡದ ಅಸ್ಮಿತೆಗಾಗಿ, ಕನ್ನಡ ಶಾಲೆಗಳ ಉಳಿವಿಗಾಗಿ.

**ಪ್ರಕಾಶ ದೇಶಪಾಂಡೆ**
ಹಿರಿಯ ಪತ್ರಕರ್ತರು, ಲೇಖಕರು
ಹುಕ್ಕೇರಿ

# ವ್ಯಾಪ್ತಿ ಪ್ರದೇಶದಿಂದ ಹೊರ ಉಳಿದವರು




ಅವರು
ಅಳುವರು
ಲೋಕವೇ ಸತ್ತಂತೆ
ನಗುವರು
ಕಾರಣವೇ ಬೇಡವೆಂಬಂತೆ

ಅವರು
ಜೀವವಿದ್ದೂ ಶವವಾದರು
ಯಾರ ಅರಿವಿಗೂ ಬಾರದಂತೆ

ಅವರು
ಮಾತು ಮರೆತರು
ಜಗದ ಭಾಷೆ ಅರಿಯಲಾಗದೆ

ಅವರು
ಇರುವರು
ನಮ್ಮೊಳಗಿನ ಕೇಡಿಗೆ
ಪ್ರತಿಬಿಂಬವಾಗಿ
ನಮ್ಮೆಲ್ಲರ ಆತ್ಮಸಾಕ್ಷಿಯ
ಸಾವಿನ ರೂಪವಾಗಿ

ಅವರು
ವ್ಯಾಪ್ತಿ ಪ್ರದೇಶದಿಂದ
ಹೊರ ಉಳಿದವರು
ದಂತಗೋಪುರಗಳಿಂದ
ಆಚೆಗೆ ತಳ್ಳಲ್ಪಟ್ಟವರು

**ಎಚ್. ಕೆ. ಶರತ್**
ಇ/ಮ ಜಿ. ಆರ್. ಕಂಚೇಗೌಡ
ಡೆಂಟಲ್ ಕಾಲೇಜು ಹಿಂಭಾಗ, ವಿವೇಕಾನಂದ ರಸ್ತೆ
ವಿದ್ಯಾನಗರ, ಹಾಸನ – ೫೭೩೨೦೧



# ಸಂಜೆಯ ಆಕಾಶಕ್ಕೆ ಶುಕ್ರಗ್ರಹದ ಆಗಮನ

ಇದೀಗ ಸಂಜೆಯ ಆಕಾಶದಲ್ಲಿ ಪೂರ್ವದಲ್ಲಿ ಗುರು ಮತ್ತು ಶನಿ ಎರಡೂ ರಾರಾಜಿಸುತ್ತಿವೆ. ಗುರುಗ್ರಹ ವೃಶ್ಚಿಕವನ್ನು ದಾಟಿದೆ; ಆದರೆ ಧನುವನ್ನು ಇನ್ನೂ ಪ್ರವೇಶಿಸಿಲ್ಲ. ಅದಿರುವ ಭಾಗ ಉರಗಧರ (ಒಫಿಯೂಕಸ್) ಎಂಬ ನಕ್ಷತ್ರಪುಂಜಕ್ಕೆ ಸೇರಿದೆ. ಶನಿ ಧನು ರಾಶಿಯಲ್ಲಿದೆ. ನಮ್ಮ ಗೆಲಾಕ್ಸಿ ಆಕಾಶಗಂಗೆಯ ಕೇಂದ್ರ ಆಕಾಶದ ಈ ಭಾಗದಲ್ಲಿ ಇರುವುದರಿಂದ ಇಲ್ಲಿ ನೆಬ್ಯುಲಾಗಳು ಮತ್ತು ನಕ್ಷತ್ರ ಗುಚ್ಛಗಳು ಹೇರಳವಾಗಿವೆ. ಈ ಧನುರಾಶಿಯ ಪ್ರಖರ ನಕ್ಷತ್ರಗಳಿಂದ ಕಾಫಿ ಕೆಟಲ್ ಅನ್ನು ಚಿತ್ರಿಸಿಕೊಳ್ಳಬಹುದು. ಇಂಗ್ಲಿಷ್‌ನಲ್ಲಿ ಟೀ ಪಾಟ್ ಎನ್ನುತ್ತಾರೆ. ಇದನ್ನು ಗುರುತಿಸಿ ಕೊಳ್ಳಲು ೧೨ರ ಸಂಜೆ ಒಳ್ಳೆಯ ಅವಕಾಶವಿದೆ. ಅಂದು ಚಂದ್ರ ಮತ್ತು ಶನಿ ಅಕ್ಕ ಪಕ್ಕದಲ್ಲಿಯೇ ಇರುತ್ತವೆ. ವಾಸ್ತವದಲ್ಲಿ ಅಂದು (ನಮ್ಮ) ಹಗಲಿನಲ್ಲಿ ಚಂದ್ರ ಶನಿಗ್ರಹವನ್ನು ಮರೆಮಾಡುವ ಪುಟ್ಟ ಗ್ರಹಣ (ಆಚ್ಛಾದನೆ) ನಡೆಯಲಿದೆ. ಇದನ್ನು ನಮಗಿಂತ ಪೂರ್ವ ದಲ್ಲಿ ಇರುವವರು (ಉದಾ: ಆಸ್ಟ್ರೇಲಿಯಾ) ನೋಡುವುದು ಸಾಧ್ಯ. ಈ ತಿಂಗಳಲ್ಲಿ ಎರಡು ಅಮಾವಾಸ್ಯೆಗಳಿವೆ. ಮೊದಲ ನೆಯದು ಒಂದನೇ ತಾರೀಖು; ಎರಡನೆಯ ೩೦ನೆಯ ತಾರೀಖಿನ ಅಮಾವಾಸ್ಯೆಯಂದೇ ಚಂದ್ರ – ಮತ್ತು ಭೂಮಿ ನಡುವಿನ ಅಂತರ ಕನಿಷ್ಠವಾಗಲಿದೆ. ಆದ್ದರಿಂದ "ಸೂಪರ್ ಮೂನ್" ಎಂಬ ಹುಣ್ಣಿಮೆಗೆ ಸಮಾನ ವಾದದ್ದು ಎಂದು ಹೇಳಬಹುದು. ಅಂದರೆ ಕಡಲಿನ ಉಬ್ಬರ ಇಳಿತಗಳು ಸಾಮಾನ್ಯ ಅಮಾವಾಸ್ಯೆಗಿಂತ ಜೋರು ಎನ್ನಬಹುದು.

ಉ
ಲಘು ಸಪ್ತರ್ಷಿ ಮಂಡಲ
ಸಪ್ತರ್ಷಿ ಮಂಡಲ
ರಾಜ ಹಂಸ
ಅಭಿಜಿತ್
ಭೀಮ
ಕಿರೀಟ
ಸ್ವಾತಿ
ಪೂ
ಗರುಡ
ಪ
ಕನ್ಯಾ
ಉರಗಧರ
ಚಿತ್ರಾ
ತುಲಾ
ಶನಿ
ಗುರು
ಮಕರ
ಹಸ್ತಾ
ಧನು
ವೃಶ್ಚಿಕ
ಕಿನ್ನರ
ತ್ರಿಶಂಕು
ದ

ಈ ಎರಡೂ ಗ್ರಹಗಳ ಜೊತೆಗೆ ಶುಕ್ರಗ್ರಹವೂ ಸಂಜೆಯ ಆಕಾಶಕ್ಕೆ ತಿಂಗಳ ಕೊನೆಗೆ ಸೇರ್ಪಡೆಯಾಗಲಿದೆ. ಕಳೆದ ತಿಂಗಳವರೆಗೂ ಮುಂಜಾವಿನಲ್ಲಿ ಕಾಣುತ್ತಿದ್ದ ಅದು ಈಗ ಸೂರ್ಯನನ್ನು ಆಚೆ ಬದಿಯಿಂದ ಹಾದು ಬರುತ್ತಿರುವುದರಿಂದ ಹೀಗೆ ಸ್ಥಳಪಲ್ಲಟವಾದಂತೆ ಕಾಣುತ್ತದೆ. ಪಶ್ಚಿಮದ ಅಂಚಿನಲ್ಲಿ ದಿನೇ ದಿನೇ ಮೇಲೇರುವ ಅದು ೨೪ರಂದು ಮಂಗಳ ಗ್ರಹವನ್ನು ಕೇವಲ ಅರ್ಧ ಡಿಗ್ರಿಗಿಂತಲೂ ಕಡಿಮೆ ಅಂತರದಲ್ಲಿ ಹಾದುಬರುವುದಾದರೂ ಈ ಘಟನೆಯನ್ನು ನೋಡುವುದು ಸಾಧ್ಯವಾಗುವುದಿಲ್ಲ. ಏಕೆಂದರೆ ಸಂಧ್ಯಾ ಪ್ರಕಾಶದಲ್ಲಿ ಅವೆರಡೂ ಕರಗಿ ಹೋಗುವುವು. ತಿಂಗಳ ಕೊನೆಗೆ ಮಂಗಳ ಸೂರ್ಯನತ್ತ ಸರಿದರೆ ಶುಕ್ರ ಮೇಲೇರಿ ಮುಂದಿನ ತಿಂಗಳಿನಿಂದ ಪಶ್ಚಿಮದ ಅಂಚಿನಲ್ಲಿ ಫಳಗುಟ್ಟತೊಡಗುವುದು.



ಆಗಸ್ಟ್ ೧೨ ಧನುರಾಶಿಯಲ್ಲಿ ಶನಿ – ಚಂದ್ರ ಜೋಡಿ

ಬುಧ ಗ್ರಹ ತಿಂಗಳ ಮೊದಲ ವಾರ ಮುಂಜಾವಿನಲ್ಲಿ ಕಾಣು ವುದು. ೧೦ರಂದು ಗರಿಷ್ಠ ಕೋನೋನ್ನತಿ; ಪೂರ್ವದ ಅಂಚಿನಲ್ಲಿ ಸೂರ್ಯೋದಯಕ್ಕೆ ಮುನ್ನ ಕಾಣುವುದು.

ಮಂಗಳ ಈ ತಿಂಗಳು ಕಾಣುವುದಿಲ್ಲ ಏಕೆಂದರೆ ತಿಂಗಳ ಕೊನೆಗೆ ಅದು ಸೂರ್ಯನನ್ನು ಆಚೆ ಬದಿಯಿಂದ ಹೊರಳಿ ಬರುತ್ತದೆ, ಆ ಮುಂದೆ ಅದು ಮುಂಜಾವಿನಲ್ಲಿ ಕಾಣುತ್ತದೆ. ಮಂಗಳ ಮತ್ತು ಶುಕ್ರ ಎರಡೂ ಸೂರ್ಯನನ್ನು ಹಾದು ಬಂದವು; ಆದರೆ ಒಂದು ಮುಂಜಾವಿನಿಂದ ಸಂಜೆಗೆ ಬಂದಿತು; ಇನ್ನೊಂದು ಸಂಜೆಯಿಂದ ಮುಂಜಾವಿಗೆ ಸರಿಯಿತು. ಈ ಬಗೆಯ ಅಂಶಗಳನ್ನು ಆಧಾರವಾಗಿಟ್ಟುಕೊಂಡು ಯಾವ ಗ್ರಹಗಳು ಸೂರ್ಯನಿಗಿಂತ ದೂರವಿವೆ ಎಂಬುದನ್ನು ಪತ್ತೆ ಮಾಡಿಕೊಂಡಿದ್ದ ನಮ್ಮ ಪೂರ್ವಜರು ನಿಜಕ್ಕೂ ಪ್ರತಿಭಾನ್ವಿತರೇ ಅಲ್ಲವೇ?

ಈ ತಿಂಗಳಲ್ಲಿ ಶುಭ್ರ ಆಕಾಶ ದೊರಕುವುದು ದುರ್ಲಭವೇ ಆದರೂ ಅವಕಾಶ ಸಿಕ್ಕಾಗ ಆಕಾಶ ಗಂಗೆಯ ದಕ್ಷಿಣ ಭಾಗವನ್ನು ನೋಡಲು ಮರೆಯದಿರಿ. ವೃಶ್ಚಿಕ, ಧನು – ಈ ರಾಶಿಗಳಲ್ಲಿ ಕೇಂದ್ರ ಭಾಗವಿದೆ. ಒಂದು ಶಾಖೆ ತ್ರಿಶಂಕು (ಕ್ರಕ್ಸ್), ಕಿನ್ನರ (ಸೆಂಟಾರಸ್) ಇವುಗಳ ಮೂಲಕ ಹಾದುಹೋಗುತ್ತದೆ. ಇನ್ನೊಂದು ಉತ್ತರಕ್ಕೆ ಗರುಡ (ಅಕ್ವಿಲಾ), ರಾಜಹಂಸ (ಸಿಗ್ನಸ್) ಮೂಲಕ ಹಾದುಹೋಗುತ್ತದೆ. ಈ ಹರಿವಿನಲ್ಲಿ ಅನೇಕ ನೆಬ್ಯುಲಾ ಗಳು, ನಕ್ಷತ್ರ ಗುಚ್ಛಗಳೂ ಇವೆ. ಪೂರ್ವದಲ್ಲಿ ಚಿತ್ರಾ, ಸ್ವಾತಿ ಹೊರತಾಗಿ ಪ್ರಖರ ನಕ್ಷತ್ರಗಳೂ ಕಡಿಮೆ ಎಂಬು ದನ್ನು ಗಮನಿಸಿ. ಸ್ವಾತಿಯ ಪಕ್ಕದ ಕಿರೀಟ (ಕರೋನ ಬೋರಿಯೋಲಿಸ್) ಎಂಬುದು ಕಿರೀಟದಂತೆಯೇ ಇದೆ; ಹಾಗೆಯೇ ಚಿತ್ರಾದ ದಕ್ಷಿಣಕ್ಕಿರುವ ಹಸ್ತಾ ಎಂಬುದು ಅಂಗೈನಂತೆಯೇ ಇದೆ ಎಂಬುದನ್ನೂ ಕಾಣಬಹುದು. ಉತ್ತರದಲ್ಲಿ ಸಪ್ತರ್ಷಿ ಮಂಡಲ ಮತ್ತು ಲಘು ಸಪ್ತರ್ಷಿ ಮಂಡಲ ಎರಡನ್ನೂ ಕಾಣಬಹುದು.

ಆಗಸ್ಟ್ ೧೨ರಂದು ಗರಿಷ್ಠ ಮುಟ್ಟುವ ಪರ್ಸಿಯೈಡ್ ಉಲ್ಕಾವೃಷ್ಟಿ ಒಂದು ವಿಶೇಷ ಆಕರ್ಷಣೆ.

### ಖಗೋಳ ದಿನಚರಿ

ಆಗಸ್ಟ್ ೧ ಅಮಾವಾಸ್ಯೆ
೨ ಭೂಮಿ ಚಂದ್ರ ನಡುವೆ ಕನಿಷ್ಠ ದೂರ
೭ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೯ ಚಂದ್ರ – ಗುರು ಜೋಡಿ*
೧೦ ಬುಧ ಗ್ರಹದ ಗರಿಷ್ಠ ಕೋನೋನ್ನತಿ*
೧೧ ಗುರುಗ್ರಹದ ಹಿನ್ನಡೆ ಮುಕ್ತಾಯ
೧೨ ಶನಿ– ಚಂದ್ರ ಜೋಡಿ*
೧೪ ಶುಕ್ರಗ್ರಹದ ಯುತಿ (ಸೂರ್ಯನೊಡನೆಯೇ ಉದಯ – ಅಸ್ತ)
೧೫ ಹುಣ್ಣಿಮೆ
೧೭ ಭೂಮಿ – ಚಂದ್ರ ನಡುವೆ ಗರಿಷ್ಠ ದೂರ
೨೩ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೨೪ ಚಂದ್ರ – ರೋಹಿಣಿ ಜೋಡಿ*
೩೦ ಅಮಾವಾಸ್ಯೆ ೧೫:೩೦ಕ್ಕೆ ಭೂಮಿ ಚಂದ್ರ ನಡುವೆ ಕನಿಷ್ಠ ದೂರ ೨೧ : ೩೦ಕ್ಕೆ
(*ಛಾಯಾಗ್ರಹಣಕ್ಕೆ ಸದವಕಾಶ)

ಡಾ॥ ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

ಶಶಿಧರ ಡೋಂಗ್ರೆ ಎಂ.

ಡಾ|| ಜಿ. ರಾಮಕೃಷ್ಣ

ವರ್ತಮಾನ

ಚರಿತ್ರೆಯ ಬೆಳಕಿನಲ್ಲಿ ವರ್ತಮಾನದ ಹೆಜ್ಜೆಗಳು



ನಾನು ಓದಿದ ಪುಸ್ತಕ

ಪುಟ : ೧೦೪ ಬೆಲೆ : ರೂ. ೧೦೦

ಪ್ರಕಾಶಕರು : ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
ಎಂಬೆಸಿ ಸೆಂಟರ್, ಬೆಂಗಳೂರು – ೫೬೦ ೦೦೧

# 'ವರ್ತಮಾನ'

## ಚರಿತ್ರೆಯ ಬೆಳಕಿನಲ್ಲಿ ವರ್ತಮಾನದ ಹೆಜ್ಜೆಗಳು

ನಮ್ಮ ನಾಡಿನ ಬಹುಶ್ರುತ ವಿದ್ವಾಂಸರೂ ಅಧ್ಯಾಪಕರೂ ಆದ ಜಿಆರ್ ಸಂಸ್ಕೃತ ಗ್ರಂಥಗಳನ್ನು ಐತಿಹಾಸಿಕ ದೃಷ್ಟಿಯಿಂದ ಅಧ್ಯಯನ ಮಾಡಿ ಲೇಖನಗಳನ್ನು ಮತ್ತು ಪುಸ್ತಕಗಳನ್ನು ಬರೆದಿರುವುದು ಎಲ್ಲರಿಗೂ ತಿಳಿದ ಸಂಗತಿ. ಈ ಪಟ್ಟಿಗೆ ಅವರ ಹೊಸ ಕಾಣಿಕೆ 'ವರ್ತಮಾನ'. ನವಕರ್ನಾಟಕ ಪ್ರಕಾಶನದಿಂದ ಇತ್ತೀಚೆಗೆ ಪ್ರಕಟಗೊಂಡಿರುವ ಈ ಪುಸ್ತಕ ಅವರು ನಡೆಸಿಕೊಟ್ಟ ಅಧ್ಯಯನ ತರಗತಿಗಳಲ್ಲಿ ನಡೆಸಿದ ಚರ್ಚೆಯ ಸಂಗ್ರಹ. ಸ್ಥೂಲವಾಗಿ – ರಾಷ್ಟ್ರೀಯತೆ, ಕೌಟಿಲ್ಯನ ಅರ್ಥಶಾಸ್ತ್ರ ಮತ್ತು ಮನುಸ್ಮೃತಿ – ಈ ಮೂರು ವಿಷಯಗಳ ತಳಸ್ಪರ್ಶಿ ಅಧ್ಯಯನ ನೂರುಪುಟಗಳ ಈ ಹೊತ್ತಿಗೆಯಲ್ಲಿ ನಮಗೆ ಸಿಗುತ್ತದೆ.

ಜಿಆರ್ ಅವರು ತಮ್ಮ ಪ್ರಸ್ತಾವನೆಯಲ್ಲಿ ಎರಡು ಮುಖ್ಯ ಸಂಗತಿಗಳನ್ನು ಹೇಳುವ ಮೂಲಕ ಈ ಪುಸ್ತಕದ ಧಾಟಿಯನ್ನು ವಿಶದಪಡಿಸುತ್ತಾರೆ.

ಮೊದಲನೆಯದು 'ಎಲ್ಲವೂ ರಮ್ಯವಾಗಿರಲಿಲ್ಲ, ಅಸಹ್ಯವೂ ಆಗಿರಲಿಲ್ಲ' ಎಂಬ ವಾಕ್ಯ. ಇತ್ತೀಚೆಗೆ ನಮ್ಮಲ್ಲಿ 'ಹಿಂದೆ ಎಲ್ಲವೂ ಸುಂದರವಾಗಿತ್ತು; ಎಲ್ಲವೂ ರಮ್ಯವಾಗಿತ್ತು' ಎಂಬ ಅಭಿಪ್ರಾಯವೊಂದು ಹರಡಿದೆ. 'ನಮ್ಮದು' ಎಂಬ ಅಭಿಮಾನವಿರಬೇಕು ನಿಜ. ಆದರೆ ಅದು ಭಾವನೆಗಳ ಮೇಲೆ ಮಾತ್ರ ನಿಂತಿರಬಾರದು. ಆದ್ದರಿಂದ 'ಎಲ್ಲವೂ ರಮ್ಯವಾಗಿರಲಿಲ್ಲ; ಅಸಹ್ಯವೂ ಆಗಿರಲಿಲ್ಲ' ಎನ್ನುವುದು ಮಧ್ಯಮ ಮಾರ್ಗ ಮತ್ತು ಬೌದ್ಧಿಕವಾಗಿ ಸರಿಯಾದದ್ದು. ಎರಡನೆಯ ವಾಕ್ಯ: 'ಎಲ್ಲವೂ ನನ್ನ ಮೂಗಿನ ನೇರಕ್ಕೆ ಇದ್ದರೆ ಮಾತ್ರ ಅದು ಉನ್ನತ ಆದರ್ಶದ ಪ್ರತಿಮೆಯೆಂದು ಭಾವಿಸುವುದು ಬೌದ್ಧಿಕ ಶೈಶವಾವಸ್ಥೆಗೂ ಯೋಗ್ಯವಲ್ಲದ್ದು ಮತ್ತು ಆರೋಗ್ಯಕರವಲ್ಲದ ಲಕ್ಷಣ' ಎಂದು ಜಿಆರ್ ಹೇಳಿದ್ದಾರೆ. ಇಲ್ಲಿನ 'ಬೌದ್ಧಿಕ ಶೈಶವಾವಸ್ಥೆ' ಪದಪುಂಜ ತುಂಬ ಮಾರ್ಮಿಕವಾದದ್ದು. ಇದು ವ್ಯಕ್ತಿಯ ಶಿಕ್ಷಣಕ್ಕೆ ಮಾತ್ರ ಸಂಬಂಧಿಸಿದ್ದಲ್ಲ ಎನ್ನುವುದು ಸ್ಪಷ್ಟ. ಈ ಎರಡು ಆಶಯಗಳನ್ನು ಲೇಖಕರು ಆಧಾರ ಸಹಿತ ಉದಾಹರಣೆಗಳ ಮೂಲಕ ನಿರೂಪಿಸಿದ್ದಾರೆ.

ರಾಷ್ಟ್ರೀಯತೆಯ ವ್ಯಾಖ್ಯಾನ ಎಂಬುದು ಇರ್ಫಾನ್ ಹಬೀಬ್ ಅವರು ಸಂಪಾದಿಸಿದ ಮುಖ್ಯ ಪುಸ್ತಕವೊಂದರ ಆಯ್ದ ಭಾಗಗಳ ಅನುವಾದ. ರಾಷ್ಟ್ರೀಯತೆಯೆಂದರೆ ಹೀಗೇ ಇರಬೇಕು ಎನ್ನುವ ಧಾಟಿಯ ಅನೇಕ ಭಾಷಣಗಳನ್ನು ಕೇಳುತ್ತಿರುವ ಇಂದಿನ ಸಂದರ್ಭದಲ್ಲಿ, ರಾಷ್ಟ್ರೀಯತೆಯ ವಿವಿಧ ಮುಖಗಳನ್ನು ಅರಿಯುವ ಪ್ರಯತ್ನ ಈ ಲೇಖನಗಳಲ್ಲಿದೆ. ಇದಕ್ಕೆ ಒಂದು ಉದಾಹರಣೆಯೆಂದರೆ, ಭಾರತವನ್ನು ಆಕ್ರಮಣ ಮಾಡಲಾಯಿತು ಎನ್ನುವುದರ ಬಗ್ಗೆ ಇರುವ ಚರ್ಚೆ. 'ಹೊರದೇಶದ ಜನ ನಮ್ಮ ದೇಶವನ್ನು ಆಕ್ರಮಿಸಿ ತಪ್ಪು ಮಾಡಿದ್ದಾರೆ; ಇದರಲ್ಲಿ ನಮ್ಮದೇನೂ ಪಾತ್ರವಿಲ್ಲ' ಎನ್ನುವ ಧಾಟಿಯ ಅನೇಕ ಲೇಖನಗಳನ್ನು ಓದಿದ ಬಳಿಕ ಕಾಡುವ ಪ್ರಶ್ನೆಗಳಿಗೆ ಜಿಆರ್ ನೇರವಾಗಿಯೇ ಉತ್ತರಿಸಿದ್ದಾರೆ. 'ಆಕ್ರಮಣಕಾರರ ಧೂರ್ತತನ ಮಾತ್ರ ಕಾರಣವಾಗಿತ್ತೇ ಅಥವಾ ನಮ್ಮ ದೇಶದ ಆಂತರಿಕ ಸಾಮಾಜಿಕ ವಿಭಜನೆ ಮತ್ತು ಆಯುಧ ತಂತ್ರಜ್ಞಾನದ ಕೊರತೆಯೂ ಕಾರಣವಾಗಿತ್ತೇ?' ಎಂದು ಪ್ರಶ್ನಿಸುತ್ತಾರೆ... ಈ ಚರ್ಚೆಯ ಮೂಲಕ ನಮ್ಮ ಐತಿಹಾಸಿಕ ಮಿತಿಗಳನ್ನು ಸಹಾನುಭೂತಿಯಿಂದ ಅರಿಯುವ ಪ್ರಯತ್ನವಿದೆ. ಭಾರತದ ಸ್ವಾತಂತ್ರ್ಯಪೂರ್ವದ ಅನೇಕ ನಾಯಕರ ಭಾಷಣಗಳ ಅನುವಾದ ಇಲ್ಲಿದ್ದು, ಈ ಅಧ್ಯಾಯದ ಪ್ರತಿ ಪುಟದಲ್ಲೂ, ಅವರ ಬಗ್ಗೆ ಜನಪ್ರಿಯವಾಗಿ ಇರುವ ಭಾವನೆಗಳಿಗೂ, ಅವರು ಯೋಚಿಸಿದ್ದ ಪರಿಗೂ ವ್ಯತ್ಯಾಸ ಇರುವುದನ್ನು ನೋಡಿ ಆಶ್ಚರ್ಯ ಉಂಟಾಗುತ್ತದೆ. ಇದು ಢಾಳವಾಗಿ ಕಾಣುವುದು ಭಗತ್ ಸಿಂಗ್ ಮತ್ತು ಅಂಬೇಡ್ಕರ್ ಅವರ ಲೇಖನಗಳಲ್ಲಿ. ಇನ್ನು ತಮ್ಮ ಪ್ರಖರ ಬೌದ್ಧಿಕತೆಯಿಂದ ಇರುವ ವಸ್ತುಸ್ಥಿತಿಯನ್ನು ಕಣ್ಣೆದುರಿಗೆ ಕಟ್ಟುವಂತೆ ತೋರಿಸುವವರು ಪ್ರಫುಲ್ಲ ಚಂದ್ರ ರೇ. ರೇ ಅವರ ಲೇಖನದಲ್ಲಿನ ಈ ಭಾಗ ಪ್ರಸ್ತುತ ಎನಿಸುವುದಿಲ್ಲವೇ? 'ನಮ್ಮದೇ ದ್ವೀಪಗಳನ್ನು ರಚಿಸಿಕೊಳ್ಳುವುದು, ಸಾಂಸ್ಕೃತಿಕ ಮೊಂಡುತನವನ್ನು ಬೆಳೆಸಿಕೊಳ್ಳುವುದು, ಯಾವ ಪ್ರಭಾವವೂ ಇಲ್ಲದ ಸ್ವಂತಿಕೆಗಾಗಿ ಹಲುಬುವುದು, ಇವೆಲ್ಲ ಮಾರಕ'. ಹಾಗೆಯೇ, ಭಗತ್ ಸಿಂಗ್ ಅವರ ಈ ಹೇಳಿಕೆ – 'ಬೇರೆ ದೇಶಗಳಿಂದ ಬಂದಿರುವವರನ್ನು ದೂಷಿಸುವ ಮೊದಲು ನಮ್ಮ ಜನಗಳನ್ನು ನಾವು ಹೇಗೆ ನಡೆಸಿಕೊಳ್ಳುತ್ತಿದ್ದೇವೆ ಎಂಬುದನ್ನು ಸ್ವಲ್ಪ ವಿಶ್ಲೇಷಿಸಿಕೊಳ್ಳೋಣ.' ಇಂಥ ಉದಾತ್ತ, ಆದರೆ ವೈಚಾರಿಕ ಧೋರಣೆಗಳನ್ನು ಹೊಂದಿದ ಈ ಅಧ್ಯಾಯ ಮತ್ತೆ ಮತ್ತೆ ಓದಿಸಿಕೊಳ್ಳುತ್ತದೆ.

'ಕೌಟಿಲ್ಯನ ಅರ್ಥಶಾಸ್ತ್ರ – ಒಂದು ಟಿಪ್ಪಣಿ' ಅಧ್ಯಾಯದಲ್ಲಿ ಸುಮಾರು ನಾಲ್ಕು ಪುಟಗಳಷ್ಟನ್ನು 'ಅರ್ಥಶಾಸ್ತ್ರ'ದಲ್ಲಿ ಉಲ್ಲೇಖವಾಗುವ 'ಆನ್ವೀಕ್ಷಿಕೀ' ಎಂಬ ಪದದ ವ್ಯುತ್ಪತ್ತಿ, ಅದು ಬಳಕೆಯಾಗಿರುವ ಬಗೆ ಮತ್ತು ಅದು ತತ್ವಶಾಸ್ತ್ರೀಯ ದೃಷ್ಟಿಯಲ್ಲಿ ಹೇಗೆ ಸರಿ ಎಂಬುದರ ಬಗ್ಗೆಯೇ ಇದೆ. 'ಅರ್ಥಶಾಸ್ತ್ರ'ದ ಜನಪ್ರಿಯ ಲೇಖನಗಳು ಇದರ ಬಗ್ಗೆ ಹೆಚ್ಚು ಚರ್ಚಿಸಿರುವ ಹಾಗೆ ಕಾಣುವುದಿಲ್ಲ. ಕೊನೆಗೂ ಇದಮಿತ್ಥಂ ಎನ್ನುವ ರೀತಿಯಲ್ಲಿ ಜಿಆರ್ ಹೇಳುವ ಮಾತಿದು – 'ಒಂದೇ ಮಾತಿನಲ್ಲಿ ಹೇಳುವುದಾದರೆ ಕೌಟಿಲ್ಯನು ಧರ್ಮ ಮತ್ತು ಧರ್ಮನಿರಪೇಕ್ಷ ಎಂಬ ಎರಡೂ ಬಗೆಯ ವಿದ್ಯೆಗಳನ್ನು ಮಾನ್ಯ ಮಾಡುತ್ತಾನೆ'.

ಶಶಿಧರ ಡೋಂಗ್ರೆ ಎಂ.

ಈ ತೀರ್ಮಾನ ಕೊಡುವ ಮೊದಲು ಅವರು ಆನ್ವೀಕ್ಷಿಕೀ ಎಂಬ ಪದವನ್ನು ವಿಸ್ತಾರವಾಗಿ ಚರ್ಚಿಸಿದ್ದು ಸ್ವಾರಸ್ಯಕರವಾಗಿದೆ. ಇನ್ನುಳಿದ ಭಾಗಗಳಲ್ಲಿ ಅರ್ಥಶಾಸ್ತ್ರವು ವಿಧಿಸಿರುವ ಕಟ್ಟುಕಟ್ಟಳೆಗಳ ಸ್ಥೂಲವಾದ ಮಾಹಿತಿಯನ್ನು ಜಿಆರ್ ನೀಡುತ್ತಾರೆ.

ಪ್ಲೇಟೋ 'ಅನುಕೂಲಕರವಾದ ಸುಳ್ಳು ಹೇಳುವುದನ್ನು ಆಳುವ ವರ್ಗ ಮಾಡಬಹುದು' ಎಂದು ಹೇಳುವುದನ್ನು ಉದಾಹರಿಸುವ ಮೂಲಕ ತೌಲನಿಕ ನೋಟವನ್ನು ನಮ್ಮ ಮುಂದೆ ಇಡುತ್ತಾರೆ. 'ಅಧಿಕ ತೆರಿಗೆ ವಿಧಿಸುವ ಅವಶ್ಯಕತೆಯಿದ್ದರೆ ಆಳ್ವಿಕೆಗೆ ಒಳಗಾಗುವವರಲ್ಲಿ ಕೆಲವು ಮೂಢನಂಬಿಕೆಗಳನ್ನು, ಮೌಢ್ಯಾಚರಣೆಗಳನ್ನು ಮನೆಮಾಡುವಂತೆ ಆಯೋಜಿಸುವುದು ನಿಷಿದ್ಧವಲ್ಲ' ಎಂಬ ಕುತೂಹಲಕಾರಿ ಮಾಹಿತಿಯನ್ನು ನೀಡುವ ಜಿಆರ್ ಇದನ್ನೇ ಸ್ವಲ್ಪ ವಿಸ್ತರಿಸಿ ಉದಾಹರಣೆ ಸಹಿತ ಹೇಳಿದ್ದರೆ ಚೆನ್ನಾಗಿತ್ತು ಎನ್ನಿಸಿತು.

ಮನುಸ್ಮೃತಿ ಕ್ರಿ. ಪೂ. ೨೦೦ರಿಂದ ಕ್ರಿ. ಶ. ೨೦೦ರ ಕಾಲಘಟ್ಟದಲ್ಲಿ ರಚಿತವಾಯಿತು ಎಂದು ಹಲವು ಪುರಾವೆಗಳಿಂದ ತಿಳಿದುಬಂದಿದ್ದು ಅಲ್ಲಿಂದ ಇಲ್ಲಿಯವರೆಗೆ, ಅಂದರೆ ಸುಮಾರು ೨೦೦೦ ವರ್ಷಗಳ ಕಾಲ ಈ ಕೃತಿ ಇನ್ನೂ ಜನಮಾನಸದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಇದೆ. ಆದರೆ ಋಗ್ವೇದ ಕಾಲದ ವಿಸ್ಮಯ, ಧರ್ಮಾತೀತತೆ ಇವುಗಳೆಲ್ಲ ಮನುಸ್ಮೃತಿಯಲ್ಲಿ ಇಲ್ಲವೇ ಇಲ್ಲ. ಅಂದರೆ ಋಗ್ವೇದ ಕಾಲದಲ್ಲಿದ್ದ ಅಥವಾ ಇದೆ ಎಂದು ನಂಬಿರುವ ಮಾನವೀಯತೆ ಮನುವಿನ ಕಾಲಕ್ಕೆ ಇಲ್ಲದೇ ಇರುವ ಹಾಗಾಗಿದ್ದು ಏಕೆ? ಈ ಎರಡೂ ಕೃತಿಗಳನ್ನು ಸಮಾಜದ ಮೇಲ್ವರ್ಗದವರೇ ಬರೆದಿದ್ದರೂ ಈ ಎರಡರಲ್ಲಿ ಇರುವ ವ್ಯತ್ಯಾಸಗಳಿಗೆ ಕಾರಣ ಗಳೇನು? ಮುಖ್ಯವಾಗಿ ಮುಂದಿನ ಎರಡು ಸಾವಿರ ವರ್ಷಗಳ ಕಾಲಘಟ್ಟದಲ್ಲಿ ಹೆಚ್ಚು ವ್ಯತ್ಯಾಸವಾಗದೇ ಇರುವುದಕ್ಕೆ ಕಾರಣಗಳೇನು? ಇದೇನಾದರೂ ನಮ್ಮ ಇತಿಹಾಸವನ್ನು ಇನ್ನಷ್ಟು ಅರಿಯಲು ಸಹಾಯ ಮಾಡುತ್ತದೆಯೇ? ಇಂಥ ಅನೇಕ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವ ಗುರಿಯಿರುವ ಯಾವುದೇ ಓದುಗನಿಗೆ ಈ ಪುಸ್ತಕದ ಮನುಸ್ಮೃತಿಯ ಲೇಖನಗಳು ಮುಖ್ಯ ಸಾಮಗ್ರಿಯನ್ನು ಒದಗಿಸುತ್ತವೆ.

ಮಹಿಳೆಯರ ಚಾಂಚಲ್ಯಕ್ಕೆ ಸಂಬಂಧಿಸಿದಂತೆ ಜಿಆರ್ ಅವರು ಶೇಕ್ಸ್‌ಪಿಯರ್ ಮತ್ತು ಮನುವನ್ನು ಒಟ್ಟಿಗೆ ವಿಶ್ಲೇಷಣೆ ಮಾಡುವುದು ಕುತೂಹಲಕಾರಿಯಾಗಿದೆ. ಆದರೆ ಶೇಕ್ಸ್‌ಪಿಯರ್ ಕವಿ ಮತ್ತು ನಾಟಕಕಾರ. ಆದರೆ ಮನುಸ್ಮೃತಿ ಒಂದು 'ಕಾನೂನು' ಸಂಹಿತೆಯಂತಿದ್ದು, ಸಾಹಿತ್ಯಕ್ಕೋ ನಾಟಕಕ್ಕೋ ಇರುವ ಕಲ್ಪನಾ ಸ್ವಾತಂತ್ರ್ಯ ಅದಕ್ಕಿದೆಯೋ ಅಥವಾ ಇರಬೇಕೋ? ಈ ಪುಸ್ತಕದಲ್ಲಿರುವ ಮನುಸ್ಮೃತಿಯ ಬಗ್ಗೆ ಅನೇಕ ಲೇಖನಗಳನ್ನು ಓದುತ್ತಿದ್ದಂತೆ ಈ ಪ್ರಶ್ನೆ ನನ್ನನ್ನು ಕಾಡಿದೆ. ಇಂಥ ಕುಲದಲ್ಲಿ ಹುಟ್ಟಿದವರು ಇಂಥ ಕರ್ಮವನ್ನೇ ಮಾಡಬೇಕು; ಈ ಕೆಲಸವನ್ನು ಮಾಡಿದರೆ ಇಂತಹ ಶಿಕ್ಷೆ ಕೊಡಬೇಕು ಎಂಬಂತಿರುವ ವಾಕ್ಯಗಳಲ್ಲಿ ಕವಿತ್ವ ಕಾಣುವುದಿಲ್ಲ.

ಆದರೆ ಇದಕ್ಕೆ ಸಂವಾದಿಯಾಗಿ ಸುರಾಪಾನ ಮಾಡಿದ ಬ್ರಾಹ್ಮಣನು ಕ್ರಿಮಿಕೀಟ ಮಲ ತಿನ್ನುವ ಹಕ್ಕಿಯಾಗಿ ಜನ್ಮ ತಾಳುತ್ತಾನೆ ಎನ್ನುವಾಗ ಬಹುಶಃ ಮನು ಬ್ರಹ್ಮನನ್ನು ಕುರಿತು "ನೋಡು ಬ್ರಹ್ಮ, ಇಗೋ ಈ ಕಾನೂನನ್ನು ಬರೆದಿದ್ದೇನೆ. ಪಾಲಿಸುವುದು ನಿನ್ನ ಜವಾಬ್ದಾರಿ" ಎಂದು ಹೇಳಿರಲಿಕ್ಕಿಲ್ಲ. ಈ ಭಾಗವನ್ನು ಸಾಹಿತ್ಯವಾಗಿಯೇ ಓದಬೇಕಾಗುತ್ತದೆ.

ವರ್ಣಾಶ್ರಮ ಧರ್ಮವನ್ನು ಪದಪದಗಳಲ್ಲೂ ಎತ್ತಿ ಹಿಡಿದಿರುವುದು ಸರಿಸುಮಾರು ಎಲ್ಲರಿಗೂ ತಿಳಿದ ವಿಷಯ. ಅದನ್ನು ಜಿಆರ್ ಅನೇಕ ಲೇಖನಗಳಲ್ಲಿ ಪ್ರಮಾಣ ಸಹಿತವಾಗಿ ಎತ್ತಿ ತೋರಿಸುತ್ತಾರೆ. ಹೀಗಿದ್ದರೂ ಮನು ಎಲ್ಲೆಲ್ಲಿ ಒಳ್ಳೆಯ ಮಾತುಗಳನ್ನಾಡಿದ್ದಾನೋ ಅಲ್ಲೆಲ್ಲ ಅವನ್ನೂ ನಮಗೆ ಪರಿಚಯಿಸುತ್ತಾರೆ. ಉದಾಹರಣೆಗೆ 'ಅಸ್ವರ್ಗ್ಯಂ ಲೋಕವಿದ್ವಿಷ್ಟಂ...' ಎನ್ನುವ ಭಾಗವನ್ನು ವಿಶ್ಲೇಷಿಸುತ್ತಾ 'ಯಾವುದೋ ಕಾಲದ ಆಚರಣೆಗೆ ಸದಾ ಅಂಟಿಕೊಂಡಿರಬೇಕಾಗಿಲ್ಲ' ಎಂದು ಹೇಳುತ್ತಾ ಮನುವನ್ನು ಪ್ರಶಂಸಿಸಿ, ಅದು ತನ್ನದೇ ನಿರ್ದೇಶನಗಳಿಗೆ ಅನ್ವಯವಾಗುವಂತೆ ಅವನು ಭಾವಿಸಿಲ್ಲವೇನೋ ಎಂದು ಅಣಕಿಸುತ್ತಾರೆ.

ಜಿಆರ್ ಅವರ ಲೇಖನದಲ್ಲಿ ಮೈ ಜುಮ್ಮೆನ್ನಿಸುವಂಥ, ಓದಿ ಧನ್ಯವಾದೆ ಎನ್ನುವ ಭಾವನೆಯನ್ನು ಮೂಡಿಸುವ ಅನೇಕ ವಾಕ್ಯಗಳಿವೆ. ಉದಾಹರಣೆಗೆ ಬಹು ಉಲ್ಲೇಖಿತ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ'ಯನ್ನು ಚರ್ಚಿಸುತ್ತ, ಜಿಆರ್ ಅವರು ಹೇಳುವ ಮಾತು – "ಈ ಒಂದು ಶ್ಲೋಕದ ಆಧಾರದ ಮೇಲೆ ನಾವು ಮುಜುಗರಕ್ಕೆ ಒಳಗಾಗಬೇಕಾಗಿಲ್ಲ. ಸಮಾಜ ವಿಕಾಸದ ಹಾದಿಯಲ್ಲಿ ಅಂಥದೊಂದು ಸನ್ನಿವೇಶ ಉದ್ಭವವಾಗಿದ್ದರೆ ಇಂದು ಅದಕ್ಕೆ ನಾವು ಬಾಧ್ಯರಲ್ಲ. ಬದಲಾಗಿ, ಅಂತಹ ಸನ್ನಿವೇಶವನ್ನು ಪ್ರಕೃತ ಭಾರತದ ಸಂವಿಧಾನದಡಿಯಲ್ಲಿಯೂ ಮುಂದುವರಿಸು ತ್ತಿರುವುದಕ್ಕೆ ತಲೆ ತಗ್ಗಿಸಬೇಕು'. ಸಮಚಿತ್ತತೆಗೆ ಇದಕ್ಕಿಂತ ದೊಡ್ಡ ಉದಾಹರಣೆ ಬೇಕಿಲ್ಲ. ಇಂದು ನಾವು ಯೂರೋಪಿನಲ್ಲಿ, ಹೆಚ್ಚಾಗಿ ಜರ್ಮನಿಯಲ್ಲಿ, ಇಂಥದೊಂದು ಭಾವನೆಯನ್ನು ಕಾಣುತ್ತೇವೆ. ಜರ್ಮನಿಯಲ್ಲಿ ನಡೆದ ಹತ್ಯಾಕಾಂಡಕ್ಕೆ ಆ ದೇಶದ ಜನರು ಅನವರತವೂ ದುಃಖಿಗಳಾಗಿರಬೇಕೇ ಅಥವಾ ಅದು ನಡೆದೇ ಇಲ್ಲ ಎನ್ನುವಂತೆ ಇರಬೇಕೇ ಎನ್ನುವುದು ಬಹು ಚರ್ಚಿತ ವಿಷಯ. ಎಲ್ಲಿಯವರೆಗೆ ಎಂದರೆ ಆ ಹತ್ಯಾಕಾಂಡದ ಬಗ್ಗೆ ಇರುವ ಮ್ಯೂಸಿಯಂಗಳನ್ನು ಮುಚ್ಚಬೇಕು ಎನ್ನುವ ವಾದವೂ ಇದೆ. ಇಂಥ ಚರ್ಚೆಗಳು ಅತಿರೇಕಕ್ಕೆ ಹೋಗದೇ ಇದ್ದಾಗ, ಅವು ಆರೋಗ್ಯವಂತ ಸಮಾಜದಲ್ಲಿ ನಡೆಯಲೇಬೇಕಾದ ಕೊಡುಕೊಳ್ಳುವಿಕೆಗಳು. ಇಂಥದೊಂದು ಚಿಂತನೆಗೆ ನಮ್ಮನ್ನು ಒಡ್ಡುತ್ತಿರುವ ಜಿಆರ್ ಅವರಿಗೆ ನಾವು ಯಾವಾಗಲೂ ಋಣಿಗಳು.

ಇದೇ ರೀತಿ, 'ನ ಬ್ರಾಹ್ಮಣೋ ಗುರೌ...' ಎನ್ನುವ ಶ್ಲೋಕವನ್ನು ಅರ್ಥೈಸುತ್ತ, ವಿದ್ವತ್ತಿನ ಕೊರತೆಯಿರುವ ಗುರುವನ್ನು ತೊರೆಯಬೇಕು ಎನ್ನುವ ಮನುವಿನ ಸೂಚನೆಯನ್ನು ಸ್ವಾಗತಿಸುತ್ತಾರೆ.

ಈ ಪುಸ್ತಕದಲ್ಲಿ ಜಿಆರ್ ಅವರು ತೆಗೆದುಕೊಂಡಿರುವ ಕೆಲವು ನಿರ್ಣಯಗಳು ಮತ್ತು ಉಲ್ಲೇಖಿಸಿದ ಉದಾಹರಣೆಗಳು ಚರ್ಚಾಸ್ಪದವಾಗಿವೆ. ಕೌಟಿಲ್ಯನ ಲೇಖನದ ಕೊನೆಗೆ ಜಿಆರ್ ಅವರು ಅರ್ಥಶಾಸ್ತ್ರದ ಪ್ರಸ್ತುತತೆಯು 'ಸಾರ್ವಕಾಲಿಕ' – ಇಲ್ಲಿ ಒತ್ತು ಇರುವುದು ಸಾರ್ವಕಾಲಿಕ ಎನ್ನುವುದರ ಬಗ್ಗೆ – ಎನ್ನುವುದು ಸ್ವಲ್ಪ ಸರಿಯಲ್ಲವೇನೋ ಎನಿಸುತ್ತದೆ. ತುಂಬ ವಸ್ತುನಿಷ್ಠವಾಗಿ ರೂಪಿತವಾಗಿರುವ ಈ ಲೇಖನದಲ್ಲಿ – ಅರ್ಥಶಾಸ್ತ್ರದ ಕೆಲವು ಭಾಗಗಳು ನಮ್ಮ ಕಾಲಕ್ಕೂ ಸಲ್ಲುವಂಥವು ಮತ್ತು ಕೆಲವು ಸರ್ವಥಾ ಅಲ್ಲ ಎಂಬ ಚರ್ಚೆ ನಡೆದಿರುವಾಗ – ಕೊನೆಯದಾಗಿ ಬಂದ ಈ ಮಾತು ಸ್ವಲ್ಪ ಆಶ್ಚರ್ಯ ಮೂಡಿಸಿತು.

ಮನುಸ್ಮೃತಿಯ ಬಗೆಗಿನ ಒಂದು ಲೇಖನದಲ್ಲಿ 'ಮೇಲಿನ ಜಾತಿಯವರನ್ನು ದೂಷಿಸಿದಾಗ ಕೊಡಬೇಕಾದ ಶಿಕ್ಷೆಯ ಬಗೆಗಿನ' ಶ್ಲೋಕವನ್ನು ವಿಶ್ಲೇಷಿಸುತ್ತಾ ಗ್ವಾಂಟನಾಮೋ ಕೈದಿಗಳನ್ನು ಅಮೇರಿಕಾ ನಡೆಸಿಕೊಂಡ ಬಗೆಯ ಬಗ್ಗೆ ಹೇಳುತ್ತಾರೆ. ಇಂಥ ಉದಾಹರಣೆಗಳು ರಷ್ಯಾದಲ್ಲೋ, ಬಲ್ಗೇರಿಯಾದಲ್ಲೋ, ಇರಾಕ್‌ನಲ್ಲೋ ಇಲ್ಲವೇ? ಅವನ್ನೂ ಉದಾಹರಿಸಬಹುದಿತ್ತಲ್ಲ ಎನಿಸುತ್ತದೆ.

ಆದರೆ ಇಂತಹ ತಕರಾರುಗಳೆಲ್ಲ ಅವರು ಮಾಡುತ್ತಿರುವ ಅದ್ಭುತ ಕೆಲಸದ ಮುಂದೆ ಗೌಣ. ನಮ್ಮ ಹಳೆಯ ಗ್ರಂಥಗಳನ್ನು ಆರಾಧನಾ ಭಾವದಿಂದ ಮಾತ್ರ ಓದದೆ, ವಿಸ್ಮಯದಿಂದಲೂ ಗೌರವ ಭಾವವಿಟ್ಟುಕೊಂಡೇ ಚರ್ಚಿಸಲು ಅನುವು ಮಾಡಿಕೊಡುತ್ತಿರುವ ಜಿಆರ್ ಅವರಿಗೆ ನಮ್ಮ ಕೃತಜ್ಞತೆಗಳು.

**ಶಶಿಧರ ಡೋಂಗ್ರೆ ಎಂ.**
ನಂ. ೪೫೬, ೧೨ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು – ೫೭೦ ೦೦೯

**ಕನ್ನಡ ಸಾಹಿತ್ಯ ಪರಿಷತ್ತಿನ ೨೦೧೮ರ ಸಾಲಿನ ವಿವಿಧ ದತ್ತಿ ಪ್ರಶಸ್ತಿಗಳಲ್ಲಿ ನಾಲ್ಕು ನವಕರ್ನಾಟಕದ ಪ್ರಕಟಣೆಗಳಿಗೆ ದೊರಕಿವೆ.**

೧. 'ಶ್ರೀಮತಿ ಭಾರತಿ ಮೋಹನಕೋಟಿ ದತ್ತಿ ಪ್ರಶಸ್ತಿ' – **ಕೊನೆಯ ಅಲೆ** *(ಸುಮಂಗಲಾ ಎಸ್. ಮುಮ್ಮಿಗಟ್ಟಿ).*
೨. 'ವಸುದೇವ ಭೂಪಾಲಂ ದತ್ತಿ ಪ್ರಶಸ್ತಿ' – **ಸಣ್ಣ ಸಂಗತಿ** *(ಡಾ॥ ರಹಮತ್ ತರೀಕೆರೆ)*
೩. 'ದಿ। ಡಾ॥ ಎ. ಎಸ್. ಧರಣೇಂದ್ರಯ್ಯ, ಮನೋವಿಜ್ಞಾನ ದತ್ತಿ ಪ್ರಶಸ್ತಿ' – **ಕೀಳರಿಮೆಯನ್ನು ಮೆಟ್ಟಿ ನಿಲ್ಲುವುದು ಹೇಗೆ?** *(ಡಾ॥ ಮಹಾಬಲೇಶ್ವರ ರಾವ್)*
೪. 'ದಿ। ಎಚ್. ಕರಿಯಣ್ಣ ದತ್ತಿ ಪ್ರಶಸ್ತಿ' – **ಭಗವದ್ಗೀತೆ: ಒಂದು ಅವಲೋಕನ** *(ಡಾ॥ ಜಿ. ರಾಮಕೃಷ್ಣ)*

ಎಲ್ಲ ಲೇಖಕರಿಗೂ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

# ಆದಿಮರ ನಿತ್ಯಸಂಕರ ಮತ್ತು ಕಲೆಯ ಸ್ಥಿತ್ಯಂತರಗಳು

ಡಾ॥ ಶಿವಾನಂದ ಎಚ್. ಬಂಟನೂರ

**ಮಾ**ನವ ಕುಲದ ಸಾಂಸ್ಕೃತಿಕ ಚರಿತ್ರೆಯಲ್ಲಿ 'ಕಲಾಸೃಷ್ಟಿ' ಒಂದು ಪ್ರಮುಖ ಸಾಧನೆಯಾಗಿದೆ. ಮಾನವನ ಬದುಕಿನ ಅನುಭವಗಳು ಹಲವು ಮಾಧ್ಯಮಗಳ ಮೂಲಕ ಕಲೆಗಳಾಗಿ ಪ್ರಕಟಗೊಳ್ಳುತ್ತ ಬಂದಿವೆ. ಆದಿಮ ಕಾಲದಿಂದ ಆಧುನಿಕ ಕಾಲದವರೆಗೆ ಹಲವು ಪ್ರಕಾರಗಳಲ್ಲಿ ಕಲೆಯು ಓತಪ್ರೋತವಾಗಿ ಹರಿದುಬಂದಿದೆ. ಆದರೆ ಆದಿ ಮಾನವನಲ್ಲಿ ಇತರ ಕಲೆಗಳಿಗಿಂತ ದೃಶ್ಯಕಲೆಯೇ (ಚಿತ್ರ, ಶಿಲ್ಪಕಲೆಗಳು) ಮೊದಲಾಯಿತೆಂಬುದು ಹಲವರ ಅಭಿಮತ. ಅಷ್ಟು ಮಾತ್ರ ಅಲ್ಲ, ಇಂದಿಗೂ ಕೂಡ ಆದಿಮಾನವನ ಕಲಾಸೃಷ್ಟಿಯ ದಾಖಲೆಯಾಗಿ ಉಳಿದುಬಂದಿರುವುದು ದೃಶ್ಯಕಲೆ ಮಾತ್ರ. ಅಂದರೆ ಆತ ಸೃಷ್ಟಿಮಾಡಿದ ಚಿತ್ರ ಹಾಗೂ ಶಿಲ್ಪಕಲಾಕೃತಿಗಳು ಮಾತ್ರವೇ ಇಂದಿಗೂ ಕೂಡ ನಮಗೆ ನೋಡಲು ಸಿಗುತ್ತವೆ.

ಪ್ರಪಂಚದ ಹಲವಾರು ಭಾಗಗಳಲ್ಲಿ ಪ್ರಾಗ್ಯೈತಿಹಾಸಿಕ ಹಾಗೂ ಇತಿಹಾಸ ಆರಂಭ ಕಾಲದ ಚಿತ್ರ – ಶಿಲ್ಪಗಳು ಕಂಡುಬಂದಿವೆ. ಮುಖ್ಯವಾಗಿ, ಭಾರತವನ್ನೂ ಒಳಗೊಂಡಂತೆ ಸ್ಪೇನ್, ಫ್ರಾನ್ಸ್, ಆಫ್ರಿಕಾ, ಜರ್ಮನಿ, ಇಂಗ್ಲೆಂಡ್, ರಷ್ಯಾ ಮತ್ತು ಜಪಾನ್‌ಗಳಲ್ಲಿನ ಆದಿಮ ಕಾಲದ ಚಿತ್ರಗಳು ವಿಶ್ವಪ್ರಸಿದ್ಧಿ ಪಡೆದಿವೆ. ಈ ಆದಿಮ ದೃಶ್ಯಕಲೆಯನ್ನು ಒಟ್ಟುಗೂಡಿಸಿ ಸ್ಥೂಲವಾಗಿ: ೧) ಚಿತ್ರಗಳು ೨) ಶಿಲ್ಪಗಳು ಎಂದು ದ್ವಿಭಾಗ ಮಾಡಿ ನೋಡಬಹುದು. ಸೂಕ್ಷ್ಮವಾಗಿ ೧) ಗವಿವರ್ಣ ಚಿತ್ರಗಳು ೨) ಮೃತ್‌ಪಾತ್ರೆ ಚಿತ್ರಗಳು ೩) ಶಿಲಾಶ್ರಯ ಚಿತ್ರಗಳು ೪) ಬಯಲು ಬಂಡೆ ಚಿತ್ರಗಳು ೫) ಸುಡಾವೆ ಮಣ್ಣಿನ ಶಿಲ್ಪಗಳು (ಗೊಂಬೆ) ೬) ಬಯಲು ಶಿಲಾ ಶಿಲ್ಪಗಳು ಎಂದು ವಿಂಗಡಿಸಬಹುದು.

### ೧. ಆದಿಮ ಚಿತ್ರಗಳು

ಆದಿಮಾನವ ತಾನು ವಾಸಿಸುತ್ತಿದ್ದ ಗವಿಗಳು, ಬಂಡೆಗಳು ಮತ್ತು ಶಿಲಾಶ್ರಯಗಳಲ್ಲಿ– ಹೆಚ್ಚಾಗಿ ಚಿತ್ರಗಳನ್ನು ಬರೆದಿದ್ದಾನೆ. ಅಲ್ಲದೆ, ತಾನು ಬಳಸುವ ಮಡಕೆ, ಕುಡಿಕೆಗಳ ಮೇಲೆ ಕೂಡ ಚಿತ್ರಿಸಿ ತನ್ನ ಸೌಂದರ್ಯಪ್ರಜ್ಞೆಯನ್ನು ಮೆರೆದಿದ್ದಾನೆ. ದೊಡ್ಡ ಬಂಡೆಗಳ ರಾಶಿಗಳ ನಡುವೆ ಮತ್ತು ಮೇಲಿನ ಹಂತಗಳಲ್ಲೇ ಅಲ್ಲದೆ ಬಯಲಿನಲ್ಲಿರುವ ಬಂಡೆಗಳಲ್ಲಿ ಕೂಡ ಚಿತ್ರಗಳನ್ನು ರಚನೆಮಾಡಿದ್ದಾನೆ. ಕುಟ್ಟಿ ಇಲ್ಲವೆ ಮೊನಚಾದ ಉಪಕರಣಗಳಿಂದ ಕೊರೆದು, ತೀಡಿ ಗೆರೆಗಳನ್ನು ರಚಿಸುವ ಮೂಲಕವೂ ಚಿತ್ರಗಳನ್ನು ಸೃಷ್ಟಿ ಮಾಡಿದ್ದಾನೆ.

### ೨. ಆದಿಮ ಶಿಲ್ಪಗಳು

ಮಣ್ಣಿನ ಮುದ್ದೆಯಲ್ಲಿ ಕೈಯಿಂದ ರೂಪಿಸಿದ ಪ್ರಾಣಿ, ಮನುಷ್ಯ, ಪಕ್ಷಿಗಳ ರೂಪಗಳನ್ನು ರಚಿಸಿ ಸುಡಲಾಗಿರುವಂತಹವುಗಳು 'ಸುಡಾವೆ ಮಣ್ಣಿನ ಶಿಲ್ಪಗಳು'. ಹೇರಳವಾಗಿ ಸಿಕ್ಕಿರುವ ಇವುಗಳು ಒಂದು ಬಗೆಯಾದರೆ, ಬಯಲಲ್ಲಿ ನಿಂತುಕೊಂಡಿರುವ ವಿಚಿತ್ರ ಶಿಲಾಶಿಲ್ಪಾಕೃತಿಗಳು ಇನ್ನೊಂದು ಬಗೆಯವು. ಆದರೆ ಶಿಲಾಶಿಲ್ಪಗಳು ಕೆಲವೇ ನೆಲೆಗಳಲ್ಲಿ, ಕಡಿಮೆ ಸಂಖ್ಯೆಯಲ್ಲಿ ಲಭ್ಯವಾಗಿವೆ.

### ಆದಿಮ ಚಿತ್ರರಚನೆಯ ಉದ್ದೇಶ

ಅ) ಆದಿಮ ಚಿತ್ರ ಮತ್ತು ಶಿಲ್ಪಗಳು ಅಂದಿನ ಜನತೆಯ ಭಾವನಾತಕ್ಮ ಅಭಿವ್ಯಕ್ತಿಯ ಫಲವಾಗಿ ರಚಿತವಾದವುಗಳಾಗಿವೆ.

ಆ) ಪ್ರಕೃತಿಯಿಂದ ಪ್ರೇರಣೆ ಪಡೆದ ಸೌಂದರ್ಯಾನುಭವದ ಪ್ರತಿಬಿಂಬಗಳಾಗಿಯೂ ಅದ್ಭುತ, ವಿಚಿತ್ರ ಹಾಗೂ ವೈವಿಧ್ಯಮಯ ಚಿತ್ರ ಶಿಲ್ಪಗಳು ಮೂಡಿಬಂದಿವೆ.

ಇ) ಬಹುಪಾಲು ಚಿತ್ರಗಳು ಯಶಸ್ವೀ ಬೇಟೆಯ ಸ್ಮರಣಾರ್ಥವಾಗಿ ಮತ್ತು ನಿರಂತರ ಆಹಾರ ದೊರಕಿಸಿಕೊಳ್ಳುವ ಉದ್ದೇಶದ ಮಾಂತ್ರಿಕ ಸಂಬಂಧೀ ಚಿತ್ರಗಳೆಂದೂ ಹೇಳಲಾಗುತ್ತದೆ.

ಆದರೆ ಈ ತಾರ್ಕಿಕ ಅಥವಾ ಕಲ್ಪಿತ ಉದ್ದೇಶಗಳು ಕೆಲವು ಸಂಶಯಗಳನ್ನು ನಮ್ಮಲ್ಲಿ ಮೂಡಿಸುತ್ತವೆ. ಏನೆಂದರೆ, ನಿಜವಾಗಿಯೂ ಆದಿ ಮನುಷ್ಯ ಮತ್ತು ಅವನ ಸುತ್ತಲಿನ ಪ್ರಕೃತಿಯ ನಡುವೆ ಇದ್ದ ಗಾಢ ಸಂಬಂಧವನ್ನು ಇವು ಸೂಚಿಸುತ್ತವೆಯೇ? ಮತ್ತು ಅವರ ಹಲವು ಅಗತ್ಯಗಳನ್ನು ತೃಪ್ತಿಪಡಿಸುವ ಉದ್ದೇಶವನ್ನು ಅವು ಹೊಂದಿರಲಿಲ್ಲವೆ? ಹೊಂದಿದ್ದರೆ ಆ ಉದ್ದೇಶಗಳು ಕಾಲಕಾಲಕ್ಕೆ ಬದಲಾಗಿವೆಯೇ? ಎಂಬ ಪ್ರಶ್ನೆಗಳನ್ನು ಹುಟ್ಟುಹಾಕುತ್ತವೆ. ಬಹುಶಃ ಉತ್ತರಗಳೂ ಬದಲಾಗುತ್ತಲೇ ಹೋಗಬಹುದು. ಹಾಗಾಗಿಯೇ ಆದಿಮ ಕಲಾ ಸೃಷ್ಟಿಯ ಬಗೆಗಿನ ಈ ಕೌತುಕಕ್ಕೆ ಪ್ರಾಯಶಃ ಆಯಾ ಕಾಲ ಮತ್ತು ಪ್ರದೇಶಗಳಲ್ಲಿ ಆಗಿರುವ ಅದರ ಸ್ಥಿತ್ಯಂತರಗಳೂ ಕಾರಣವಾಗಿವೆ ಎಂದು ಭಾವಿಸಬಹುದು.







ಭಾರತದ ಮಧ್ಯಪ್ರದೇಶದ ಆದಿಮ ಚಿತ್ರಕಲೆ ವಿಶ್ವಮಾನ್ಯತೆಯನ್ನು ಪಡೆದಿದೆ. ಅಲ್ಲಿನ ಬೀಂಬೇಟ್ಕಾದ ಶಿಲಾಶ್ರಯ ಮತ್ತು ಗುಹಾ ಚಿತ್ರಗಳು ವಿಶ್ವಪರಂಪರೆಯ ಪಟ್ಟಿಯಲ್ಲಿ ಸೇರಿದ್ದನ್ನು ಸ್ಮರಿಸಿಕೊಳ್ಳಬಹುದು. ಸುಮಾರು ಒಂದು ಲಕ್ಷ ವರ್ಷಗಳ ಹಿಂದೆ ಆಫ್ರಿಕಾದ 'ಹೊಮೋ ಸೆಪಿಯನ್' ಆದಿವಾಸಿ ಜನಾಂಗ ಮೊದಲ ಚಿತ್ರಕಲಾ ರೂಪ ಸೃಷ್ಟಿಗೆ ಕಾರಣರಾದರು. ಸುಮಾರು ನಲವತ್ತು ಸಾವಿರ ವರ್ಷಗಳ ಹಿಂದೆ ಈ ಜನಾಂಗ ವಿಶ್ವದ ಹಲವೆಡೆ ಚದುರಿಹೋಯಿತು. ಈ ಜನರ ಕಲೆಯ ಮೊದಲ ಹೆಜ್ಜೆಗಳು ಪಶ್ಚಿಮ ಯುರೋಪನ್ನು ಆವರಿಸಿ, ಬಳಿಕ ನಮ್ಮ ಏಷ್ಯಾದ ನರ್ಮದಾ ನದಿಯ ಆವರಣಕ್ಕೂ ಧಾವಿಸಿ ನದಿಯ ಬದಿಗಳಿಂದ ದೇಶದ ಹಲವೆಡೆ ಹರಡಿಕೊಂಡಿತೆಂಬುದಾಗಿ ತಿಳಿಯುತ್ತದೆ.

ನಮ್ಮ ನಾಡಿನ, ಅಂದರೆ ಕರ್ನಾಟಕದ ಬಳ್ಳಾರಿಯ ಕಪ್ಪಗಲ್ಲು, ಗಂಗಾವತಿಯ ಹಿರೇಬೆನಕಲ್ ಗುಡ್ಡ, ಬಿಲ್ಲಮರಾಯನ ಗುಡ್ಡ, ಬಾದಾಮಿಯ ಸುತ್ತಲಿನ ಕೆಲವು ನೆಲೆಗಳಲ್ಲಿ ಗಮನಾರ್ಹವಾದ ಆದಿಮ ಚಿತ್ರಕಲೆ ಸೃಷ್ಟಿಗೊಂಡದ್ದನ್ನು ಕಾಣಬಹುದು.

ಹಾಗೆಯೇ ಮಧ್ಯಪ್ರದೇಶದ ಬೆಟ್ವಾ ನದಿಯ ಬದಿಯ ಬೀಂಬೇಟ್ಕಾದ ಆದಿಮ ಗುಹೆ ಮತ್ತು ಶಿಲಾಶ್ರಯ ಚಿತ್ರಗಳು ಭಾರತೀಯ ಚಿತ್ರಕಲೆಯ ಮೊದಲ ರೂಪಗಳಾಗಿ ಕಾಣಿಸಿಕೊಂಡಿವೆ. ಆದಿಮ ನಿಷಾದ್, ಪುಲಿಂದ ಮತ್ತು ವನಾರ್ ಮೊದಲಾದ ಆದಿವಾಸಿ ಜನರು ಈ ಸಮುಚ್ಚಯದ ವಿವಿಧ ಎತ್ತರಗಳಲ್ಲಿ ಚಿತ್ರಿಸಿದ್ದನ್ನು ಕಾಣುತ್ತೇವೆ. ಬೀಂಬೇಟ್ಕಾದಲ್ಲಿ ಒಂದರ ಮೇಲೊಂದು ಅಥವಾ ಪದೇ ಪದೇ ಬಣ್ಣವನ್ನು ಅವೇ ಚಿತ್ರಗಳ ಮೇಲೆ ರೂಪಿಸಿರುವುದರಿಂದ ಮತ್ತು ಅವುಗಳ ಶೈಲಿಯ ವೈವಿಧ್ಯತೆಯಿಂದ ಈ ಚಿತ್ರಗಳನ್ನು ಹಲವು ಘಟ್ಟಗಳಲ್ಲಿ ವಿಭಾಗಿಸಲಾಗಿದೆ. ಆದರೆ ಅತೀ ಹಳೆಯವೆಂದರೆ ಮಧ್ಯಯುಗ ಮತ್ತು ಇತಿಹಾಸ ಕಾಲಕ್ಕೆ ಸೇರಿದವುಗಳು. ರೇಖೆ ಮತ್ತು ವರ್ಣಪ್ರಧಾನ ಚಪ್ಪಟೆ ಚಿತ್ರಗಳು, ಪ್ರಾಣಿಗಳು ಮತ್ತು ಮಾನವರ ಆಕಾರಗಳ ವಿವಿಧ ಆಯಾಮಗಳನ್ನು ಅರಗಿಸಿಕೊಂಡಿವೆ. ಜಟಿಲ ವಿನ್ಯಾಸಗಳು, ಸವಾರರು, ಕುದುರೆಗಳು, ಕಾದಾಟದ ದೃಶ್ಯಗಳು, ಬೇಟೆ, ಮೆರವಣಿಗೆಯ ದೃಶ್ಯಗಳು, ಸಂಗೀತ ಹಾಗೂ ನೃತ್ಯ ಕುರಿತ ಚಿತ್ರಗಳೇ ಅಲ್ಲದೆ ವೈವಿಧ್ಯಮಯ ರೂಪಗಳ ದೃಶ್ಯಕಲ್ಪನೆಗಳಿವೆ.

ಬೀಂಬೇಟ್ಕಾದ ಬಹುಪಾಲು ಚಿತ್ರಗಳು ಕೆಂಪು, ಕಾವಿ ಮತ್ತು ಬಿಳಿ ಬಣ್ಣಗಳಲ್ಲಿವೆ. ಕೆಲವು ಚಿತ್ರಗಳು ಹಸಿರು ಮತ್ತು ಹಳದಿ ಬಣ್ಣಗಳಲ್ಲಿವೆ. ಸುಮಾರು ೭೫೪ ಶಿಲಾಶ್ರಯಗಳು ಮತ್ತು ಸುಮಾರು ೫೦೦ ಬಂಡೆಯ ಭಿತ್ತಿ ಹಾಗೂ ಛಾವಣಿಗಳಲ್ಲಿ ಕೆಲವೊಮ್ಮೆ ತುಂಬ ಎತ್ತರದಲ್ಲಿ, ಮತ್ತೆ ಕೆಲವೊಮ್ಮೆ ತೀರ ಕೆಳಭಾಗದಲ್ಲಿಯೂ ಈ ಚಿತ್ರಗಳು ರೂಪಿಸಲ್ಪಟ್ಟಿವೆ. ದೃಶ್ಯಕಲೆಯ ದೃಷ್ಟಿಯಿಂದ ಪಚ್ಚಮಡಿ ಮತ್ತು ಹೋಶಂಗಾಬಾದ್ ಸುಂದರವಾದ ಚಿತ್ರಗಳನ್ನು ಹೊಂದಿವೆ.

ಕರ್ನಾಟಕದಲ್ಲಿ ರಾಯಚೂರು ಜಿಲ್ಲೆಯ ಮಸ್ಕಿ, ಕಲ್ಲೂರು; ಕಲಬುರಗಿ ಜಲ್ಲೆಯ ಯಾದಗಿರಿ ಬಳಿಯ ಬಳಿಚಕ್ರ ಮೊದಲಾದೆಡೆ ಆದಿಮ ಚಿತ್ರಗಳಿವೆ. ಗುಹೆ ಮತ್ತು ಕಲ್ಲಾಸರೆಯ ವರ್ಣಚಿತ್ರಗಳು ಸುಮಾರು ನಲವತ್ತಕ್ಕೂ ಹೆಚ್ಚು ನೆಲೆಗಳಲ್ಲಿ, ಕುಟ್ಟಿದ, ಗೀರಿದ ಚಿತ್ರಗಳು ಸುಮಾರು ಮೂವತ್ತು ನೆಲೆಗಳಲ್ಲಿ ಕಂಡುಬಂದಿವೆ. ಬಳ್ಳಾರಿ ಜಿಲ್ಲೆಯ ಕಮತಿಯಲ್ಲಿ ಹೊಸ ಶಿಲಾಯುಗದ ಎರಡು ಬೃಹತ್ ಶಿಲ್ಪಗಳು 'ರಕ್ಕಸಗಲ್ಲುಗಳು' ಹೆಸರಿನಲ್ಲಿ ಪ್ರಸಿದ್ಧವಾಗಿವೆ. ಮೊಳಕಾಲ್ಮೂರು ತಾಲೂಕಿನ ನುಂಕಪ್ಪನ ಗುಡ್ಡದ ಶಿಲಾಮೂರ್ತಿಗಳು ಸುಮಾರು ಹದಿನೈದು ಅಡಿ ಎತ್ತರದ ಸರಳ–ಸುಂದರ ಶಿಲ್ಪಗಳಾಗಿವೆ. (ಬಸ್ತಾರಿನ ಗೋರಿಗಳ ಬಳಿ ಸತ್ತವರ ಕಥಾನಕಗಳ ಚಿತ್ರ ಬರೆದು ನಿಲ್ಲಿಸುವ ಪರಿಪಾಠವಿದೆ. ಅಲ್ಲಿನ ಆದಿವಾಸಿಗಳು ಈ ಪರಂಪರೆಯನ್ನು ಮುಂದುವರಿಸಿದ್ದಾರೆ).

**ಆದಿಮರ ಕಲಾಸೃಷ್ಟಿಯ ಪ್ರೇರಣೆ**

ಪ್ರಾಗಿತಿಹಾಸಕಾರರ ದೃಷ್ಟಿಯಲ್ಲಿ ಆಹಾರ ಸಂಪಾದನೆ ಮತ್ತು ಆಹಾರವಾಗುವ ಪಶು–ಪಕ್ಷಿ, ಮರ ಗಿಡಗಳ ಸಮೃದ್ಧ ಬೆಳವಣಿಗೆ ಮತ್ತು ಅವುಗಳ ವಂಶಾಭಿವೃದ್ಧಿ ಆಗಬೇಕೆಂಬುದೇ ಆದಿಮ ದೃಶ್ಯಕಲಾ ಸೃಷ್ಟಿಗೆ ಪ್ರೇರಣೆಗಳಾಗಿವೆ. ಜೊತೆಗೆ ಅಲಂಕರಣೆ, ಮಾಂತ್ರಿಕತೆ, ಪರಿಕರಗಳ ದಾಖಲೀಕರಣಗಳೂ ಪ್ರಭಾವ ಬೀರಿವೆ. ಹಲವು ಉದ್ದೇಶಗಳ ಸಾಧನೆಗೆ ಯಶಸ್ವೀ ಬೇಟೆಯನ್ನು ಸೂಚಿಸುವ ಸಮೂಹ ನೃತ್ಯ, ಗರ್ಭ ಧರಿಸಿದ ಪ್ರಾಣಿ, ಈಟಿಯಿಂದ ತಿವಿಯಲ್ಪಟ್ಟ ಪ್ರಾಣಿ, ಬಣ್ಣದ ಸಾಂಕೇತಿಕ ಗುರುತುಗಳು– ಹೀಗೆ ವೈವಿಧ್ಯಮಯ ಚಿತ್ರಗಳನ್ನು ರಚಿಸುವ ಆಚರಣೆ ಬೆಳೆಯಿತು. ಜೊತೆಗೆ ಮಾಂತ್ರಿಕತೆಯಿಂದ ಪ್ರಕೃತಿಯನ್ನೇ ಮಾಟಮಾಡಬಹುದೆಂಬ ಹೊಸ ಚಿಂತನೆಗೂ ಮಾನವ ತೊಡಗಿದ. ಅಂತೆಯೇ ಪ್ರಾಣಿ–ಪಕ್ಷಿಗಳ ನಿಯಂತ್ರಣಕ್ಕಾಗಿ ಸಾಂಕೇತಿಕ ರೂಪಗಳು ಪ್ರಾರಂಭದ ಹೆಜ್ಜೆಗಳಂತೆ ಚಿತ್ರಗಳಲ್ಲಿ ಮೂಡಿಬಂದವು. ಪ್ರಕೃತಿಯ ಕುರಿತ ಭಯವನ್ನು ಈ ಮಾಂತ್ರಿಕರು ತಮ್ಮ ಯಜಮಾನಿಕೆಗೆ ಬಳಸಿಕೊಂಡರೆಂದು ಕಾಣುತ್ತದೆ. ನಾಲ್ವತ್ತು ಸಾವಿರ ವರ್ಷಗಳ ಹಿಂದಿನಿಂದಲೇ ಮಾಂತ್ರಿಕತೆ ಆದಿಮ ಜನರಲ್ಲಿ ಬೆಳೆದು ಬಂದಿದೆ ಎಂಬುದು ತಜ್ಞರ ಅಭಿಪ್ರಾಯ.

ಈ ಮಾಂತ್ರಿಕನೋ ಸರ್ವಶಕ್ತನಾಗಿದ್ದನು. ಹಿಂದಿನ ಮತ್ತು ತನ್ನ ತಲೆಮಾರಿನವರ ನಡುವಿನ ಕೊಂಡಿಯೂ ಆಗಿದ್ದನು. ಕೆಲವೊಮ್ಮೆ ಭೂತಪ್ರೇತಗಳೊಂದಿಗೆ ಹೋರಾಡಿ ಗೆಲ್ಲುವವನೂ ಆಗಿದ್ದನು. ಹಾಗಾಗಿ ಮಾಂತ್ರಿಕರ ಪಯಣ ಒಂದು ರೀತಿಯ ಆಕಾಶದ ಹಾರಾಟದ ಅನುಭವದಂತೆ ಚಿತ್ರಗಳಲ್ಲಿ ಮೂಡಿಬಂದಿವೆ. ಇಂತಹ ಮಾಂತ್ರಿಕರ ರೂಪಕಲ್ಪನೆಯೂ ಪಕ್ಷಿ ಸಂಬಂಧಿ ಸಶಕ್ತ ಸಾಂಕೇತಿಕತೆಯಿಂದ ಕೂಡಿವೆ. ಈ ಕಾಲದ ಮಾಂತ್ರಿಕನೇ ಕೆಲವೊಮ್ಮೆ ಶಿಲಾಶ್ರಯಗಳಲ್ಲಿ ಚಿತ್ರಿಸುವ ಸಾಮರ್ಥ್ಯ ಹೊಂದಿದ್ದನು.

**ಆದಿಮ ಸತ್ವ : ಶಬ್ದಲೋಕ**

ಆದಿಮರಿಗೆ ದೃಶ್ಯಲೋಕದ ಜತೆ ಜತೆಗೆ ಶಬ್ದಲೋಕವೂ ಹೊಸ ಹೊಳಹುಗಳನ್ನು ನೀಡಿರಬಹುದು. ಉದಾಹರಣೆಗೆ ಮಲ್ಲಾಪುರದ ಖಾನ್‌ಸಾಬ್ ಗುಹೆ ಅಥವಾ ಬೀಂಬೇಟ್ಕಾ ಹಾಗೂ ಸಿಟಿಲಪಡಿಯ ಆವರಣಗಳಲ್ಲಿ ಈಗ 'ವಿಶಿಷ್ಟ ಮೌನ ಆವರಿಸಿದೆ' ಶಬ್ದದೊಳಗಣ ನಿಶ್ಶಬ್ದದಂತೆ. ಹಾಗಾಗಿ ಆಚರಣೆ ಹಾಗೂ ಸಂಭ್ರಮಗಳ ಸಾಮೂಹಿಕ ನಡವಳಿಕೆಗಳ ದೃಶ್ಯ, ಶಬ್ದ ಎಲ್ಲವೂ ಪ್ರಭಾವಶಾಲಿಯಾಗಿಯೇ ದುಡಿಸಿಕೊಳ್ಳಲ್ಪಟ್ಟಿರ ಬೇಕು ಎನಿಸುತ್ತದೆ. ನಮ್ಮ ದೇಶದ ಜಗದಲಪುರ, ಕೊಂಡಗಾಂವ್, ನಾರಾಯಣಪುರ ಹಾಗೂ ಪಚ್ಚಮಡಿಗಳಲ್ಲಿ ಇಂತಹ ಬೆಳವಣಿಗೆಗಳು ಘಟಿಸಿವೆ. ಹಾಗೆ ನೋಡಿದರೆ ಇಡೀ ವಿಶ್ವದ ಆದಿಮ ಕಲೆಯ ಶಕ್ತಿ ಧಾರ್ಮಿಕ ಶಕ್ತಿಯೆಡೆಗೆ ಧಾವಿಸಿದ್ದು ಗಮನಾರ್ಹ ಬೆಳವಣಿಗೆಯಾಗಿದೆ ಎನ್ನಬಹುದು. ಈ ಪ್ರಭಾವದಲ್ಲಿ ಕ್ರಾಂತಿಕಾರಕ ಹೆಜ್ಜೆಗಳಾಗಿ ಕಾಣುತ್ತವೆ. ಪ್ರಕೃತಿಯೊಂದಿಗಿದ್ದೂ ಪ್ರಕೃತಿಯನ್ನು ಮೀರುವ ಪ್ರಯತ್ನ ಇದು ಎನ್ನಬಹುದು.







ಇಲ್ಲ. ಕರ್ನಾಟಕದ ಬಹುತೇಕ ಆದಿಮ ಚಿತ್ರಗಳಲ್ಲಿ ವೈವಿಧ್ಯತೆ ಇದೆ. ಗುಹೆ, ಸೀಳುಬಂಡೆ, ಹಾಸಲು ಬಂಡೆ, ಮುಂಚಾಚು ಬಂಡೆ, ಶಿಲಾಪೊಟರೆ, ಬಾಗುಬಂಡೆ, ಬಯಲುಬಂಡೆಯ ಆಶ್ರಯಗಳಲ್ಲಿ ಚಿತ್ರಗಳನ್ನು ರೂಪಿಸಲಾಗಿದೆ. ಇವುಗಳಲ್ಲೆಲ್ಲ ಮಾಂತ್ರಿಕ ಆಚರಣೆ, ಆರಾಧನೆ, ಶವಸಂಸ್ಕಾರ, ಕೃಷಿ ಪರಿಕರ, ಮಂಡಲ ವೃತ್ತ, ಹಸ್ತರೇಖಾ ಸಂಕೇತ, ಮೈಥುನ, ಸೂರ್ಯ, ಗಿಡಮರ, ಮಾನವರ ವೈವಿಧ್ಯಮಯ ರೂಪಗಳು, ಗೂಳಿ, ಎತ್ತು, ಕೋಣ, ಎಮ್ಮೆ, ಜಿಂಕೆ, ಕುದುರೆ, ಹುಲಿ, ಆನೆ ಇತ್ಯಾದಿಗಳಲ್ಲದೆ ಹಾವು, ಕುದುರೆ ಸವಾರರು, ನರ್ತನ ರೂಪಗಳು, ಬೇಟೆನಿರತರು ಇದೇ ಮೊದಲಾದ ಚಿತ್ರಗಳೂ ಇವೆ. ಬಹುತೇಕ ಕೆಂಪು ಬಣ್ಣವನ್ನು ಕಾಣುತ್ತೇವೆ. ಆದರೆ ಬೀಂಬೇಟ್ಕಾದಲ್ಲಿ ಕೆಂಪು ಮಾತ್ರವಲ್ಲದೆ ಹಸಿರು, ಹಳದಿ, ಕಪ್ಪು ಬಣ್ಣಗಳನ್ನು ಕಾಣಬಹುದು.

ಜಾಗತಿಕ ಆದಿಮ ಕಲೆಗೆ ಸುಮಾರು ಒಂದು ಲಕ್ಷ ವರ್ಷಗಳ ಇತಿಹಾಸವಿದ್ದರೆ, ನಮ್ಮಲ್ಲಿ ಸುಮಾರು ಹತ್ತು ಸಾವಿರ ವರ್ಷಗಳ ಇತಿಹಾಸವಿದೆ. ನಮ್ಮ ನಾಡಿನಲ್ಲಿ (ಕರ್ನಾಟಕ) ಉತ್ತರದಲ್ಲಿ ಆರಂಭಗೊಂಡು ದಕ್ಷಿಣದಲ್ಲೂ ಸೃಷ್ಟಿಗೊಂಡಿದೆ. ಬಳ್ಳಾರಿಯ ಕಪ್ಪಗಲ್ಲು ಗುಡ್ಡಗಳಲ್ಲಿ, ಗಂಗಾವತಿ ತಾಲೂಕಿನ ಹಿರೇಬೆನಕಲ್, ಬಿಲ್ಲಮರಾಯನ ಗುಡ್ಡ, ರಾಯಚೂರು ಜಿಲ್ಲೆಯ ಮಸ್ಕಿ, ಕಲ್ಲೂರು, ಕಲಬುರಗಿ ಜಿಲ್ಲೆಯ ಯಾದಗಿರಿ ಬಳಿಯ ಬಳಿಚಕ್ರವೂ ಸೇರಿದಂತೆ ಸುಮಾರು ಎಪ್ಪತ್ತಕ್ಕೂ ಹೆಚ್ಚು ನೆಲೆಗಳಲ್ಲಿ ಆದಿಮ ಚಿತ್ರಗಳಿವೆ. ಇವುಗಳಲ್ಲಿ ಗುಹಾ ಮತ್ತು ಶಿಲಾಶ್ರಯಗಳಲ್ಲಿ ಬಿಳಿ ಮತ್ತು ಕೆಂಪು ಬಣ್ಣಗಳಲ್ಲಿರುವ ಚಿತ್ರಗಳು ಬಯಲು ಬಂಡೆಗಳ ಮೇಲೆ ಕುಟ್ಟಿ, ಗೀರಿ ರಚಿಸಿದ ಚಿತ್ರಗಳು ಸುಂದರವಾಗಿವೆ. ರಾಮದುರ್ಗ, ಐಹೊಳೆ, ಬಾದಾಮಿ, ಪ್ರದೇಶಗಳಲ್ಲಿನ ಚಿತ್ರಗಳು ದಕ್ಷಿಣ ಭಾರತದ ಅತೀ ಪ್ರಾಚೀನ ಆದಿಮ ಚಿತ್ರಗಳಾಗಿವೆ.

**ಆದಿಮ ಚಿತ್ರ ವೈವಿಧ್ಯ**

ಕಾಲ ಗತಿಸಿದಂತೆ ಆದಿಮಾನವ ಹೊಸ ಶಿಲಾಯುಗದಲ್ಲಿ ವ್ಯವಸಾಯದ ಪ್ರಥಮ ಪಾಠಗಳನ್ನು ಕಲಿಯಲಾರಂಭಿಸಿದನು. ಆ ದಿನಗಳಲ್ಲಿ ಆದಿಮರ ವ್ಯವಸಾಯದ ಉಪಕರಣಗಳೂ ಚಿತ್ರಗಳಲ್ಲಿ ದಾಖಲಿಸಲ್ಪಟ್ಟವು. ಹಂಪೆಯ ಮಸಲಯ್ಯನ ಗುಡ್ಡದಲ್ಲಿ ಕಾಡುಪ್ರಾಣಿ–ಹಸುಗಳ ಜೊತೆಗೆ ವ್ಯವಸಾಯಕ್ಕೆ ಸಂಬಂಧಿಸಿದ ಉಪಕರಣಗಳನ್ನೂ ಕಾಣಬಹುದು. ಅಲ್ಲದೆ, ಭೂಮಿತಿ–ಜಾಮಿತಿ ಮತ್ತು ಸಾಂಕೇತಿಕ ರೇಖೆಗಳ ಭಾವನಿರೂಪಣೆಯ ಅನುಭವ ನೀಡುವ (ಕೋಡೆಡ್) ಭಾಷೆಯಂತಹ ರೂಪಗಳನ್ನೂ ಚಿತ್ರಿಸಲಾಗಿದೆ. ಬಹುತೇಕ ಕೆಂಗಾವಿ ಮತ್ತು ಬಿಳಿ ಬಣ್ಣದಲ್ಲಿವೆ. ಕೆಲವೊಮ್ಮೆ ಅಮೂರ್ತ ಸಂಜ್ಞೆಗಳೂ ಕೋಡೆಡ್ ಮೆಸೇಜುಗಳಂತೆ ಕಾಣುತ್ತವೆ. ಕೆಲವೊಮ್ಮೆ ಸರಳ–ಅರ್ಥಪೂರ್ಣ, ಬಹಳ ಸಲ ಸಂಕೀರ್ಣ ಅನುಭವ ನೀಡುತ್ತವೆ. ಅವನ್ನು ಚಿತ್ರಿಸಿದವರಿಗೆ ಅರ್ಥ ಸ್ಪಷ್ಟವಿರಬಹುದು, ಅವರ ಆ ಸಂದರ್ಭದ ಬದುಕಿಗೆ ಪ್ರಸ್ತುತವಾಗಿಯೂ ಇರಬಹುದು. ಆದರೆ ಹಳೆಯ ಶಿಲಾಯುಗದ ಚಿತ್ರಗಳು ಮಾತ್ರ ದೈನಂದಿನ ಬದುಕಿಗೆ ಸಂಬಂಧಿಸಿದ್ದಾಗಿರಲಿಲ್ಲ, ಬದಲಾಗಿ, ಮಾಂತ್ರಿಕ ಶಕ್ತಿಗೆ ಒಳಪಟ್ಟವುಗಳಾಗಿದ್ದವು. ಇಡೀ ಭಾರತದ ಆದಿಮ ಚಿತ್ರಕಲೆಯ ಶೈಲಿ ವೈವಿಧ್ಯಮಯವಾಗಿದ್ದರೂ ಬಣ್ಣಗಳಲ್ಲಿ ಏಕತೆಯನ್ನು ಕಾಣಬಹುದು. ಹಲವು ಕಾಲಘಟ್ಟಗಳಲ್ಲಿ ಚಿತ್ರಗಳು ಸಹಜವಾಗಿಯೇ ಹಲವು ಶೈಲಿಗಳಲ್ಲಿ ಮೂಡಿಬಂದಿವೆ.

ಹೊಸ ಶಿಲಾಯುಗದ ಸಂದರ್ಭದಲ್ಲಿ ಬಂಡೆಗಳ ಮೈವಳಿಕೆ, ಬಿರುಕುಗಳಂತಹ ಸಹಜತೆಗಳನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳಲ್ಪಟ್ಟವು. ಉದಾಹರಣೆಗೆ, ಚಿಕ್ಕರಾಮಪುರದ ಒನಕೆಕಿಂಡಿ ಶಿಲಾಶ್ರಯ ಒಂದರಲ್ಲಿ ಹೆಡೆಬಿಚ್ಚಿದ ಹಾವನ್ನು ನೋಡಬಹುದು. ಹಾಗೆಯೇ ಹಂಪೆಯ ಭರಮದೇವರ ಗುಂಡಿನಿಂದ ಸ್ವಲ್ಪ ದೂರದಲ್ಲಿ ಒಂದು ಬಂಡೆಯ ಮೇಲಿಂದ ನೀರು ಹರಿದು ಉಂಟುಮಾಡಿದ ಮೈವಳಿಕೆಯನ್ನು ಹರಿದುಹೋಗುವಿಕೆಗೆ ಪೂರಕವಾಗಿ ಚಿತ್ರಿಸಲಾಗಿದೆ. ಹೀಗೆ ಭಾರತದ ಎಲ್ಲೆಡೆ ಹಲವು ಕಾಲಗಳ ಹಿನ್ನೆಲೆಯಲ್ಲಿ ವೈವಿಧ್ಯಮಯ ಚಿತ್ರಗಳು ರಚನೆಗೊಂಡಿವೆ. ಮಧ್ಯಪ್ರದೇಶ, ಪಶ್ಚಿಮಬಂಗಾಳ, ಉತ್ತರಪ್ರದೇಶ, ಛತ್ತೀಸ್‌ಗಢ, ಮತ್ತು ಜಮ್ಮು, ಲಡಾಖ್, ಗುಜರಾತ್, ಕೇರಳ, ತಮಿಳುನಾಡು, ಆಂಧ್ರಪ್ರದೇಶಗಳಲ್ಲಿನ ಆದಿಮ ಚಿತ್ರಗಳು ಸಹಜವಾಗಿಯೇ ವಿವಿಧ ಕಾಲಘಟ್ಟಗಳಲ್ಲಿ ಚಿತ್ರಿತಗೊಂಡಿರುವುದರಿಂದ ಶೈಲಿಗಳಲ್ಲಿಯೂ ವೈವಿಧ್ಯತೆಯಿದೆ. ಆದರೆ ಪ್ರಕೃತಿ, ಪ್ರಾಣಿ, ಪಕ್ಷಿ, ಬೇಟೆ, ವಿವಿಧ ಆಚರಣೆಗಳು, ಅಲಂಕಾರ, ಕೃಷಿ ಉಪಕರಣಗಳು ಹಾಗೂ ಸಾಂಕೇತಿಕ ರೇಖೆ–ರೂಪಗಳಲ್ಲಿ ಒಂದು ಬಗೆಯ ಏಕಸೂತ್ರತೆ ಕಂಡುಬರುತ್ತದೆ.

ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲೂಕಿನ 'ಘಟ್ಟಮಾದಮಂಗಲ'ದ ಹತ್ತಿರ ಮತ್ತು ಟೇಕಲ್ ಹತ್ತಿರದ ಬೆಟ್ಟಗಳಲ್ಲೇ ಅಲ್ಲದೆ, ದಕ್ಷಿಣ ಕನ್ನಡ ಜಿಲ್ಲೆಯ ಕೆಲವೆಡೆ ಆದಿಮ ಚಿತ್ರಗಳಿದ್ದು, ಅವುಗಳಲ್ಲಿ ಎದ್ದುಕಾಣುವ ವ್ಯತ್ಯಾಸಗಳೇನೂ

**ಮೃತ್‌ಪಾತ್ರೆ ಚಿತ್ರಗಳು**

ಆದಿಮರ ನಿತ್ಯದ ಬಳಕೆಯ ಮಣ್ಣಿನ ಮಡಕೆ, ಗಡಿಗೆ ಇತ್ಯಾದಿ ಪಾತ್ರೆಗಳೂ ಹಲವು ಕಡೆ – ಹಲವು ರೀತಿಯಲ್ಲಿ ದೊರಕಿರುವುದನ್ನು ನೋಡಬಹುದು. ಕೃಷ್ಣಾ ನದಿಬಯಲು, ತುಂಗಭದ್ರಾ, ಕಾವೇರಿ, ಭೀಮಾ ನದಿ ಬಯಲು ಸಂಸ್ಕೃತಿಗಳಲ್ಲಿ ಮೃತ್ತಿಕೆಯ ಪಾತ್ರೆಗಳ ಮೇಲೆ ಆಲಂಕಾರಿಕ ಚಿತ್ರಗಳಿದ್ದು, ಅವುಗಳಲ್ಲಿ ವೈವಿಧ್ಯತೆಯನ್ನು ಕಾಣಬಹುದು. ತುಂಗಭದ್ರಾ ನದಿ ಬಯಲಲ್ಲಿ ಕಪ್ಪು, ಕೆಂಪು ಬಣ್ಣದ ಪಾತ್ರೆಗಳು, ಬಿಳಿ ಬಣ್ಣದ ರೇಖಾರೂಪಗಳನ್ನು ಅಲಂಕರಿಸಿಕೊಂಡಿವೆ. ಕೆಲವೊಮ್ಮೆ ಪ್ರಾಣಿ – ಪಕ್ಷಿಗಳ ರೇಖಾಚಿತ್ರಗಳೂ ರೂಪಿಸಲ್ಪಟ್ಟಿವೆ. ಆ ಸಂದರ್ಭದ ಶಿಲಾಶ್ರಯ ಚಿತ್ರಶೈಲಿಗೆ ಹತ್ತಿರವಾಗಿಯೇ ಇವೂ ಇವೆ. ಕಾವೇರಿ, ತುಂಗಭದ್ರಾ ಬಯಲಿನ ಬೂದುಬಣ್ಣದ ಪಾತ್ರೆಗಳು ಸುಡಲ್ಪಟ್ಟ ನಂತರ ಕೆಮ್ಮಣ್ಣಿನ ಬಣ್ಣದ ಸರಳ ಅಗಲ ರೇಖೆಗಳನ್ನು ಒಳಗೊಂಡಿವೆ. ಕೃಷ್ಣಾತೀರದ ಮಸ್ಕಿಯಲ್ಲಿ ಬೂದುವರ್ಣದ ಪಾತ್ರೆಗಳು ಬಹಳ ಪ್ರಾಚೀನ. ಮಸ್ಕಿ, ಪಿಕ್ಕಿಹಾಳ, ಕೊಡೇಕಲ್ಲು, ಬ್ರಹ್ಮಗಿರಿಗಳಲ್ಲೂ ಇವು ಸಿಕ್ಕಿವೆ. ಮಸ್ಕಿಯಲ್ಲಿನ ನೇರಳೆ ಬಣ್ಣದ ಚಿತ್ರಗಳಲ್ಲಿ ಅಡ್ಡ–ಉದ್ದ–ಓರೆ ಹಾಗೂ ಕತ್ತರಿಯಂತೆ ರೇಖಿಸಲ್ಪಟ್ಟಿರುವ ಸಮಾನಾಂತರ, ಬಿಡಿರೇಖೆಗಳಲ್ಲದೆ, ವಿಶಿಷ್ಟ–ವಿಚಿತ್ರ ರೇಖಾಚಿತ್ರಗಳೂ ಇವೆ. ಕೆಲವು ಜೋಡಿ ಮೀನು, ಕೊಕ್ಕರೆ, ಗಿಡಗಳ ಕೊಂಬೆ, ಬಾಣಗಳ ರೇಖಾರೂಪಗಳೂ ಚಿತ್ರಿತಗೊಂಡಿವೆ.

**ಆದಿಮ ಶಿಲ್ಪಗಳು**

ಕನ್ನಡ ಶಿಲ್ಪಕಲೆಯ ಚರಿತ್ರೆಯ ಮೊದಲ ಪುಟಗಳೆಂಬಂತೆ ಬಳ್ಳಾರಿ ಜಿಲ್ಲೆಯ ಹತ್ತಿರದ ಕಮತಿಯಲ್ಲಿನ ಇತಿಹಾಸಪೂರ್ವದ ಹೊಸ ಶಿಲಾಯುಗದ ಶಿಲ್ಪಗಳು ದೊರಕಿವೆ. ಈ ಆದಿಮ ಶಿಲ್ಪಗಳು ಭಾರತೀಯ ಶಿಲ್ಪಕಲೆಯ ಇತಿಹಾಸದ ದೃಷ್ಟಿಯಿಂದಲೂ ಗಮನೀಯ. ಒರಿಸ್ಸಾ ಹಾಗೂ ತಮಿಳುನಾಡಿನ ಒಂದೆರಡು ನೆಲೆಗಳಲ್ಲಿ ನಿಂತಿರುವ ಶಿಲ್ಪಗಳಿವೆ, ಆದರೂ ಕಮತಿಯ ಶಿಲ್ಪಗಳು ಸ್ಪಷ್ಟ ಮಾನವ ಆಕಾರಗಳನ್ನು ಹೊಂದಿರುವುದು ವಿಶೇಷ. ಆದರೆ ಈ ಶಿಲ್ಪಗಳ ಹತ್ತಿರ ಸುಳಿಯಲೂ ಆ ಹಳ್ಳಿಯ ಜನ ಹೆದರುವುದು ಅಚ್ಚರಿಯನ್ನುಂಟುಮಾಡುತ್ತೆ. ಇವು ಚಪ್ಪಡಿ ಕಲ್ಲಿನ ಚಪ್ಪಟೆ ಶಿಲ್ಪಗಳಾಗಿವೆ. ಶಿವಮೊಗ್ಗೆ ಜಿಲ್ಲೆಯ ಹೊಸನಗರ ತಾಲೂಕಿನ 'ನಿಲಸಕಲ್ಲು' ಊರಿನ ವಿಶಾಲ ದಿಬ್ಬದ ಉದ್ದಕ್ಕೂ ನಲ್ವತ್ತೈದು ಒರಟು ನಿಲುವುಗಲ್ಲುಗಳು ನಿಂತಿವೆ. ಅಮೂರ್ತ ರೂಪದ ಈ ಕಲ್ಲುಗಳು 'ಆಕಾಶಕ್ಕೆ ತಮ್ಮ ತುದಿಗಳನ್ನು ಗುರಿಯಾಗಿಸಿದಂತೆ ನಿಂತುಕೊಂಡಿವೆ. ವಿಶಿಷ್ಟ ಸಂದರ್ಭದ ಆಚರಣೆ, ನಂಬಿಕೆಗಳಿಂದ ಕೂಡಿದ ಕೌತುಕಮಯ ದೃಷ್ಟಿಯನ್ನು ಇವು ಅಡಗಿಸಿಕೊಂಡಿವೆ'. ಕರ್ನಾಟಕದ ಇತರೆಡೆಗಳಲ್ಲೂ ಅಷ್ಟೇನೂ ಗಮನಾರ್ಹವಲ್ಲದ, ಆದರೆ ಐತಿಹಾಸಿಕವಾಗಿ ಮತ್ತು ಆದಿಮ ಕಲಾ ಚರಿತ್ರೆಯ ದಾಖಲೆಯಾಗಿ ಮಹತ್ವ ಹೊಂದಿರುವ ಸಣ್ಣ ಪುಟ್ಟ ಶಿಲ್ಪಗಳು ದೊರಕಿವೆ. ಒಟ್ಟಾರೆಯಾಗಿ, ನಮ್ಮ ಪೂರ್ವಜರ ಆದಿಮ ಸತ್ವಗಳ ಕಲೆಯ ಸಂಪತ್ತಿನ, ಸೌಂದರ್ಯದ ಖಣಿ ಅಗಾಧವಾಗಿದೆ ಎಂಬುದರಲ್ಲಿ ಎರಡು ಮಾತಿಲ್ಲ. ಅನ್ವೇಷಣೆಯೂ ಇನ್ನೂ ನಡೆಯುತ್ತಲೇ ಇರುವುದರಿಂದ ಮತ್ತಷ್ಟು ಹೊಸ ಒಳನೋಟಗಳು ದಕ್ಕುವ ಸಾಧ್ಯತೆಗಳೂ ನಿಚ್ಚಳವಾಗಿವೆ.

**ಡಾ॥ ಶಿವಾನಂದ ಎಚ್. ಬಂಟನೂರ, ಹಂಪಿ**
ಶಂಭುಲಿಂಗಪ್ಪ ಬಿ. ಇವರ ಆಶ್ರಯ, ಡಾ॥ ಸುಹಾಸ್ ಮನೆ ಕ್ಲಿನಿಕ್ ಎದುರು
ಕಮಲಾಪುರ – ೫೮೩ ೨೨೧, ಬಳ್ಳಾರಿ ಜಿಲ್ಲೆ







**ಮನದೊಳಗಿನ ಮಾತು**
ಆಪ್ತ ಸಮಾಲೋಚನೆಗೆ
ಒಂದು ಪ್ರವೇಶಿಕೆ
*–ಗಣೇಶ್‌ರಾವ್ ನಾಡಿಗೇರ್*
**ಪುಟ : ೧೪೪**
**ಬೆಲೆ : ರೂ. ೧೧೦/–**
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಬೆಂಗಳೂರು – ೧

*ಆಪ್ತ ಸಮಾಲೋಚನೆ ಎಂಬುದೊಂದು ಚಿಕಿತ್ಸಾ ವಿಧಾನ. ಒತ್ತಡಗಳ ಜೊತೆ ಬಾಳಬೇಕಾದ ಇಂದಿನ ಸಂದರ್ಭದಲ್ಲಿ ಮಾರ್ಗದರ್ಶಿಗಳಾಗಿ ಒದಗಿ ಸಾಂತ್ವನದ ನುಡಿಗಳನ್ನಾಡಿ ವ್ಯಕ್ತಿಯ ಸಮಸ್ಯೆ ಪರಿಹರಿಸುವ ಆಪ್ತ ಸಮಾಲೋಚಕರು ನಮ್ಮ ಬಂಧುಗಳಿದ್ದಂತೆ. ಒತ್ತಡ ಮತ್ತು ವೈಯಕ್ತಿಕ ಕಾರಣಗಳಿಂದ ತಾನೇನು ಮಾಡಬೇಕು ಎಂದು ನಿರ್ಧಾರ ಕೈಗೊಳ್ಳಲು ಅನೇಕರು ಅಸಮರ್ಥರಾಗಿದ್ದು ಇಂತಹ ಚಿಕಿತ್ಸಾ ವಿಧಾನಗಳಿಂದ ಹೆಚ್ಚು ಆತ್ಮವಿಶ್ವಾಸ ಗಳಿಸಿ ನೆಮ್ಮದಿ ಕಂಡುಕೊಳ್ಳಲು ಸಾಧ್ಯ. ಸ್ನೇಹಿತರಂತೆ ನಮ್ಮ ಸಮಸ್ಯೆಗಳನ್ನು ತಾಳ್ಮೆಯಿಂದ ಕೇಳಿ, ನಮ್ಮಿಂದ ಸಮಸ್ಯಾ ಮೂಲವನ್ನು ಗುರುತಿಸಿ, ತಕ್ಕ ಮಾರ್ಗದರ್ಶನ ನೀಡುವುದು ಆಪ್ತ ಸಮಾಲೋಚನೆಯ ಒಂದು ಯಶಸ್ವಿ ವಿಧಾನ. ಆಪ್ತ ಸಮಾಲೋಚಕರು ತಮ್ಮಲ್ಲಿಗೆ ಸಹಾಯವನ್ನು ಅಪೇಕ್ಷಿಸಿ ಬರುವವರನ್ನು ಹೇಗೆ ವಿಶ್ವಾಸಕ್ಕೆ ತೆಗೆದುಕೊಂಡು ಹಂತಹಂತವಾಗಿ ಆತನ ಸಮಸ್ಯೆಯನ್ನು ಗುರುತಿಸಿ ಯಾವ ರೀತಿ ಚಿಕಿತ್ಸೆ ನೀಡುತ್ತಾರೆಂಬುದನ್ನೂ ವಿವರವಾಗಿ ತಿಳಿಸಿದ್ದಾರೆ. ದೈಹಿಕ – ಮಾನಸಿಕ ಒತ್ತಡಗಳನ್ನು ದೂರ ಮಾಡುವುದು ಇಲ್ಲಿನ ಉದ್ದೇಶ. ಲೇಖಕರು ತಮ್ಮ ಇಂತಹ ಸಮಾಲೋಚನಾ ಸಂದರ್ಭದಲ್ಲಿನ ಅನುಭವಗಳನ್ನು ಹಾಗೂ ಅದರಿಂದ ಸಿಕ್ಕಿರುವ ಸಂತೃಪ್ತಿಯನ್ನು ಓದುಗರೊಂದಿಗೆ ಹಂಚಿಕೊಂಡಿದ್ದಾರೆ. ನಿರ್ಧಾರಗಳನ್ನು ಕೈಗೊಳ್ಳಲು, ಭಯ – ಆತಂಕಗಳನ್ನು ದೂರ ಮಾಡಲು ಆತ್ಮವಿಶ್ವಾಸ ವೃದ್ಧಿಸಿಕೊಳ್ಳಲು ಈ ಪುಸ್ತಕ ನೆರವಾಗಬಲ್ಲುದು.*

**ಮಕ್ಕಳ ಪಾಲನೆ – ಆರೋಗ್ಯ** *ಡಾ॥ ಎಂ. ಡಿ. ಸೂರ್ಯಕಾಂತ*
**ಪುಟ : ೧೨೦** **ಬೆಲೆ : ರೂ. ೧೨೫/–**
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಬೆಂಗಳೂರು – ೫೬೦ ೦೦೧

*ನವಜಾತ ಶಿಶುವನ್ನು ಪಾಲನೆ ಮಾಡುವುದು ಇಂದಿನ ಉದ್ಯೋಗಸ್ಥ ದಂಪತಿಗಳಿಗೊಂದು ಸವಾಲೇ ಸರಿ. ಹಿಂದಿನ ಕಾಲದಲ್ಲಿದ್ದಂತೆ ಅನುಭವಿ ಹಿರಿಯರ ಮಾರ್ಗದರ್ಶನ ಇಂದು ಬಹಳ ಅಪರೂಪ. ವಿಭಕ್ತ ಕುಟುಂಬಗಳು ಹೆಚ್ಚಾಗಿದ್ದು ಪ್ರತಿಯೊಂದಕ್ಕೂ ಮನೆ ಕೆಲಸದವರ, ಆಯಾ, ಬೇಬಿ ಸಿಟರ್, ಕ್ರೀಚ್, ನೆರೆಮನೆಯವರ ಮೇಲಿನ ಅವಲಂಬನೆ ಹೆಚ್ಚಾಗಿದೆ. ಮಗುವಿಗೆ ಆರು ತಿಂಗಳಾಗುತ್ತಲೇ ಅನಿವಾರ್ಯವಾಗಿ ಕೆಲಸಕ್ಕೆ ಮರಳಬೇಕಾದ ದಂಪತಿಗಳು ಇದರಿಂದ ಕಂಗಾಲಾಗುತ್ತಾರೆ. ಈ ಪುಸ್ತಕದಲ್ಲಿ ಅಂತಹ ತಂದೆ ತಾಯಿಯರಿಗೆ ಮಗುವನ್ನು ನೋಡಿಕೊಳ್ಳುವುದು ಹೇಗೆಂಬ ಸಲಹೆ ಸೂಚನೆ ನೀಡಲಾಗಿದೆ. ಹೊಸಬರನ್ನು ನಂಬುವುದೇ ಕಷ್ಟವಾಗಿರುವಾಗ ಅವರ ವಶಕ್ಕೆ ಮಗುವನ್ನೊಪ್ಪಿಸಿ ತಾವು ಕಛೇರಿಯಲ್ಲಿ ಕೆಲಸಮಾಡುವುದು ಉದ್ವೇಗಕ್ಕೆ ದಾರಿಯೇ ಸರಿ. ಆತಂಕದ ಮೂಟೆಯೇ ಬೆನ್ನ ಮೇಲೆ ಕುಳಿತಂತಿರುತ್ತದೆ. ಇಂಥ ಸನ್ನಿವೇಶದಲ್ಲಿ ಜನನದಿಂದ ಸುಮಾರು ೫–೬ ವರ್ಷಗಳವರೆಗೆ ಮಕ್ಕಳ ಆರೋಗ್ಯ – ಪಾಲನೆ ಕಡೆ ನಿಗಾವಹಿಸುವುದು ಹೇಗೆಂದು ಮಕ್ಕಳ ತಜ್ಞರಾಗಿರುವ ವೈದ್ಯ ಲೇಖಕರು ವಿವರಿಸಿದ್ದಾರೆ. ಹೆತ್ತವರ ಆತಂಕ ದೂರಮಾಡುವಲ್ಲಿ ಇಲ್ಲಿನ ಅನೇಕ ಸಲಹೆ ಸೂಚನೆಗಳು ಇಂದಿನ ಕಾಲಕ್ಕೆ ಅತ್ಯುಪಯುಕ್ತವಾಗಿವೆ. ಹೆತ್ತವರು, ಪೋಷಕರು, ಬೇಬಿ ಸಿಟರ್‌ಗಳು ಸಹಾ ಓದಲೇ ಬೇಕಾದ ಕೃತಿಯಿದು.*




**ರಸ್ಕಿನ್ ಬಾಂಡ್ ಕತೆಗಳು** ಕನ್ನಡಕ್ಕೆ : ಡಿ.ಜಿ.ಮಲ್ಲಿಕಾರ್ಜುನ
**ಪುಟ : ೧೯೨** **ಬೆಲೆ : ರೂ. ೧೯೦/–**
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಬೆಂಗಳೂರು – ೫೬೦ ೦೦೧

*ಭಾರತದಲ್ಲಿ ನೆಲೆಸಿದ ಬ್ರಿಟಿಷ್ ಸಂಜಾತ ರಸ್ಕಿನ್ ಬಾಂಡ್‌ರವರು ಬರೆದ ಕತೆಗಳು ಮಕ್ಕಳ ಮಟ್ಟದಲ್ಲಿ ಮಾತ್ರ ನಿಲ್ಲದೆ ಅವನ್ನೂ ಮೀರಿ ಮುಂದಕ್ಕೆ ಸಾಗುತ್ತವೆ. ಇವು ಭಾರತದ ಪರಿಸರದ ಚೌಕಟ್ಟಿನಲ್ಲಿ ಬಂಧಿಸಲ್ಪಟ್ಟಿವೆ. ಎಳೆಯರಿಗೆ ಕತೆಗಳ ಮೂಲಕವೇ ಸುತ್ತಲ ಪರಿಸರದ ಪರಿಚಯ ಮಾಡಿಕೊಡಲಾಗಿದೆ. ಕತೆಗಳು ನ್ಯಾಯ ಅನ್ಯಾಯಗಳ ಸೂಕ್ಷ್ಮ ಅರಿವು ಮೂಡಿಸುತ್ತವೆ. ಮಾನವ ಪ್ರಬಲನಾದಂತೆ ಕಾಡು – ಪ್ರಾಣಿ – ಪಕ್ಷಿಗಳು ನಾಶವಾಗುವುದನ್ನು ಖಂಡಿಸುತ್ತ ಹುಲಿ – ಚಿರತೆಗಳನ್ನು ಬೆನ್ನಟ್ಟಿ ಜಾಡುಹಿಡಿದು ಅವುಗಳ ಸಂತತಿ ಕ್ಷಯಿಸುತ್ತಿರುವುದನ್ನು ವಿಷಾದದಿಂದ ನಿರೂಪಿಸುತ್ತಾರೆ. ಹೌದು, ಇದೊಂದು ತರಹದ ಯುದ್ಧವೇ ಸರಿ. ಹುಲಿ ಚಿರತೆಗಳಿಗೆ ಆಹಾರವಾಗಬೇಕಾದ ಸಸ್ಯಾಹಾರಿ ಪ್ರಾಣಿಗಳನ್ನು ಮನುಷ್ಯ ಆಹಾರವಾಗಿ ಬಳಸಿದಾಗ ಅವು ಊರಿನ ಕಡೆ ನುಗ್ಗಿ ದಾಳಿ ಮಾಡಿ ಕೊನೆಗೆ ನರ ಭಕ್ಷಕ ಆದಾಗ ಮಾನವನಿಗೆ ಉಳಿಗಾಲವಿಲ್ಲ. ಇಂಥ ಸತ್ಯವೊಂದನ್ನು, ಪರಿಸರ ಪ್ರೇಮದ ಕಾಳಜಿಯನ್ನು ಕತೆಗಳು ಹೇಳುತ್ತವೆ. ಇಲ್ಲಿನ ಯಾವ ಕತೆಗಳೂ ಕಾಲ್ಪನಿಕವಲ್ಲ; ಬದಲಿಗೆ ಈ ಪ್ರಪಂಚದಲ್ಲಿ ನಡೆದಿರಬಹುದಾದ, ಮುಂದೆ ನಡೆಯಬಹುದಾದ ಇಂದೂ ನಡೆಯುತ್ತಲೇ ಇರುವ ಪ್ರಸಂಗಗಳಾಗಿವೆ.*

ಭಾರತ ಸ್ವಾತಂತ್ರ್ಯ ಹುತಾತ್ಮ ಕವಿ **ಅಶ್ಫಾಖ್ ಉಲ್ಲಾಖಾನ್**




*ಮೂಲ : **ಎಂ. ಐ. ರಾಜಸ್ವಿ*** *ಕನ್ನಡಕ್ಕೆ : **ಜೆ. ಕಲೀಂ ಬಾಷ***
**ಪುಟ : ೧೬೦** **ಬೆಲೆ : ರೂ. ೧೬೦/–**
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್,** *ಬೆಂಗಳೂರು – ೫೬೦ ೦೦೧*

*ಭಾರತದ ಸ್ವಾತಂತ್ರ್ಯಕ್ಕಾಗಿ ಬ್ರಿಟಿಷರ ವಿರುದ್ಧ ಹೋರಾಡಿದ್ದಕ್ಕಾಗಿ ಗಲ್ಲಿಗೇರಿಸಲ್ಪಟ್ಟ ಧೀರ ಯುವಕ ಅಶ್ಫಾಖ್ ಉಲ್ಲಾಖಾನ್, ಇಂಥ ಹುತಾತ್ಮರನ್ನು ಮುಸ್ಲಿಂ ಎಂಬ ಕಾರಣಕ್ಕೆ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಉದ್ದೇಶಪೂರ್ವಕ ಕಡೆಗಣಿಸಲಾಗುತ್ತದೆ. ದೇಶ ಪ್ರೇಮಿಗಳಾಗಿ ಹಿಂದೂ – ಮುಸ್ಲಿಮರು ಜೊತೆಯಾಗಿಯೇ ಹೋರಾಡಿದ್ದಾರೆ. ಕೋಮುವಾದಿ ಮನೋಭಾವದಿಂದಾಗಿ ಇಂದು ನಾವು ತ್ಯಾಗ – ಬಲಿದಾನ ಮಾಡಿದ ವೀರರನ್ನು ಸಮಾನತೆಯ ತಕ್ಕಡಿಯಲ್ಲಿಟ್ಟು ತೂಗುವುದೇ ಇಲ್ಲ. ಈ ತಾರತಮ್ಯವನ್ನು ಲೇಖಕರು ಕೃತಿಯಲ್ಲಿ ಎತ್ತಿ ತೋರಿಸಿದ್ದಾರೆ. ಪ್ರೀತಿಯ ತಾಯಿ, ಸಹೋದರರು – ಸಹೋದರಿ, ಬಂಧುಗಳನ್ನು ಅಗಲಬೇಕಾದಾಗ, ಗಲ್ಲಿಗೇರುವ ಮುನ್ನ ತಾಯಿಗೆ ಬರೆದ ಪತ್ರದಲ್ಲಿ ದುಃಖ ತೋಡಿಕೊಂಡಿರುವ ಅಶ್ಫಾಖ್ ಎಲ್ಲರಿಗೂ ಸಾಂತ್ವನ ಹೇಳುವ ಒಬ್ಬ ದೇಶಪ್ರೇಮಿಯಾಗಿ ಕಾಣುತ್ತಾನೆ. ಬೇಟೆಗಾರನಂತೆ ಬೆನ್ನಟ್ಟುವ ಬ್ರಿಟಿಷ್ ಆಡಳಿತದ ವೈಖರಿ, ದೇಶಕ್ಕಾಗಿ – ಸ್ವಾತಂತ್ರ್ಯಕ್ಕಾಗಿ ಹೋರಾಡುವವರನ್ನು ಹೆಜ್ಜೆ ಹೆಜ್ಜೆಗೂ ಕಾಡುವ ಚಿತ್ರಣವೊಂದು ಇಲ್ಲಿ ಸಿಗುತ್ತದೆ. ಸ್ವಾತಂತ್ರ್ಯಪೂರ್ವದ ದೇಶಪ್ರೇಮಿಗಳು ಹೇಗಿದ್ದರೆಂಬುದೂ ಅವರ ಜೀವನ ಕ್ರಮವೂ ಇಲ್ಲಿ ಉಲ್ಲೇಖಗೊಂಡಿದೆ. ಮಹಾನ್ ಕ್ರಾಂತಿಕಾರಿ ಮಾತ್ರವೇ ಅಲ್ಲದೇ ಅಶ್ಫಾಖ್ ಉತ್ತಮ ಉರ್ದು ಕವಿಯಾಗಿಯೂ ಹೆಸರು ಮಾಡಿದ್ದಾರೆ. ಹಸ್ರತ್ ವಾರ್ಸಿ ಎಂಬ ಕಾವ್ಯನಾಮದಿಂದ ಬರೆದ ಕೆಲವು ಆಯ್ದ ಕವಿತೆಗಳೂ ಈ ಕೃತಿಯಲ್ಲಿವೆ. ಎಂ. ಐ. ರಾಜಸ್ವಿಯವರ ಮೂಲ ಕೃತಿಯನ್ನು ಜೆ. ಕಲೀಂ ಬಾಷ ಕನ್ನಡಕ್ಕೆ ಅನುವಾದಿಸಿದ್ದಾರೆ.*

– **ಇಂದಿರಾ ಕುಮಾರಿ,** *ಬೆಂಗಳೂರು*

# ಚುನಾವಣಾ ವೆಚ್ಚವನ್ನು ಸರಕಾರವೇ ಭರಿಸುವ ಮಾತು! ಎಷ್ಟರ ಮಟ್ಟಿಗೆ ಉಚಿತವಾದುದು?

**ಕು. ಸ. ಮಧುಸೂದನ**

ಎರಡನೇ ಬಾರಿಗೆ ಕೇಂದ್ರದಲ್ಲಿ ಅಧಿಕಾರ ಹಿಡಿದಿರುವ ಭಾಜಪ ಸರಕಾರ ಲೋಕಸಭೆ ಮತ್ತು ವಿಧಾನಸಭೆಗಳಿಗೆ ಏಕಕಾಲಕ್ಕೆ ಚುನಾವಣೆ ನಡೆಸುವ ಬಗ್ಗೆ ತನ್ನ ಹಳೆಯ ಗುಪ್ತಕಾರ್ಯಸೂಚಿಯನ್ನು ಮತ್ತೆ ಮುನ್ನೆಲೆಗೆ ತಂದಿದೆ. ಬಲಿಷ್ಠ ಕೇಂದ್ರ ಸರಕಾರವೊಂದನ್ನು ಸ್ಥಾಪಿಸುವುದರ ಮೂಲಕ ರಾಜ್ಯಗಳನ್ನು ದುರ್ಬಲಗೊಳಿಸುವ ಉದ್ದೇಶ ಹೊಂದಿರುವ ಈ ಏಕಕಾಲಕ್ಕೆ ಚುನಾವಣೆ ಎಂಬ ಘೋಷಣೆ, ಒಂದೇ ರಾಷ್ಟ್ರ, ಒಂದೇ ಭಾಷೆ, ಒಂದೇ ಧರ್ಮ, ಒಂದೇ ಪಡಿತರ ಎನ್ನುವ ಬಲಪಂಥೀಯ ಚಿಂತನೆಯ ಹಿನ್ನೆಲೆಯಿಂದ ಒಡಮೂಡಿ ಬಂದಂತಹುದು.

ಆದರೆ ತನ್ನ ಈ ನಡೆಗೆ ಅದು ನೀಡುತ್ತಿರುವ ಪ್ರಮುಖ ಕಾರಣ ಚುನಾವಣಾ ಭ್ರಷ್ಟಾಚಾರವನ್ನು ಕಡಿಮೆ ಮಾಡಬಹುದೆನ್ನುವ ಮತ್ತು ಚುನಾವಣಾ ವೆಚ್ಚವನ್ನು ಸರಕಾರವೇ ಭರಿಸುವ ಯೋಜನೆಯೊಂದನ್ನು ರೂಪುಗೊಳಿಸಬೇಕೆನ್ನುವುದಾಗಿದೆ. ಸರಕಾರಕ್ಕೆ ತಾವು ಕಟ್ಟುತ್ತಿರುವ ತೆರಿಗೆ ಹಣ ಪೋಲಾಗುತ್ತಿದೆಯೆಂದು ಅಲವತ್ತುಕೊಳ್ಳುವ ಮಧ್ಯಮ ವರ್ಗದ ಬೆಂಬಲ ಪಡೆಯಲೆಂದೆ ಭಾಜಪ ಚುನಾವಣಾ ವೆಚ್ಚದ ಬಗ್ಗೆ ಮಾತ್ರ ಮಾತಾಡುತ್ತಿದೆ.

ನಿಜಕ್ಕೂ ಇಂಡಿಯಾದಲ್ಲಿನ ರಾಜಕೀಯ ಪಕ್ಷಗಳ ಚುನಾವಣಾ ಖರ್ಚನ್ನು ಸರಕಾರವೇ ಭರಿಸುವುದರಿಂದ ಚುನಾವಣಾ ಅಕ್ರಮಗಳು ನಿಲ್ಲುತ್ತವೆ ಮತ್ತು ಕಪ್ಪುಹಣದ ಗಳಿಕೆಗೆ ಮತ್ತು ಸಂಗ್ರಹಕ್ಕೆ ಹಿನ್ನಡೆಯಾಗುತ್ತದೆ ಎಂಬ ಮಾತು ಇತ್ತೀಚೆಗೆ ಹೆಚ್ಚು ಹೆಚ್ಚು ಕೇಳಿ ಬರುತ್ತಿದೆ. ಅದರಲ್ಲೂ ಇತ್ತೀಚೆಗೆ ಏಕಕಾಲಕ್ಕೆ ಎಲ್ಲ ಚುನಾವಣೆಗಳನ್ನು ನಡೆಸುವ ಬಗ್ಗೆ ಪ್ರಧಾನ ಮಂತ್ರಿಗಳಾದ ಶ್ರೀ ನರೇಂದ್ರ ಮೋದಿಯವರು ಮಾತಾಡಿದ ನಂತರವಂತೂ ನಮ್ಮ ಬಹುತೇಕ ಮಾಧ್ಯಮಗಳು ಈ ಕುರಿತು ಹಲವು ಚರ್ಚೆಗಳನ್ನು ನಡೆಸುತ್ತ ಈ ಕ್ರಮದಿಂದ ರಾಷ್ಟ್ರದಲ್ಲಿನ ಚುನಾವಣಾ ಭ್ರಷ್ಟಾಚಾರ ಇಲ್ಲವಾಗಿ ನಾಡು ಸ್ವರ್ಗವಾಗಿ ಬಿಡುತ್ತದೆಯೆಂಬ ಹುಸಿ ಭ್ರಮೆಯೊಂದನ್ನು ಹುಟ್ಟು ಹಾಕಲು ಪ್ರಯತ್ನಿಸುತ್ತಿವೆ. ಇದರಿಂದ ಉತ್ತೇಜಿತರಾದ ನವಸಾಕ್ಷರಸ್ಥರು ತಮಗೆ ಲಭ್ಯವಿರುವ ಸಾಮಾಜಿಕ ಜಾಲತಾಣಗಳನ್ನು ಬಳಸಿಕೊಂಡು ಇಂತಹದೊಂದು ಕ್ರಮದಿಂದ ಮೋದಿಯವರು ರಾಜಕೀಯ ಪಕ್ಷಗಳ ಭ್ರಷ್ಟತೆಯನ್ನು ಇಲ್ಲವಾಗಿಸಿಬಿಡುತ್ತಾರೆಂದೂ, ಮುಂದೆ ನಮ್ಮ ಚುನಾವಣಾ ವ್ಯವಸ್ಥೆ ಸಂಪೂರ್ಣ ಪಾರದರ್ಶಕವಾಗಿಬಿಡುತ್ತದೆಯೆಂದೂ ಪ್ರಚಾರ ಕೈಗೊಳ್ಳುತ್ತಿದ್ದಾರೆ. ಇಂತಹ ಸಮಯದಲ್ಲಿ ಚುನಾವಣಾ ವೆಚ್ಚಗಳನ್ನು ಸರಕಾರವೇ ಭರಿಸುವ ವಿಷಯದ ಬಗ್ಗೆ ಸೂಕ್ಷ್ಮವಾಗಿ ಅಧ್ಯಯನ ಮಾಡಿ ಅದರ ಸಾಧಕಬಾಧಕಗಳನ್ನು ವಿಮರ್ಶಿಸಬೇಕಾಗಿದೆ. ಈ ನಿಟ್ಟಿನಲ್ಲಿ ಈ ಬರಹ ಒಂದು ಸಣ್ಣ ಪ್ರಯತ್ನವಷ್ಟೆ!

ಇದೀಗ ಚುನಾವಣೆಯ ಸಂಪೂರ್ಣ ವೆಚ್ಚವನ್ನು (ಪ್ರಚಾರದ ಹೊರತಾಗಿ) ಸರಕಾರವೇ ಭರಿಸುತ್ತಿದೆ ಎಂಬುದನ್ನು ಇದರ ಪರವಾಗಿ ಮಾತಾಡುವವರು ಮರೆಯುವುದು ಆಶ್ಚರ್ಯದ ಸಂಗತಿ. ಈಗಾಗಲೇ ಚುನಾವಣೆಗೆ ಅಗತ್ಯವಾದ ಮತದಾರರ ಪಟ್ಟಿಗಳನ್ನು, ಮತಯಂತ್ರಗಳನ್ನು, ಸರಕಾರವು ತನ್ನದೇ ಖರ್ಚಿನಲ್ಲಿ ಒದಗಿಸುತ್ತಿದೆ. ಇನ್ನು ಚುನಾವಣಾ ಕಾರ್ಯಕ್ಕೆ ಅಗತ್ಯವಾದ ಚುನಾವಣಾ ಸಿಬ್ಬಂದಿಯನ್ನು, ಶಾಂತಿಯುತ ಮತದಾನಕ್ಕೆ ಅಗತ್ಯವಿರುವ ಪೊಲೀಸ್ ಮತ್ತು ಅರೆಸೇನಾ ಪಡೆಯನ್ನು ನಿಯೋಜಿಸುವ ಸರಕಾರ ಅವರುಗಳ ವೇತನ, ಪ್ರಯಾಣಭತ್ಯೆ, ಮತ್ತಿತರೆ ಭತ್ಯೆಗಳನ್ನೂ ತಾನೇ ಖಜಾನೆಯಿಂದ ಭರಿಸುತ್ತಿದೆ. ಹೀಗೆ ಒಂದು

ಚುನಾವಣಾ ಪ್ರಕ್ರಿಯೆಯ ಸಂಪೂರ್ಣ ಜವಾಬ್ದಾರಿಯನ್ನು ನಿಭಾಯಿಸುವ ಸರಕಾರ ಅದಕ್ಕೆ ತಗಲಬಹುದಾದ ಎಲ್ಲ ವೆಚ್ಚವನ್ನು ತನ್ನ ಖಜಾನೆಯಿಂದ ಅಂದರೆ ಜನರ ತೆರಿಗೆ ಹಣದಿಂದಲೇ ನೀಡುತ್ತಿದೆ. ಚುನಾವಣೆಯ ಸಂಪೂರ್ಣ ವೆಚ್ಚವನ್ನು ಸರಕಾರವೇ ಭರಿಸುವಂತಾದಲ್ಲಿ ಇದು ತೆರಿಗೆದಾರರ ಮೇಲೆ ಮತ್ತಷ್ಟು ಹೊರೆಯಾಗುವುದು ಸತ್ಯ. ಅಭ್ಯರ್ಥಿಗಳ ಪ್ರಚಾರದ ಖರ್ಚೊಂದನ್ನು ಬಿಟ್ಟು ಉಳಿದೆಲ್ಲವನ್ನು ಸರಕಾರವೇ ಮಾಡುತ್ತಿರುವಾಗ ಅದನ್ನೂ ಸರಕಾರವೇ ಮಾಡಲು ಹೊರಟರೆ ಇಂಡಿಯಾದಂತಹ ಅಭಿವೃದ್ಧಿಶೀಲ ರಾಷ್ಟ್ರದ ಆರ್ಥಿಕತೆಗೆ ಅದನ್ನು ತಡೆದುಕೊಳ್ಳುವ ಶಕ್ತಿ ಇದೆಯೆಂದು ನನಗನ್ನಿಸುವುದಿಲ್ಲ.



ಚುನಾವಣಾ ವೆಚ್ಚವನ್ನು ಸರಕಾರವೇ ಭರಿಸುವ ಬಗೆಗಿನ ಸಾಧಕಬಾಧಕಗಳನ್ನು ಈಗಾಗಲೇ ಹಲವು ಸಮಿತಿಗಳು ಅಧ್ಯಯನ ಮಾಡಿವೆ. ಅವುಗಳಲ್ಲಿ: ತಾರ್ಕುಂಡೆ ಸಮಿತಿ, ಇಂದ್ರಜಿತ್ ಗುಪ್ತಾ ಸಮಿತಿ (೧೯೯೮), ಸಂವಿಧಾನ ಸುಧಾರಣೆ ಮತ್ತು ಕಾನೂನು ಸಮಿತಿಗಳು ಇವುಗಳಲ್ಲಿ ಪ್ರಮುಖವಾದವು. ವಿಶೇಷವೆಂದರೆ ಈ ಯಾವ ಸಮಿತಿಗಳೂ ಇದರ ಬಗ್ಗೆ ಧನಾತ್ಮಕ ಶಿಫಾರಸ್ಸುಗಳನ್ನು ಮಾಡಿಲ್ಲ. ಇಂಡಿಯಾದಲ್ಲಿನ ಕಾನೂನು ವ್ಯವಸ್ಥೆ, ಆರ್ಥಿಕ ವ್ಯವಸ್ಥೆ ಮತ್ತು ಸಾಮಾಜಿಕ ವ್ಯವಸ್ಥೆಗಳಲ್ಲಿ ಸರಕಾರವೇ ಚುನಾವಣಾ ವೆಚ್ಚವನ್ನು ಭರಿಸುವುದು ಕಷ್ಟಸಾಧ್ಯವೆಂದು ಈ ಸಮಿತಿಗಳು ಅಭಿಪ್ರಾಯ ಪಟ್ಟಿವೆ. ಈಗಾಗಲೇ ಸರಕಾರವೇ ಪರೋಕ್ಷವಾಗಿ ಬಹುತೇಕ ಚುನಾವಣಾ ವೆಚ್ಚವನ್ನು ಭರಿಸುತ್ತಿದ್ದು, ಇದೇ ಜನತೆಗೆ ಹೊರೆಯಾಗಿ ಪರಿಣಮಿಸಿದೆ ಎಂದೂ ಹೇಳಿವೆ.

ಈಗಾಗಲೇ ಈ ವ್ಯವಸ್ಥೆ ಇರುವ ಇಟಲಿ, ಸ್ಪೇನ್, ಆಸ್ಟ್ರೇಲಿಯಾ ಮತ್ತು ಇಸ್ರೇಲ್ ದೇಶಗಳಲ್ಲಿ ಸಹ ಈ ವ್ಯವಸ್ಥೆ ಸಂಪೂರ್ಣವಾಗಿ ಸಫಲವಾಗಿಲ್ಲ. ಆ ದೇಶಗಳ ಆಂತರಿಕ ಅಧ್ಯಯನದ ಪ್ರಕಾರ ಚುನಾವಣಾ ಪ್ರಚಾರದ ಖರ್ಚಾಗಲಿ, ಚುನಾವಣೆಗಳಲ್ಲಿ ಕಪ್ಪುಹಣದ ಬಳಕೆಯಾಗಲಿ ಕಡಿಮೆಯಾಗಿಲ್ಲ. ನಮ್ಮದೇ ಚುನಾವಣಾ ಆಯೋಗದ ಒಂದು ಅಂದಾಜಿನಂತೆ ೨೦೧೪ರಲ್ಲಿನ ಸಾರ್ವತ್ರಿಕ ಚುನಾವಣೆಗಳಿಗೆ ಸರಕಾರ ಖರ್ಚು ಮಾಡಿದ ಹಣ ಸರಿಸುಮಾರು ಹತ್ತು ಸಾವಿರ ಕೋಟಿ ರೂಪಾಯಿಗಳು. ಇನ್ನು ಪ್ರಚಾರ ಕಾರ್ಯಗಳಿಗಾಗಿ ರಾಜಕೀಯ ಪಕ್ಷಗಳು ಖರ್ಚು ಮಾಡಿರಬಹುದಾದ ಹಣದ ಮೊತ್ತ, ರಾಜಕೀಯ ಪಕ್ಷಗಳು ನೀಡಿದ ಅಂಕಿಅಂಶಗಳನ್ನೇ ನಂಬುವುದಾದಲ್ಲಿ, ಸುಮಾರು ಹತ್ತು ಸಾವಿರ ಕೋಟಿ ರೂಪಾಯಿಗಳು. ಆದರೆ ವಾಸ್ತವದಲ್ಲಿ ಇದು ಇನ್ನೂ ಹೆಚ್ಚಿರುವ ಸಾಧ್ಯತೆಗಳಿವೆ.

ಈ ಹಿನ್ನೆಲೆಯಲ್ಲಿ ನಾವು ಈ ವ್ಯವಸ್ಥೆಯಲ್ಲಿರುವ ಆರ್ಥಿಕ ಸಮಸ್ಯೆಗಳತ್ತ ನೋಡೋಣ: ಸುಮಾರು ೩೬೫ಮಿಲಿಯನ್ ಜನರು ಬಡತನದ ರೇಖೆಗಿಂತ ಕೆಳಗೆ ವಾಸ ಮಾಡುವ ಇಂಡಿಯಾದಂತಹ ದೇಶದಲ್ಲಿ ರಾಜಕೀಯ ಮಾಡುವ ಒಂದು ಸುಖದಾಯಕ ವರ್ಗಕ್ಕೆ ಜನರ ತೆರಿಗೆಯ ಹಣವನ್ನು ನೀಡುವುದು ಯಾವ ರೀತಿಯ ಸಾಮಾಜಿಕ ನ್ಯಾಯ? ಬದಲಿಗೆ ಈ ಹಣವನ್ನು ಕಲ್ಯಾಣ ಕಾರ್ಯಗಳಿಗೆ ವಿನಿಯೋಗಿಸುವುದೇ ಸೂಕ್ತವಾಗುತ್ತದೆ. ನಮ್ಮ ಅಧಿಕೃತ ಆರ್ಥಿಕ ವ್ಯವಸ್ಥೆಗೆ ಪರ್ಯಾಯವಾದ ಆರ್ಥಿಕ ವ್ಯವಸ್ಥೆಯೊಂದು ಕಾನೂನುಬಾಹಿರವಾಗಿ ಕಾರ್ಯನಿರ್ವಹಿಸುತ್ತಿರುವ ಇಂಡಿಯಾದಂತಹ ದೇಶದಲ್ಲಿ ಇದು ನಮ್ಮ ಆರ್ಥಿಕ ವ್ಯವಸ್ಥೆಯನ್ನು ಇನ್ನಷ್ಟು ದುರ್ಬಲಗೊಳಿಸುವುದು ಖಚಿತ. ಹಾಗೆಯೇ ಚುನಾವಣಾ ಪ್ರಚಾರದ ವೆಚ್ಚವನ್ನು ಸರಕಾರವೇ ನೀಡಿದರೂ, ವ್ಯಕ್ತಿಗಳಿಂದ ಮತ್ತು ಉದ್ಯಮಿಗಳಿಂದ ದೇಣಿಗೆ ಪಡೆಯುವುದನ್ನು ರಾಜಕೀಯ ಪಕ್ಷಗಳು ಮುಂದುವರೆಸುತ್ತಲೇ ಹೋಗುತ್ತವೆ. ಯಾಕೆಂದರೆ ಚುನಾವಣೆ ಮುಗಿದ ತಕ್ಷಣವೇ ಪಕ್ಷಗಳನ್ನು ವಿಸರ್ಜಿಸಲಾಗುವುದಿಲ್ಲ. ಬದಲಿಗೆ ಮುಂದಿನ ಚುನಾವಣೆ ಬರುವವರೆಗೂ ಪಕ್ಷವನ್ನು ನಿರ್ವಹಿಸುವ ಮತ್ತು ಪಕ್ಷದ ಪದಾಧಿಕಾರಿಗಳನ್ನು ಸಂಭಾಳಿಸುವ ಹೊಣೆಗಾರಿಕೆ ಪಕ್ಷಗಳ ಮೇಲಿದೆ ಎಂದು ನೆಪ ಹೇಳುವ ಪಕ್ಷಗಳು ದೇಣಿಗೆಯನ್ನು ಸಂಗ್ರಹಿಸುವುದನ್ನು ಮುಂದುವರೆಸುತ್ತವೆ.

ಇದರೊಂದಿಗೆ ನಮ್ಮಲ್ಲಿರುವ ಕಾನೂನು ವ್ಯವಸ್ಥೆಗಳು ಸಹ ಇಂತಹದೊಂದು ಪ್ರಕ್ರಿಯೆಗೆ ಪೂರಕವಾಗಿಲ್ಲದಿರುವುದು ಸಹ ಇದನ್ನು ಜಾರಿಗೆ ತರಲು ಅಡ್ಡಿಯಾಗಿದೆ. ಚುನಾವಣಾ ಅಕ್ರಮಗಳು ಕಂಡುಬಂದ ತಕ್ಷಣವೇ ಮೊಕದ್ದಮೆ ಹೂಡಿದರೂ, ತ್ವರಿತ ವಿಚಾರಣೆ ನಡೆಸಿ ಮೊಕದ್ದಮೆಗಳನ್ನು ಇತ್ಯರ್ಥಪಡಿಸುವ ವ್ಯವಸ್ಥೆಯೂ ನಮ್ಮ ದೇಶದಲ್ಲಿ ಇಲ್ಲದಿರುವುದು ಇನ್ನೊಂದು ಅಡಚಣೆಯಾಗಿದೆ. ಇಲ್ಲಿರುವ ಇನ್ನೊಂದು ವಿಶೇಷವೇನೆಂದರೆ, ಈ ವಿಷಯವನ್ನು ಪ್ರಸ್ತಾಪಿಸುವ ರಾಜಕೀಯ ಪಕ್ಷಗಳು ಆಗಬೇಕಿರುವ ನಿಜವಾದ ಚುನಾವಣಾ ಸುಧಾರಣೆಗಳ ಬಗ್ಗೆ ಜನರ ದಾರಿ ತಪ್ಪಿಸಲು ಪ್ರಯತ್ನಿಸುತ್ತಿವೆ. ಜೊತೆಗೆ ರಾಜಕೀಯ ಪಕ್ಷಗಳು ತಮ್ಮನ್ನು ಮಾಹಿತಿ ಹಕ್ಕು ಕಾಯಿದೆಯ ಅಡಿಯಲ್ಲಿ ಬರುವುದನ್ನು ತಪ್ಪಿಸಿಕೊಳ್ಳಲು ಹೀಗೆ ವಿಷಯಾಂತರ ಮಾಡುತ್ತಿವೆ. ಹಾಗೆ ನೋಡಿದರೆ ಚುನಾವಣಾ ಸುಧಾರಣೆ ಎಂದರೆ ಕೇವಲ ಚುನಾವಣೆಯ ವೆಚ್ಚವನ್ನು ಕಡಿಮೆ ಮಾಡುವುದು ಮಾತ್ರವಲ್ಲ ಅಪರಾಧಿ ಚಟುವಟಿಕೆಗಳಲ್ಲಿ ಭಾಗವಹಿಸಿದವರನ್ನು ಚುನಾವಣೆಗಳಿಂದ ದೂರ ಇಡುವುದು, ಅಭ್ಯರ್ಥಿಗಳು ಮತ್ತು ಪಕ್ಷಗಳು ತಮ್ಮ ಆದಾಯದ ಮೂಲಗಳನ್ನು ಪಾರದರ್ಶಕವಾಗಿ ಜನತೆಯ ಮುಂದಿಡುವುದು, ಜಾತಿ – ಧರ್ಮಗಳ ಹೆಸರುಗಳನ್ನು ಬಳಸಿಕೊಳ್ಳದೆ ರಾಜಕಾರಣ ಮಾಡುವುದು ಮುಂತಾದವುಗಳು ಕೂಡ ಸುಧಾರಣೆಗಳಲ್ಲಿ ಸೇರಿವೆ.

ಆದ್ದರಿಂದ ಮೊದಲು ಚುನಾವಣೆಗಳಲ್ಲಿ ಮತ್ತು ರಾಜಕಾರಣದಲ್ಲಿ ಅನಿವಾರ್ಯವಾಗಿರುವ ಹಲವು ಸುಧಾರಣೆಗಳನ್ನು ತಂದು ನಂತರದಲ್ಲಿ ಸರಕಾರವೇ ವೆಚ್ಚವನ್ನು ಭರಿಸುವ ವ್ಯವಸ್ಥೆ ಒಂದನ್ನು ಜಾರಿಗೊಳಿಸ ಬೇಕಾಗುತ್ತದೆ. ಇಲ್ಲದೇ ಹೋದಲ್ಲಿ ರಾಜಕೀಯ ಪಕ್ಷಗಳು ಸರಕಾರಿ ವೆಚ್ಚದ ಸೌಲಭ್ಯ ಅನುಭವಿಸುವುದರ ಜೊತೆಗೆ ಖಾಸಗಿಯಾಗಿ ಪಕ್ಷಕ್ಕೆ ನಿಧಿಯನ್ನು ಸಂಗ್ರಹಿಸುವ ಕೆಲಸವನ್ನೂ ಮುಂದುವರೆಸುತ್ತಾರೆ. ಈಗಾಗಲೇ ಸರಕಾರವು ಪರೋಕ್ಷವಾಗಿ ರಾಜಕೀಯ ಪಕ್ಷಗಳಿಗೆ ಹಣದ ಬದಲಿಗೆ ಬೇರೆ ರೀತಿಯ ಉಚಿತ ಸೇವೆಗಳನ್ನು ಒದಗಿಸುತ್ತಿದೆ ಎನ್ನುವುದನ್ನು ನಾವಿಲ್ಲಿ ನೆನಪಿಸಿ ಕೊಳ್ಳಲೇಬೇಕು. ಚುನಾವಣೆಯ ಸಂದರ್ಭದಲ್ಲಿ ರಾಜಕೀಯ ಪಕ್ಷಗಳಿಗೆ ಆಕಾಶವಾಣಿ ಮತ್ತು ದೂರದರ್ಶನಗಳಲ್ಲಿ ನಿಗದಿತ ಸಮಯಾವಕಾಶ ನೀಡಿ ಉಚಿತ ಪ್ರಚಾರಕ್ಕೆ ಸಹಕರಿಸುತ್ತಿದೆ. ಹೀಗಾಗಿ ಚುನಾವಣಾ ವೆಚ್ಚಗಳನ್ನು ಸರಕಾರವೇ ಭರಿಸುವುದರಿಂದ ಜನತೆ ನೀಡುವ ತೆರಿಗೆ ಅಧಿಕವಾಗುತ್ತದೆ. ಆದ್ದರಿಂದ ಈ ನೀತಿ ಜಾರಿಗೆ ತರುವ ಮೊದಲು ಕೆಲವು ಸುಧಾರಣಾ ಕ್ರಮಗಳನ್ನು ಚುನಾವಣಾ ಆಯೋಗ ಕೈಗೊಳ್ಳುವುದು ಅಗತ್ಯವಾಗಿದೆ.

**ಕು. ಸ. ಮಧುಸೂದನ**
ಸಿದ್ದರ ಬೀದಿ, ರಂಗೇನಹಳ್ಳಿ ಅಂಚೆ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ – ೫೭೭೧೪೪

ಮೌಲ್ಯಗಳಲ್ಲಿ ವಿಶ್ವಾಸ ಕಳೆದುಕೊಳ್ಳದ ಗಾಂಧೀಜಿ ಹೇಳಿದ್ದಿಷ್ಟೆ: "ಪಾಕಿಸ್ತಾನದಲ್ಲಿ ಹಿಂದೂಗಳನ್ನು ಅತ್ಯಂತ ಕ್ರೂರವಾಗಿ ನಡೆಸಿಕೊಳ್ಳಲಾಗುತ್ತಿದೆ ಎನ್ನುವುದನ್ನು ನಾನು ಬಲ್ಲೆ. ಆದರೆ ಆ ಕ್ರಿಯೆಗೆ ಇಲ್ಲಿ ಒಂದು ಪ್ರತಿಕ್ರಿಯೆಗೆ ತೊಡಗುವ ನಾನು ಅವರಿಗಿಂತಲೂ ನಿರ್ಲಜ್ಜನಾಗಬೇಕಾಗುತ್ತದೆ. ಪ್ರತೀಕಾರದಿಂದ ನಾವು ಏನನ್ನು ಸಾಧಿಸಲು ಸಾಧ್ಯವಿದೆ? ಉದಾಹರಣೆಗೆ, ನನ್ನ ಬದುಕನ್ನೇ ನೋಡಿ. ನನ್ನ ಹಿರಿಯ ಮಗ ಹರಿಲಾಲ್ ಅನೇಕ ಸಾರಿ ಇಲ್ಲಿಗೆ ಬರುತ್ತಾನೆ. ಪ್ರತಿಸಾರಿಯು ಸಮಜಾಯಿಷಿ ನೀಡುತ್ತಾನೆ. "ದುಷ್ಟರ ಸಂಗವನ್ನು ಬಿಡುತ್ತೇನೆ, ನಾನಿನ್ನು ಕುಡಿಯುವುದಿಲ್ಲ ಬಾಪು, ಎಲ್ಲ ದುಷ್ಟ ಚಟುವಟಿಕೆಗಳಿಂದಲೂ ದೂರವಿರುವ ನಿರ್ಧಾರ ಮಾಡಿದ್ದೇನೆ" ಎಂದೇ ಹೇಳುತ್ತಾನೆ. ಆದರೆ ಅವನೇ ಆಡಿದ ಒಂದು ಮಾತನ್ನೂ ಆತನಿಗೆ ಇದುವರೆಗೆ ಒಮ್ಮೆಯೂ ಪಾಲಿಸಲು ಆಗಿಲ್ಲ;



# ಮೌಲ್ಯ, ಸಮಾಧಿ ಮತ್ತು ಗಾಂಧೀಜಿ

ಡಾ|| ರಾಜಶೇಖರ ಮಠಪತಿ (ರಾಗಂ)

"If we admit that human life can be ruled by reason, then all possibility of life is destroyed."

*- Leo Tolstoy*

**ಯಾ**ವುದು ನಮ್ಮ ಜೈವಿಕ ಬದುಕಿಗೆ ಅತ್ಯಂತ ಅವಶ್ಯಕವಾಗಿತ್ತೊ ಅದನ್ನೊಂದು ಮೌಲ್ಯ ಎನ್ನುವುದರೊಂದಿಗೆ, ಅದಕ್ಕೊಂದು ಮೌಲ್ಯ ಕಟ್ಟುವುದರೊಂದಿಗೆ ಶತಮಾನಗಳಿಂದ ನಮ್ಮ ಬುದ್ಧಿ ಹಾಗೂ ಭಾವಕೋಶಗಳನ್ನು, ಆ ಮೂಲಕ ಇಡಿಯಾಗಿ ಮನುಷ್ಯ ಸಂಸ್ಕೃತಿಯನ್ನು ನಿರ್ದೇಶಿಸಿ, ಮುನ್ನಡೆಸಿದ ವಿಚಾರ ಹಾಗೂ ವ್ಯಕ್ತಿಗಳನ್ನು ಮಾನವ ಇತಿಹಾಸದ ಮಹಾ ಮೌಲ್ಯ ಎಂದೇ ಪರಿಗಣಿಸಲಾಗಿದೆ. ಮೌಲ್ಯ ಖಂಡಿತವಾಗಿಯೂ ಮನುಷ್ಯ ಸೃಷ್ಟಿಯೇ. ವ್ಯಕ್ತಿ ಅಥವಾ ಒಂದು ವಿಚಾರ ವೈಯಕ್ತಿಕ ನೆಲೆಯಲ್ಲಿಯೇ ಹುಟ್ಟಿ, ಹಲವು ಸತ್ವ ಪರೀಕ್ಷೆಗಳಲ್ಲಿ ಯಶಸ್ವಿಯಾಗಿ ಸಾಮುದಾಯಿಕವಾಗಿ ವಿಸ್ತಾರಗೊಂಡು ಮತ್ತು ಎಲ್ಲ ಕಾಲಕ್ಕೂ ಮಾದರಿ ಯಾದುದನ್ನು ನಾವು ಮೌಲ್ಯ ಎಂದು ಒಪ್ಪಿಕೊಂಡಿದ್ದೇವೆ. ಪರಂಪರೆಯ ಶ್ರೋತದ ಮೂಲಕ ನಮಗೆ ಬಳುವಳಿಯಾಗಿ ಬರುವ ಇಂಥ ಮೌಲ್ಯವನ್ನು ನಮ್ಮ ನೆಮ್ಮದಿಯ ವರ್ತಮಾನಕ್ಕಾಗಿ ಸೊಗಸಾದ ಭವಿಷ್ಯಕ್ಕಾಗಿ ಹೇರಿಕೊಂಡಿದ್ದೇವೆ ಕೂಡ.

ಮೌಲ್ಯದ ಅಪಮೌಲ್ಯೀಕರಣ ಸಾಧ್ಯವಿಲ್ಲ. ಹೀಗಾಗಿಯೇ ಅದು ಮೌಲ್ಯ. ಹಾಗಂತ ಮೌಲ್ಯ ಪ್ರಶ್ನಾತೀತವೇನೂ ಅಲ್ಲ. ಹಾಗೆ ನೋಡಿದರೆ ಪ್ರಶ್ನೆಯೇ ಮೌಲ್ಯದ ಮೌಲ್ಯವನ್ನು ಸಾಬೀತುಪಡಿಸುವ ಒರೆಗಲ್ಲು. ಆದರೆ ಪ್ರಶ್ನೆ ಒಡ್ಡುವುದು ಒರೆಗಲ್ಲಾಗಬೇಕಿಲ್ಲ. ನಾವು ಸ್ವಯಂ ಏನಾಗಿದ್ದರೂ ಸರಿಯೇ, ಮೌಲ್ಯವನ್ನು ಮಾತ್ರ ಮನಸೊ ಇಚ್ಛೆ ನೋಡುತ್ತೇನೆ ಎನ್ನುವ ವೈಚಾರಿಕ ಉದ್ಧಟತನ ಮೌಲ್ಯಗಳ ಪಲ್ಲಟಕ್ಕೆ ದಾರಿ ಮಾಡಿಕೊಡುತ್ತದೆ. ಅದು ಮುಂದೊಂದು ದಿನ ನಮ್ಮ ಭವಿಷ್ಯದ ವಿಷಯುಕ್ತ ಪುಟಗಳಿಗೆ ದಾರಿಯಾಗುತ್ತದೆ.

ಗೋಡ್ಸೆಯ ಗುಡಿ ಕಟ್ಟಿ ನಾವು ವೈಯಕ್ತಿಕವಾಗಿ ಪೂಜಿಸಬಹುದು. ಗಾಂಧೀಜಿಯ ಮೂರ್ತಿಯನ್ನು ಅವಮಾನಿಸಿ ಘನವಾದುದೇನನ್ನೋ ಒಂದು ಸಾಧಿಸಿದೆ ಎಂದುಕೊಳ್ಳಬಹುದು. ಗಾಂಧೀಜಿಯವರನ್ನು ಮುಸ್ಲಿಂ ಚೇಲಾ, ಪಾಕಿಸ್ತಾನಿ ಪಿಂಡ, 'ಅಹಿಂಸೆ' ಎಂಬ ಉಪಯೋಗಕ್ಕೆ ಬಾರದ ವಿಚಾರದ ಆರಾಧಕ, ನೆಹರೂ ಮನೆತನದ ಋಣ ಸಂದಾಯ ಮಾಡಿದ ಮುದುಕ, ದೇಶ ವಿಭಜನೆಗೆ ಕಾರಣನಾದವ, ಭಗತ್ ಸಿಂಗ್, ಸುಭಾಷ್‌ಚಂದ್ರ ಬೋಸ್ ಹೀಗೆ ಹಲವರು ಮುಂಚೂಣಿಗೆ ಬಾರದಂತೆ ನೋಡಿಕೊಂಡವ ಎಂದು ಅಬ್ಬರಿಸಿ, ಹೊಸದಾಗಿ ಕೋಮು ಆಧಾರಿತ ಇತಿಹಾಸ ಬರೆಯಬೇಕು ಎಂದುಕೊಂಡವರು ಮೌಲ್ಯ ಪಲ್ಲಟದ ಹುನ್ನಾರದಲ್ಲಿದ್ದಾರೆ ಎಂಬುದನ್ನು ಮರೆಯಬಾರದು. ಮೌಲ್ಯ ಪಲ್ಲಟದ ಇಂತಹ ಯತ್ನಗಳು ರಾಜಕೀಯ ಚೆಲ್ಲಾಟಗಳಷ್ಟೆ.

ಒಪ್ಪೋಣ, ಮನುಷ್ಯನ ತಂತ್ರ-ಕುತಂತ್ರ, ಹಠ, ಕಾರಸ್ಥಾನ ಅದಕ್ಕಾಗಿ ಹವಣಿಸುವ ರೀತಿ, ಇಡೀ ಜೀವನವನ್ನೇ ಭ್ರಮೆಗಳ ಗಾಳಿಗೆ ತೂರಿಬಿಡುವ ಸನ್ನದ್ಧತೆ, ಎಲ್ಲವೂ ಚಿಂತನಾರ್ಹ. ಒಂದು ಒಳ್ಳೆಯ ಅಥವಾ ಕೆಟ್ಟ ಮನಸ್ಸಿನ ತಯ್ಯಾರಿ ಬರೀ ಸ್ವತಂತ್ರ ಮತ್ತು ವೈಯಕ್ತಿಕವಾದುದಲ್ಲ ಎಂದು ನಾವು ಒಪ್ಪಲೇ ಬೇಕು. ಹೀಗೆ ಒಪ್ಪಿಕೊಂಡಾಗ ನಡೆದುಹೋದ ಪಾಪದ ಸಾಲ ತೀರಿಸಲು ನಾವು ಚಿಂತನಶೀಲರಾಗಬೇಕು ಎನ್ನಿಸುತ್ತದೆ. ಜೀಸಸ್‌ನನ್ನು ಕೊಂದವರು, ಶರಣರನ್ನು ಎಳಹೂಟೆ ಮಾಡಿದವರು, ಸಾಕ್ರೆಟೀಸ್‌ಗೆ 'ಹೆಮ್‌ಲಾಕ್' ಕೊಟ್ಟವರು, ಸೇಂಟ್ ಜೋನ್‌ಳನ್ನ ಬೆಂಕಿಗಿಟ್ಟವರು, ಗಾಂಧೀಜಿಯವರನ್ನು ಹತ್ಯೆಗೈದವರು ಯಾರೂ, ಯಾರೂ ನಮ್ಮ ಮನಸ್ಸನ್ನು ಬಿಡಿ, ಕನಿಷ್ಠ ನಮ್ಮ ಸಾರ್ವಜನಿಕ ಗೋಡೆಗಳ ಮೇಲೂ ಕೂಡ ಸ್ಥಾನ ಪಡೆಯಲಿಲ್ಲ. ಆದರೇನಾಯಿತು ಇತಿಹಾಸ ಸೇರಿದರಲ್ಲ? ಎಂದು ನಮ್ಮ ಮನಸ್ಸು ಹೇಳೀತು. ಅಂಥದಕ್ಕೊಂದು ಉತ್ತರ ಏನೆಂದರೆ ವರ್ತಮಾನದಲ್ಲಿ ಅರ್ಥ ಪಡೆಯದ ಬದುಕಿಗೆ ಇತಿಹಾಸದಲ್ಲಿ ಎಂಥ ಸ್ಥಾನ ದೊರೆತರೇನು? ಅಲ್ಲದೆ ಬಾಳೇ ಇಲ್ಲದ ಇಂಥ ಬದುಕುಗಳನ್ನು ಎಷ್ಟು ಕಾಲ ಜಪಿಸಿದರೇನು? ಆದಾಗ್ಯೂ ಚೈತನ್ಯಗಳನ್ನು ಪರೀಕ್ಷೆಗೆ ಒಳಪಡಿಸಿದ ಜೀವನಗಳನ್ನು ಚೈತನ್ಯಕ್ಕೆ ಕೊಟ್ಟಷ್ಟೇ ಪ್ರಾಮುಖ್ಯತೆ ಕೊಟ್ಟು ಕೆಲವು ಬಾರಿ ನೋಡಬೇಕಾಗುತ್ತದೆ, ಅಲ್ಲವೇ? ಹೂವಿನ ಅವಸಾನದ ನಂತರವೂ ವಾಸನೆ ಉಳಿಯುತ್ತದೆ. ಚಿಂತನೆ ಯಾವಾಗಲೂ ವಾಸನೆಯಂತೆ. ಅದು ನಿರಂತರ.

ಈ ಲೆಕ್ಕಚಾರಗಳೆಲ್ಲ ಏನೇ ಇರಲಿ, ನಮಗೆ ಬೇಕಾಗಿಯೂ ಬೇಡವಾಗಿಯೂ ನಮ್ಮ ಇತಿಹಾಸ, ವರ್ತಮಾನದ ಉದ್ಧರಣೆಯಾಗಿದ್ದಾರೆ ಗಾಂಧೀಜಿ. ಭವಿಷ್ಯದಿಂದಲೂ ಅವರನ್ನು ನಾವು ಧಿಕ್ಕರಿಸುವಂತಿಲ್ಲ. ರಜೆಯಾಗಿ, ಅಕ್ಟೋಬರ್ ೨ರ ಮೋಜಾಗಿ ಬಂದೇ ಬರುತ್ತಾರೆ ಗಾಂಧಿ. ಚೌಕ - ವೃತ್ತಗಳಲ್ಲಿ, ಕಾಲೇಜು, ಬಂದೀಖಾನೆಗಳಲ್ಲಿ, ಫೋಟೋ ಆಗಿ ಪುತ್ಥಳಿಯಾಗಿ, ಕಣ್ಣಿರಿಯುತ್ತಾರೆ ಗಾಂಧಿ. ಗುಂಡು - ಗೋಷ್ಠಿಗಳಲ್ಲಿ, ಸುಳ್ಳಿನ ಸಂತೆಯಲ್ಲಿ, ಕಾಳಸಂತೆಯಲ್ಲಿ ಪುತ್ಥಳಿಯಾಗಿ ಮಾರಾಟವಾಗುತ್ತಾರೆ ಗಾಂಧಿ. ಉಪವಾಸದ ನಾಟಕಗಳಲ್ಲಿ, ಧರ್ಮಾರ್ಥ ಚಿಂತನೆಗಳಲ್ಲಿ ಸಾಕ್ಷಿಯಾಗುತ್ತಾರೆ ಗಾಂಧಿ. ಗಾಂಧಿಯಿಲ್ಲದ ಯಾವುದಾದರೂ ಸ್ಥಳ ಅಥವಾ ಆಲೋಚನೆಯನ್ನು ನಾವು ಕಲ್ಪಿಸಿಕೊಳ್ಳಬಹುದೇ ? ನನಗಿದು ಬಿಡಿಸಲಾಗದ ಪ್ರಶ್ನೆ. ಹೀಗೆಲ್ಲಾ ಗಾಂಧಿಯ ಬಗ್ಗೆ ವಿವೇಚಿಸುತ್ತಾ ಅವರನ್ನು ನಾವೆಲ್ಲಿಗೆ ಕರೆದೊಯ್ದೆವು, ನಮ್ಮ ಸಾಮಾಜಿಕತೆ ಮತ್ತು ರಾಜಕೀಯದ ಯಾವ ಅಳತೆಗೋಲಾಗಿ ಅವರನ್ನು ಇಟ್ಟುಕೊಂಡೆವು ಎಂಬುದು ನನಗೆ ತಿಳಿಯುತ್ತಿಲ್ಲ.

೧೯೪೭ರ ಜುಲೈ ೧೮ರಂದು ಗಾಂಧೀಜಿ ಅತ್ಯಂತ ಮಹತ್ವದ ಮಾತೊಂದನ್ನು ಆಡಿದ್ದಾರೆ: "Politics will have some effect on the people only if carried on with a sense of Dharma and with purity of conduct." ಧರ್ಮವೋ, ರಾಜಕಾರಣವೋ ಅಥವಾ ಇವೆರಡು ಸೇರಿದ್ದನ್ನು ಕುರಿತು ಆಡಿದ ಗಾಂಧೀಜಿಯ ಈ ಮಾತಿಗೆ ಏನಾದರೂ ಅರ್ಥವುಂಟೆ? ಅಂಬೇಡ್ಕರರು ಹೇಳುವ "ಇತಿಹಾಸವನ್ನು ತಿಳಿಯದವನು ಇತಿಹಾಸವನ್ನು ಸೃಷ್ಟಿಸಲಾರ" ಎನ್ನುವ ಮಾತನ್ನು ಮುಂದಿಟ್ಟುಕೊಂಡು ನೋಡಿದಾಗಲೂ ಗಾಂಧೀಜಿ ನಮ್ಮ ಇತಿಹಾಸದ ಅವಿಭಾಜ್ಯ ಅಂಗವಲ್ಲವೆ? ಅವರನ್ನು ಇತಿಹಾಸ ಪುರುಷ ಎಂದು ಒಪ್ಪಿಕೊಳ್ಳುವುದಾದರೆ ಅವರ ಯಾವ ತಲ್ಲಣಗಳು, ಯಾತನೆಗಳು ನಮ್ಮ ಕರುಳನ್ನು ಹಿಂಡಿಸಿವೆ? ಗಾಂಧೀಜಿ ಒಬ್ಬ ಮನುಷ್ಯರಾಗಿಯೂ ಮನುಷ್ಯರನ್ನು ಕಾಡದಷ್ಟು ಏಕೆ ದೂರಾದರು?

ಕ್ಷಣ-ಕ್ಷಣಕ್ಕೂ ಹೆಜ್ಜೆ ತಪ್ಪುತ್ತಿದ್ದ ಭಾರತೀಯರ ನಾಗರಿಕ ಪ್ರಜ್ಞೆಯನ್ನು ಕಂಡು ಅಸಹಾಯಕರಾಗಿ ಗಾಂಧೀಜಿ ಸಿಡಿಮಿಡಿಗೊಂಡು 'ಯಂಗ್ ಇಂಡಿಯಾ'ದಲ್ಲಿ ೧೯೨೧ರಲ್ಲಿ ಬರೆದ ಮಾತೊಂದು ಹೀಗಿದೆ: "ಇದೀಗ ಭಾರತವು ಬೆಂಕಿ ಹೊತ್ತಿಕೊಂಡ ಮನೆಯಂತಿದೆ ಎಂಬುದು ನನ್ನ ನಂಬಿಕೆ. ದಿನದಿನವೂ ಅದರ ಮಾನವೀಯತೆಯು ಸುಟ್ಟು ಕರಕಲಾಗುತ್ತಿದೆ. ದಿನದಿನವೂ ದುಡಿಯಲು ಮತ್ತು ದುಡಿಮೆಯ ಫಲದಿಂದ ಅನ್ನವನ್ನು ಗಳಿಸಿಕೊಳ್ಳಲು ಅವಕಾಶವಿಲ್ಲದೆ ಅದು ಹಸಿವಿನಿಂದ ಸಾಯುತ್ತಿದೆ".

೩೦ ಕೋಟಿ ಭಾರತೀಯರೆನ್ನುವವರು ತಮ್ಮ ಮೌಲ್ಯಗಳನ್ನು ಗಾಳಿಗೆ ತೂರಿ, ಕರ್ತವ್ಯವೆನ್ನುವುದನ್ನು ಮರೆತಿರುವಾಗ ಸರಕಾರವನ್ನು ಏಕೆ ದೂಷಿಸಬೇಕು? - ಎನ್ನುತ್ತಿದ್ದ ಗಾಂಧೀಜಿಯವರಿಗೆ ತಮ್ಮ ಕೊನೆಯ ದಿನಗಳವರೆಗೂ ಈ ದೇಶದ ಮನಃಸ್ಥಿತಿಯಲ್ಲಿ ಬದಲಾವಣೆಯಾಗದೆ ಇದ್ದುದು ಖೇದದ ವಿಷಯವಾಗಿಯೇ



ಉಳಿಯಿತು. ಅಹಿಂಸೆಯ ಮಹಾನ್ ಆರಾಧಕರಾಗಿದ್ದ ಗಾಂಧೀಜಿ ತಮ್ಮ ಕೊನೆಯ ದಿನಗಳನ್ನೆಲ್ಲಾ ಹಿಂದೂ-ಮುಸ್ಲಿಂರ ರಕ್ತಗಳಿಂದ ಸಿಕ್ತವಾಗಿದ್ದ ಗಲ್ಲಿಗಳನ್ನು ತೊಳೆಯುವುದರಲ್ಲಿಯೇ ಕಳೆಯಬೇಕಾದದ್ದು, ಕೊನೆಗೆ ತನ್ನ ಬದುಕನ್ನು ಹಿಂಸೆಯಿಂದಲೇ ಅಂತ್ಯವಾಗಿಸಿಕೊಳ್ಳಬೇಕಾಗಿ ಬಂದದ್ದು ಎಂಥ ವಿಪರ್ಯಾಸವಲ್ಲವೇ?

೧೦೪೭ರ ಜುಲೈ ೧೮ರಂದು ದೆಹಲಿಯ ಭಂಗಿ ಕಾಲೋನಿಯಲ್ಲಿ ನಾಯಕರ ಗುಂಪೊಂದು ಗಾಂಧೀಜಿಯನ್ನು ಭೆಟ್ಟಿಯಾಯಿತು. ಅವು ಗಾಂಧೀಜಿ, 'ರಾಜಕೀಯವೂ ಧರ್ಮದ ಚೌಕಟ್ಟಿನಲ್ಲಿರಬೇಕು' ಎಂದು ಬೋಧಿಸುತ್ತಿದ್ದ ದಿನಗಳು. ಗಾಂಧೀಜಿ ಬೋಧಿಸುತ್ತಿದ್ದ ಧರ್ಮ ಹಿಂದೂ ಮತ್ತು ಮುಸ್ಲಿಂ ಮತಗಳನ್ನು ಮೀರಿದ ವಿವೇಕ ಮತ್ತು ವಿವೇಚನೆಯದಾಗಿತ್ತು. ಆದರೆ ಬಹುಪಾಲು ಸಿಖ್‌ರಿಂದ ಕೂಡಿದ್ದ ಈ ಗುಂಪಿಗೆ ಗಾಂಧೀಜಿಯ ಯಾವ ವಿಶ್ಲೇಷಣೆಗಳು, ಮೌಲ್ಯಗಳು ಮನವರಿಕೆಯಾಗುವ ಲಕ್ಷಣಗಳೂ ಇರಲಿಲ್ಲ. ಈ ದೇಶದಲ್ಲಿ ಮುಸ್ಲಿಂರು ಅಲ್ಪಸಂಖ್ಯಾತರು ಎನ್ನುವ ಒಂದು ನೆಪವನ್ನಿಟ್ಟುಕೊಂಡು ಗಾಂಧೀಜಿ ನಿರಂತರವಾಗಿ ಮುಸ್ಲಿಂರ ಬೆಂಬಲಕ್ಕೆ ನಿಂತಿರುವುದು ಸಿಖ್ ಯುವಕರ ಆಕ್ರೋಶಕ್ಕೆ ಕಾರಣವಾಗಿತ್ತು. ಪಾಕಿಸ್ತಾನವೇನೋ ಅಸ್ತಿತ್ವಕ್ಕೆ ಬಂತು ನಿಜ, ಆದರೆ ಅಷ್ಟಕ್ಕೆ ತೃಪ್ತರಾಗದ ಈ ಮುಸ್ಲಿಂರು ಮುಂದೊಂದು ದಿನ ಭಾರತದ ಪ್ರಮುಖ ನಗರಗಳಾದ ಆಗ್ರಾ, ಅಜ್ಮೀರ, ಅಲಿಘಡ್ ಮತ್ತು ದೆಹಲಿಗಳನ್ನೂ ಕೇಳಲು ಹಿಂಜರಿಯಲಾರರು ಎನ್ನುವುದೇ ಅವರ ವಾದ. "ಹಿಂಸೆಗೆ ಮುಸ್ಲಿಂರು ಕಾರಣವಾಗಿರುವಾಗ ಹಿಂದುಗಳಷ್ಟನ್ನೇ ಏಕೆ ಜರಿಯುತ್ತೀರಿ? ಇಷ್ಟೆಲ್ಲಾ ಅವಘಡಗಳು ಜರುಗಿದ ಮೇಲೂ ಮುಸ್ಲಿಂರನ್ನು ಏಕೆ ನಂಬುತ್ತೀರಿ? ಎನ್ನುವ ಸಿಖ್ ಯುವಕರ ಪ್ರಶ್ನೆ ಗಾಂಧೀಜಿಯವರ ಒಳಬೇನೆಗೆ ಕಾರಣವಾಗಿತ್ತು.

ಛಿದ್ರವಾಗುತ್ತಿದ್ದ ದೇಶ, ದಾರಿತಪ್ಪಿದ್ದ ಮಗ, ಸ್ವಾರ್ಥಪರವಾಗುತ್ತಿದ್ದ ರಾಜಕಾರಣ, ರಸ್ತೆ - ರಸ್ತೆಗಳಲ್ಲಿ ಅಮಾಯಕರ ಬಲಿ, ದೊಂಬಿ, ಲೂಟಿ, ಸ್ತ್ರೀ - ಮಾನಹರಣ, ಕುಸಿಯುತ್ತಿದ್ದ ಮೌಲ್ಯಗಳು - ಹೀಗೆ ಕುದಿಯುತ್ತಿದ್ದ ವರ್ತಮಾನವೆಂಬ ಬಾಣಲೆಯ ಪಕ್ಕದಲ್ಲಿ ನಿಂತಿದ್ದ ಗಾಂಧೀಜಿ ನಿರಾಯುಧ ಬಾಣಸಿಗರಾಗಿದ್ದರಷ್ಟೆ. ಮನುಷ್ಯನ ಹೃದಯ ಸೌಂದರ್ಯದಲ್ಲಿ, ಮೌಲ್ಯ ಗಳಲ್ಲಿ ವಿಶ್ವಾಸ ಕಳೆದುಕೊಳ್ಳದ ಗಾಂಧೀಜಿ ಹೇಳಿದ್ದಿಷ್ಟೆ: "ಪಾಕಿಸ್ತಾನದಲ್ಲಿ ಹಿಂದೂಗಳನ್ನು ಅತ್ಯಂತ ಕ್ರೂರವಾಗಿ ನಡೆಸಿಕೊಳ್ಳಲಾಗುತ್ತಿದೆ ಎನ್ನುವುದನ್ನು ನಾನು ಬಲ್ಲೆ. ಆದರೆ ಆ ಕ್ರಿಯೆಗೆ ಇಲ್ಲಿ ಒಂದು ಪ್ರತಿಕ್ರಿಯೆಗೆ ತೊಡಗುವ ನಾನು ಅವರಿಗಿಂತಲೂ ನಿರ್ಲಜ್ಜನಾಗಬೇಕಾಗುತ್ತದೆ. ಪ್ರತೀಕಾರದಿಂದ ನಾವು ಏನನ್ನು ಸಾಧಿಸಲು ಸಾಧ್ಯವಿದೆ? ಉದಾಹರಣೆಗೆ, ನನ್ನ ಬದುಕನ್ನೇ ನೋಡಿ. ನನ್ನ ಹಿರಿಯ ಮಗ ಹರಿಲಾಲ್ ಅನೇಕ ಸಾರಿ ಇಲ್ಲಿಗೆ ಬರುತ್ತಾನೆ. ಪ್ರತಿಸಾರಿಯು ಸಮಜಾಯಿಷಿ ನೀಡುತ್ತಾನೆ. "ದುಷ್ಟರ ಸಂಗವನ್ನು ಬಿಡುತ್ತೇನೆ, ನಾನಿನ್ನು ಕುಡಿಯುವುದಿಲ್ಲ ಬಾಪು, ಎಲ್ಲ ದುಷ್ಟ ಚಟುವಟಿಕೆಗಳಿಂದಲೂ ದೂರವಿರುವ ನಿರ್ಧಾರ ಮಾಡಿದ್ದೇನೆ" ಎಂದೇ ಹೇಳುತ್ತಾನೆ. ಆದರೆ ಅವನೇ ಆಡಿದ ಒಂದು ಮಾತನ್ನೂ ಆತನಿಗೆ ಇದುವರೆಗೆ ಒಮ್ಮೆಯೂ ಪಾಲಿಸಲು ಆಗಿಲ್ಲ; ಇಷ್ಟಾದಾಗ್ಯೂ ಇಂದು ಮತ್ತೆ ಆತ ಬಂದು ತನ್ನನ್ನು ತಾನು ಸುಧಾರಿಸಿಕೊಳ್ಳುವ ಮಾತುಗಳನ್ನು ಹೇಳುವುದಾದರೆ ನಾನು ಅವನ ಮೇಲೆ ಸಿಟ್ಟಿಗೇಳುವುದೆ? ನಾನು ಆತನನ್ನು ಧಿಕ್ಕರಿಸಲಾದೀತೆ? ಇಲ್ಲ, ಖಂಡಿತವಾಗಿಯೂ

(೬೨ನೇ ಪುಟಕ್ಕೆ)

# ಕರ್ನಾಟಕದ ವಸಾಹತು ವಿರೋಧಿ ಹೋರಾಟದ

# ಎರಡು ಪ್ರಮುಖ ಮಹಿಳಾ ಮಾದರಿಗಳು





೧೬ನೇ ಶತಮಾನದಲ್ಲಿ ಅಬ್ಬಕ್ಕದೇವಿಯಂತಹ ಹೆಣ್ಣೊಬ್ಬಳು ರಾಣಿಯಾಗಿ ಇಡೀ ಸಂಸ್ಥಾನದ ಕುರಿತು ದಿಟ್ಟ ನಿರ್ಧಾರವನ್ನು ಯಾವುದೇ ಮುಲಾಜಿಲ್ಲದೆ ತೆಗೆದುಕೊಂಡಿದ್ದಳು. ಆ ನಂತರ ಬರುವ ರಾಣಿ ಚೆನ್ನಮ್ಮ ಅಂತಹುದೇ ನಿರ್ಧಾರಕ್ಕೆ ಬದ್ಧಳಾದಳು. ಅದಾದ ನಂತರ ಕೂಡ ಅನೇಕ ರಾಣಿಯರೂ, ಅಷ್ಟೇ ಏಕೆ ೧೮೫೭ರ ನಂತರ ಸಮಗ್ರ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡ ಅದೆಷ್ಟೊ ಸಾಮಾನ್ಯ ಮಹಿಳೆಯರೂ ಕೂಡ ಇವತ್ತಿಗೂ ನಮ್ಮ ಕಣ್ಣಿಗೆ ದಿಟ್ಟ ನಾರಿಯರು. ಸಮಾನತೆಗಾಗಿ ಅಲವತ್ತುಕೊಂಡು ಕೂರುವ ಬದಲಾಗಿ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿ ಪುರುಷರಿಗೆ ಸಮಾನವಾಗಿ ಹೋರಾಡಿದರು. ಸಮಸ್ಯೆ ಚಿಕ್ಕದಾಗಲಿ, ದೊಡ್ಡದಾಗಲಿ, ಯಾವುದೇ ರೀತಿಯದ್ದಾಗಲಿ ದಿಟ್ಟತನದಿಂದ ಎದುರಿಸಬೇಕಾದ್ದು ಹೆಣ್ಣಾಗಲಿ, ಗಂಡಾಗಲಿ ಪ್ರತಿಯೊಬ್ಬರ ಮನೋಧರ್ಮವಾಗಬೇಕೆನ್ನುವ ನಿಲುವನ್ನು ತೋರಿಸಿಕೊಟ್ಟು ಹೆಣ್ಣುಮಕ್ಕಳಿಗೆಲ್ಲ ಮಾದರಿಯಾದರು. ಧೈರ್ಯ, ಶೌರ್ಯದಿಂದ ಇತಿಹಾಸದ ಪುಟದಲ್ಲಿ ದಾಖಲಾದ ಎಲ್ಲ ಹೆಣ್ಣುಮಕ್ಕಳಿಗೂ ರಾಣಿ ಚೆನ್ನಮ್ಮ ಅಥವಾ ರಾಣಿ ಅಬ್ಬಕ್ಕದೇವಿಯರಂತೆ ಸಮಾನ ಮನೋಧರ್ಮದ ಮನೆಯ ವಾತಾವರಣವೇನೂ ದೊರೆತಿಲ್ಲ.

**ಕ**ನ್ನಡದಲ್ಲಿ ಒಂದು ಗಾದೆ ಇದೆ, "ಬೆರಳು ತೋರಿಸಿದರೆ ಹಸ್ತ ನುಂಗಿದರು" ಅಂತ. ಎಷ್ಟು ನಿಜ ನೋಡಿ. ನಿಮ್ಮ ದೇಶದಲ್ಲಿ ಬಹಳ ಸಂಪತ್ತಿದೆ, ಬಹಳಷ್ಟು ಸಾಂಬಾರು ಪದಾರ್ಥಗಳಿವೆ. ನಮ್ಮ ದೇಶದಲ್ಲಿ ಅದಕ್ಕೆ ಬಹಳ ಬೇಡಿಕೆಯಿದೆ. ನಾವು ಅವುಗಳ ವ್ಯಾಪಾರ ಮಾಡುತ್ತೇವೆ. ನಮಗೆ ನಿಮ್ಮೊಡನೆ ವ್ಯವಹಾರ ಮಾಡಲು ಅವಕಾಶ ಕೊಡಿ ಎಂದು ನಮ್ಮ ದೇಶದ ಬಂದರು ಪ್ರದೇಶಗಳಿಗೆ ಬಂದಿಳಿದ ಬ್ರಿಟಿಷರು ಈಸ್ಟ್ ಇಂಡಿಯಾ ಕಂಪೆನಿ ಹೆಸರಿನಲ್ಲಿ ವ್ಯಾಪಾರ ಶುರುಮಾಡಿ, ನಿಧಾನಕ್ಕೆ ಆದರೆ ಸ್ಪಷ್ಟವಾಗಿ ಗುರಿಯಿಟ್ಟಿದ್ದು ನಮ್ಮ ನೆಲದ ಮೇಲೆ! ಮೊಟ್ಟೆ ಆಸೆಗೆ ಬಂದವರು ಕೋಳಿ ಹೊತ್ತೊಯ್ದ ಹಾಗೆ.

ನಮ್ಮಲ್ಲೂ ಅದಕ್ಕೆ ಅನುಕೂಲವಾಗುವಂತಹ ವಾತಾವರಣಕ್ಕೇನು ಕೊರತೆಯಿರಲಿಲ್ಲವೆನ್ನಿ. ಒಂದೊಂದು ಪ್ರಾಂತ್ಯ ಒಬ್ಬೊಬ್ಬ ರಾಜನ ಆಡಳಿತದಿಂದ ಒಂದೊಂದು ದೇಶವೆನ್ನಿಸಿಕೊಂಡಿದ್ದ ಕಾಲವದು. ಸ್ವಾತಂತ್ರ್ಯಪೂರ್ವದ ಭಾರತದ ಇತಿಹಾಸವೇ ಬಲು ರೋಚಕ ಮತ್ತು ಭಿನ್ನ. ಇಂತಹದ್ದೊಂದು ಪರಿಸ್ಥಿತಿಯಲ್ಲಿ ರಾಜ – ರಾಜರ ನಡುವೆ ವೈಮನಸ್ಸು, ಹೊಂದಾಣಿಕೆ, ಯುದ್ಧ, ಸಂಧಾನಗಳೆಲ್ಲವೂ ಮಾಮೂಲಿನಂತಾಗಿದ್ದವು. ತನ್ನ ರಾಜ್ಯ ವಿಸ್ತರಿಸುವ ನೆಪದಲ್ಲಿ ರಾಜರುಗಳು ನೆರೆಯ ರಾಜ್ಯಗಳ ಮೇಲೆ ದಂಡೆತ್ತಿ ಹೋಗುವುದು, ಆ ರಾಜ್ಯವನ್ನು ತನ್ನ ಕೈವಶ ಮಾಡಿಕೊಳ್ಳಲೆತ್ನಿಸುವುದು ಪದೇ ಪದೇ ನಡೆಯುವಂತಹವುಗಳಾಗಿದ್ದವು. ಇವೆಲ್ಲಕ್ಕೂ ಮುಖ್ಯ ಕಾರಣ ಭೂ ಒಡೆತನ, ಸಂಪತ್ತಿನ ಕ್ರೋಢೀಕರಣ, ಬಲಶಾಲಿ ಮತ್ತು ಚಕ್ರವರ್ತಿ ಎನ್ನಿಸಿಕೊಳ್ಳುವ ಹಪಾಹಪಿ, ರಾಜ್ಯ ಬೆಳೆಸುವ ಉದ್ದೇಶ ಮುಂತಾದವುಗಳಾಗಿರುತ್ತಿದ್ದವು. ಇವೆಲ್ಲಕ್ಕೂ ಪೂರಕ ವಾತಾವರಣ ನಿರ್ಮಿಸುತ್ತಿದ್ದುದು ಮನುಷ್ಯ ಸಹಜ ಮನಸ್ಥಿತಿಯಾದ ಒಬ್ಬರ ಮೇಲೆ ಒಬ್ಬರಿಗೆ ಹುಟ್ಟುತ್ತಿದ್ದ ದ್ವೇಷ, ಅಸೂಯೆಗಳು. ಇಂತಿಪ್ಪ ಆಗಿನ ಪರಿಸ್ಥಿತಿಯ ಸಂಪೂರ್ಣ ಲಾಭ ಪಡೆದವರು ಮಾತ್ರ ಮೊದಲು ಬಂದ ಪೋರ್ಚುಗೀಸರು ಮತ್ತು ನಂತರ ಬಂದ ಬ್ರಿಟಿಷರು.

ವ್ಯಾಪಾರಕ್ಕೆಂದು ಬಂದ ಬ್ರಿಟಿಷರು ಕ್ರಮೇಣ ಸಾಧ್ಯವಾದಲ್ಲೆಲ್ಲ ರಾಜರ ಆಂತರಿಕ ಆಡಳಿತದಲ್ಲಿ ಮೂಗು ತೂರಿಸುತ್ತಾ ರಾಜಕೀಯವಾಗಿ ನೆಲೆನಿಲ್ಲಲು ಪ್ರಯತ್ನಿಸಿದರು. ತನ್ನದೇ ಆದ ಸೈನ್ಯ ಕಟ್ಟಿಕೊಂಡು ಯಾವ ಯಾವ ರಾಜ್ಯದಲ್ಲಿ ರಾಜನನ್ನು ಸೋಲಿಸಿ ಆಡಳಿತದಿಂದ ಕೆಳಗಿಳಿಸಿ ತನ್ನ ಹತೋಟಿಗೆ ತಂದುಕೊಳ್ಳಲು ಸಾಧ್ಯವೊ ಅಲ್ಲೆಲ್ಲ ರಾಜ್ಯ ಕಿತ್ತುಕೊಂಡು ತನ್ನದಲ್ಲದ ದೇಶದಲ್ಲಿ ತನ್ನವರಲ್ಲದ ಜನರ ಮೇಲೆ ತಮ್ಮ ಅಧಿಕಾರ ಚಲಾಯಿಸ ತೊಡಗಿದರು. ಈ ಎಲ್ಲ ಪ್ರಕ್ರಿಯೆಗಳಿಗೆ ಕಳಶವಿಟ್ಟಂತೆ ಡಾಲ್ ಹೌಸಿ ತಂದ "ಮಕ್ಕಳಿಲ್ಲದ ರಾಜರ ರಾಜ್ಯಕ್ಕೆ ದತ್ತು ಪುತ್ರರಿಗೆ ಹಕ್ಕು ನಿರಾಕರಣೆ" ಕಾನೂನು ಇಲ್ಲಿನ ರಾಜರುಗಳ ಪಾಲಿಗೆ ಅಕ್ಷರಶಃ ಉರುಳಾಯಿತು. ಇಂತಹ ಪ್ರತಿಕೂಲ ಪರಿಸ್ಥಿತಿಯ ಸಂದರ್ಭದಲ್ಲಿ ಈ ಕಾನೂನನ್ನು ಧಿಕ್ಕರಿಸಿ ಬ್ರಿಟಿಷರ ವಿರುದ್ಧ ತಿರುಗಿಬಿದ್ದು, ಆ ಮೂಲಕ ತದ ನಂತರ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದ ಮಹಿಳೆಯರಿಗೆಲ್ಲ ಮಾದರಿಯೆನ್ನಿಸಿಕೊಂಡು ಇತಿಹಾಸದ ಪುಟ ಸೇರಿದವಳು ಕಿತ್ತೂರಿನ ರಾಣಿ ಚೆನ್ನಮ್ಮ.

**ಪಲ್ಲವಿ ಇಡೂರ**

ಹೆಣ್ಣುಮಕ್ಕಳ ಶಿಕ್ಷಣವೇ ಅಪರೂಪವಾಗಿದ್ದ ಆ ಕಾಲದಲ್ಲಿ ಹುಟ್ಟಿ ಚಿಕ್ಕವಯಸ್ಸಿನಲ್ಲೇ ಕುದುರೆ ಸವಾರಿ, ಕತ್ತಿವರಸೆ, ಬಿಲ್ಲುವಿದ್ಯೆಗಳನ್ನು ಕಲಿತು ಪುಟ್ಟ ಊರಿನಲ್ಲಿ ಗಟ್ಟಿಗಿತ್ತಿ ಹೆಣ್ಣುಮಗಳೆನ್ನಿಸಿಕೊಂಡವಳು ಚೆನ್ನಮ್ಮ. ಕಿತ್ತೂರಿನ ರಾಜ ಮಲ್ಲಸರ್ಜ ದೇಸಾಯಿಯನ್ನು ಮದುವೆಯಾಗಿ ಕಿತ್ತೂರಿನ ರಾಣಿಯಾಗಿ ಪೀಠವನ್ನಲಂಕರಿಸಿದ ಚೆನ್ನಮ್ಮ ಎಲ್ಲ ರಾಣಿಯರಂತೆ ಅಂತಃಪುರಕ್ಕೆ ಮೀಸಲಾಗಿರಲಿಲ್ಲ. ತನ್ನ ೩೮ನೇ ವಯಸ್ಸಿಗೆ ಪತಿಯನ್ನು ಕಳೆದುಕೊಂಡು, ಹರೆಯದಲ್ಲಿ ಇದ್ದ ಒಬ್ಬನೇ ಮಗನನ್ನು ಕಳೆದು ಕೊಂಡು ರಾಜ್ಯಕ್ಕೆ ದಿಕ್ಕಿಲ್ಲದಾದಾಗ ಶಿವಲಿಂಗಪ್ಪನೆಂಬ ಬಾಲಕನನ್ನು ದತ್ತು ಪಡೆದು ಪಟ್ಟ ಕಟ್ಟಿ ಆತನ ಪರವಾಗಿ ತಾನೇ ರಾಜ್ಯಭಾರಕ್ಕೆ ನಿಲ್ಲುತ್ತಾಳೆ ಈ ರಾಣಿ.

ಅಲ್ಲಿಯ ತನಕ ಭರತಖಂಡದಲ್ಲಿದ್ದ ಬೇರೆ ಎಲ್ಲ ರಾಜ್ಯಗಳ ಕಥೆಯಂತೆಯೇ ಇದ್ದ ಕಿತ್ತೂರಿನ ಕಥೆ ಅಲ್ಲಿಂದ ಬದಲಾಗುತ್ತದೆ. ತನ್ನದಲ್ಲದ ನಾಡಿನಲ್ಲಿ ಹಕ್ಕು ಸ್ಥಾಪಿಸಲು ಬಂದ ಬ್ರಿಟಿಷರು ತಮ್ಮವೇ ರಾಜ್ಯಗಳನ್ನಾಳಿಕೊಂಡು ಬದುಕಿದ್ದ ರಾಜರುಗಳಿಗೆ ಕಟ್ಟಳೆಗಳನ್ನು ವಿಧಿಸಲು ಅದಾಗಲೇ ಶುರುಮಾಡಿದ್ದರು. ಇಂಥ ಸಮಯದಲ್ಲಿ ಕಿತ್ತೂರಿನ ರಾಣಿಯ ನಿರ್ಧಾರ ಅವರನ್ನು ಸಹಜವಾಗಿಯೇ ಕೆರಳಿಸಿತು. ಅತ್ತಕಡೆ ಬ್ರಿಟಿಷರು ಕುದ್ದು ಹೋದರೆ ಇತ್ತ ನಮ್ಮ ನೆಲದ ಮೇಲೆ ಕಟ್ಟಳೆ ವಿಧಿಸಲು ಅವರ್ಯಾರು ಎನ್ನುತ್ತ ಚೆನ್ನಮ್ಮ ಕೆರಳಿನಿಂತಳು. ರಾಜ್ಯವನ್ನು ಕಂಪೆನಿಯ ಆಡಳಿತಕ್ಕೆ ಹಸ್ತಾಂತರಿಸಲು ಆದೇಶಿಸಿದಾಗ ಸಂಧಾನಕ್ಕೆ ಪ್ರಯತ್ನಿಸಿದರೂ ಫಲಕಾರಿಯಾಗದಿದ್ದಾಗ ತಿರುಗಿಬಿದ್ದು ಯುದ್ಧ ಸಾರಿಯೇಬಿಟ್ಟಳು. ಹೀಗೆ ಬ್ರಿಟಿಷರು ಮತ್ತು ಕಿತ್ತೂರಿನ ರಾಣಿ ಚೆನ್ನಮ್ಮನ ಸೇನೆಯ ನಡುವೆ ನಡೆದ ಮೊದಲ ಯುದ್ಧದಲ್ಲಿ ರಾಣಿಯ ಸೈನ್ಯ ವೀರಾವೇಶದ ಕಾದಾಟ ನಡೆಸಿ ಜಯಶಾಲಿಯಾಗಿ ಬ್ರಿಟಿಷರನ್ನು ಓಡುವಂತೆ ಮಾಡಿದಳು. ಆದರೆ ಪುನಃ ದಂಡೆತ್ತಿ ಬಂದಾಗ ಸೋತು ಸ್ವತಃ ಸೆರೆ ಸಿಕ್ಕು ಬ್ರಿಟಿಷರ ಯುದ್ಧ ಕೈದಿಯಾಗಿ ಜೈಲು ಸೇರಿ ಜೈಲಿನಲ್ಲೇ ಕೊನೆಯುಸಿರೆಳೆದಳು ವೀರರಾಣಿ ಚೆನ್ನಮ್ಮ. ಸ್ವತಃ ಯೋಧೆಯಾಗಿ, ಸಶಕ್ತ ಸೈನ್ಯದೊಂದಿಗೆ ಯುದ್ಧ ಭೂಮಿಯಲ್ಲಿ ಕಾದಾಡಿ ಬ್ರಿಟಿಷರ ವಿರುದ್ಧ ತಿರುಗಿಬಿದ್ದ ಮೊದಲ ಮಹಿಳೆಯೆನ್ನಿಸಿಕೊಂಡು ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಮಹಿಳೆಯರ ಪಾಲ್ಗೊಳ್ಳುವಿಕೆಗೆ ಸ್ಫೂರ್ತಿಯೆನಿಸಿದಳು.

> **ವೃದ್ಧಾಪ್ಯ**
>
> ಈ ಕನ್ನಡಿಗೆ
> ಧೂಳು ಕವಿದಿಹುದೆ?
> ನನ್ನ ಕಣ್ಣೇ
> ಮಂಜಾಗಿಹುದೆ?
>
> **ವ. ಉಮೇಶ ಕಾರಂತ**
> ಮಂಗಳೂರು – ೫೭೫೦೦೧

**ರಾಣಿ ಅಬ್ಬಕ್ಕ**

೧೮೦೦ರ ಆರಂಭಿಕ ದಶಕಗಳಲ್ಲಿ ಚೆನ್ನಮ್ಮ ರಾಣಿ ಇತಿಹಾಸ ನಿರ್ಮಿಸಿದರೆ ಆಕೆಗೂ ಮೊದಲೇ ಅಂದರೆ ೧೫೦೦ರ ಸಮಯದಲ್ಲೇ ಪೋರ್ಚುಗೀಸರೊಂದಿಗೆ ಯುದ್ಧಕ್ಕೆ ನಿಂತ ವೀರವನಿತೆ ಉಳ್ಳಾಲದ ರಾಣಿಯಾಗಿದ್ದ ಅಬ್ಬಕ್ಕ. ಆಗಿನ್ನೂ ಬ್ರಿಟಿಷರ ಆಗಮನವಾಗಿರಲಿಲ್ಲ. ವ್ಯಾಪಾರಕ್ಕೆಂದು ಬಂದ ಪೋರ್ಚುಗೀಸರು ಗೋವಾದ ಕರಾವಳಿ ತೀರವನ್ನು ಆಕ್ರಮಿಸಿ ತಮ್ಮ ವಸಾಹತನ್ನು ಸ್ಥಾಪಿಸಿ ಅಧಿಕಾರ ಹಿಡಿದು ಇಡೀ ಗೋವಾ ಮತ್ತು ಮರಾಠರ ಪ್ರದೇಶವನ್ನು ತಮ್ಮ ಹಿಡಿತಕ್ಕೆ ತಂದುಕೊಂಡ ಮೇಲೆ ನೇರವಾಗಿ ತಮ್ಮ ಚಿತ್ತ ನೆಟ್ಟಿದ್ದು ಅಕ್ಕಿ ಮತ್ತು ಕಾಳುಮೆಣಸಿಗೆ ಪ್ರಸಿದ್ಧಿಯಾಗಿದ್ದ ಮಂಗಳೂರು ಪ್ರದೇಶದ ಮೇಲೆ.

ಮೊದಮೊದಲು ವ್ಯಾಪಾರ ವ್ಯವಹಾರಕ್ಕೆ ಸೀಮಿತವಾಗಿದ್ದ ಅವರ ಕಾರ್ಯ ಯೋಜನೆಗಳು ನಿಧಾನವಾಗಿ ರಾಜ್ಯವನ್ನು ಆಕ್ರಮಿಸುವ ಹಂತಕ್ಕೆ ಹೋಗಿ ತಲುಪಿತು. ಆಗ ಅಲ್ಲಿ ರಾಜ್ಯವಾಳುತ್ತಿದ್ದವಳು ಚೌಟ ಮನೆತನದ ರಾಣಿ ಅಬ್ಬಕ್ಕ ಚೌಟ. ತುಳುನಾಡಿನ ಪದ್ಧತಿಯಾದ 'ಅಳಿಯ ಸಂತಾನ'ದ ಪ್ರಕಾರ ಸೋದರಮಾವ ತಿರುಮಲರಾಯನಿಂದ ಪಟ್ಟಾಭಿಷೇಕ ಮಾಡಿಸಿಕೊಂಡು ಪಟ್ಟವನ್ನೇರಿದ ಅಬ್ಬಕ್ಕದೇವಿ ಚೌಟ ತನ್ನ ಭಯವಿಲ್ಲದ ದಿಟ್ಟ ನಿಲುವಿನಿಂದಾಗಿ ಉಳ್ಳಾಲದ "ಅಭಯರಾಣಿ"ಎಂದೇ ಪ್ರಸಿದ್ಧಿಯಾಗಿದ್ದಳು.

ಸ್ವತಂತ್ರವಾಗಿ, ಸುಭದ್ರವಾಗಿ ರಾಜ್ಯಭಾರ ನಡೆಸಿಕೊಂಡು ಹೋಗುತ್ತಿದ್ದ ರಾಣಿ ಅಬ್ಬಕ್ಕದೇವಿಯ ವಿವಾಹವು ಮಂಗಳೂರನ್ನು ಆಳುತ್ತಿದ್ದ ಬಂಗರಾಜ ಲಕ್ಕಪ್ಪ ಅರಸನೊಂದಿಗೆ ನಡೆಯುತ್ತದೆ. ದುರದೃಷ್ಟವಶಾತ್ ಆ ಮದುವೆ ಹೆಚ್ಚು ಸಮಯ ಬಾಳದೆ ರಾಣಿ ಅಬ್ಬಕ್ಕದೇವಿ ತನ್ನ ಸ್ವಸ್ಥಾನದ ಆಧಿಪತ್ಯವನ್ನು ಕೈಗೆತ್ತಿಕೊಂಡು ಉಳ್ಳಾಲಕ್ಕೆ ಮರಳುತ್ತಾಳೆ. ತನ್ನ ಮುರಿದುಬಿದ್ದ ಮದುವೆಯಿಂದ ಹಗೆತನ ಬೆಳೆಸಿಕೊಂಡ ಬಂಗರಾಜ ಲಕ್ಕಪ್ಪ ಅರಸ ಒಂಟಿಯಾಗಿ ಅಬ್ಬಕ್ಕದೇವಿಯನ್ನು ಎದುರಿಸಲಾಗದೆ ಆಕೆಯನ್ನು ಸೋಲಿಸಲು ಕುತಂತ್ರ ಮಾಡಿ ಪೋರ್ಚುಗೀಸರೊಂದಿಗೆ ಕೈ ಜೋಡಿಸುತ್ತಾನೆ.

ಸಶಕ್ತವಾದ ಮುಸ್ಲಿಂ ಬ್ಯಾರಿ ನಾವಿಕರ ನೌಕಾನೆಲೆಯನ್ನು ಹೊಂದಿದ್ದ ರಾಣಿ ಅಬ್ಬಕ್ಕ ಮುಸ್ಲಿಂ, ಜೈನ ಹಾಗೂ ಹಿಂದೂಗಳ ನಡುವೆ ಅತ್ಯುತ್ತಮ ಸೌಹಾರ್ದಯುತ ಸಂಬಂಧವನ್ನಿಟ್ಟುಕೊಂಡು ಎಲ್ಲರ ಪ್ರೀತಿಪಾತ್ರ ರಾಣಿಯಾಗಿದ್ದಳು. ಅಲ್ಲದೆ ಮಲಬಾರಿ ಸಂಸ್ಥಾನಗಳೊಂದಿಗೂ ಉತ್ತಮ ಬಾಂಧವ್ಯವನ್ನಿಟ್ಟು ಕೊಂಡು ದಂಡೆತ್ತಿ ಬಂದ ಪೋರ್ಚುಗೀಸರನ್ನು ಕೋಟೆಯ ಹತ್ತಿರ ಸುಳಿಯದಂತೆ ನೋಡಿಕೊಂಡಿದ್ದಳು.

ಬೇಡಿಕೆಯಿಟ್ಟಿದ್ದ ಕಪ್ಪ ಕೊಡಲು ನಿರಾಕರಿಸಿದ ಅಬ್ಬಕ್ಕ ದೇವಿ ವಿರುದ್ಧ ಯುದ್ಧಕ್ಕೆ ಬಂದೇಬಿಟ್ಟರು ಪೋರ್ಚುಗೀಸರು. ಮೊದಲನೇ ಯುದ್ಧವನ್ನು ದಿಟ್ಟವಾಗಿ ಎದುರಿಸಿದ ರಾಣಿ ಹೆಸರಿನಂತೆ ಜನರ ಪಾಲಿಗೆ ಅಭಯರಾಣಿಯಾದಳು. ಅದಾದ ಕೆಲ ವರ್ಷಕ್ಕೆ ಪುನಃ ದಾಳಿಯಿತ್ತ ಪೋರ್ಚುಗೀಸರನ್ನು ಹಿಮ್ಮೆಟ್ಟಿಸುವಲ್ಲಿ ಸಫಲವಾದರೂ ಮಂಗಳೂರಿನಲ್ಲಿನ





*ಕಿತ್ತೂರಿನ ರಾಣಿ ಚೆನ್ನಮ್ಮ*







*ಉಳ್ಳಾಲದ ರಾಣಿ ಅಬ್ಬಕ್ಕ*

ಆಕೆಯ ಕೋಟೆ ಪೋರ್ಚುಗೀಸರ ಕೈವಶವಾಯಿತು. ಆದರೂ ಶತ್ರುಗಳ ಕಣ್ಣಿಗೆ ರಾಣಿ ಅಬ್ಬಕ್ಕದೇವಿ ಒಬ್ಬ ಬಲವಾದ ಶತ್ರುವಂತೆ ಕಂಡಳು. ಈ ನಡುವೆ ಬಿಜಾಪುರದ ಸುಲ್ತಾನನೊಂದಿಗೆ ಹಾಗೂ ಕ್ಯಾಲಿಕಟ್‌ನ ರಾಜನೊಂದಿಗೆ ಹೊಂದಾಣಿಕೆ ಮಾಡಿಕೊಂಡು ಸಶಕ್ತವಾಗಿ ಪೋರ್ಚುಗೀಸರನ್ನು ಎದುರಿಸಲು ತಯಾರಾದಳು. ಮತ್ತೆ ದಂಡೆತ್ತಿ ಬಂದ ಶತ್ರುಗಳ ವಿರುದ್ಧ ಕ್ಯಾಲಿಕಟ್‌ನ ಸೈನ್ಯವನ್ನೂ ಅವರ ದಂಡನಾಯಕ ಕುಟ್ಟಿ ಪೋಕರ್‌ನನ್ನೂ ತನ್ನ ಸೈನ್ಯದ ಜೊತೆ ಕಳಿಸಿ ಪೋರ್ಚುಗೀಸರ ಕೋಟೆಯನ್ನು ನಾಶಮಾಡಿಸುತ್ತಾಳೆ. ಆಗ ಹಿಂತಿರುಗುವಾಗ ಕುತಂತ್ರಕ್ಕೆ ಆತ ಬಲಿಯಾಗುತ್ತಾನೆ. ಇದರೊಂದಿಗೆ ಕದನ ಸೋತ ಅಬ್ಬಕ್ಕದೇವಿ ಬಂಧಿಯಾಗಿ ಕೊನೆಯುಸಿರಿನ ತನಕ ಜೈಲಿನಲ್ಲಿ ಹೋರಾಡುತ್ತ ಸಾವನ್ನಪ್ಪುತ್ತಾಳೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಈ ಇಬ್ಬರೂ ರಾಣಿಯರು ಅವರವರ ಕಾಲಘಟ್ಟದಲ್ಲಿ ತೆಗೆದುಕೊಂಡ ನಿರ್ಧಾರಗಳು. ಭರತಖಂಡದೊಳಗೆ ಆಳ್ವಿಕೆ ನಡೆಸುತ್ತಿದ್ದ ಅದೆಷ್ಟೊ ರಾಜರುಗಳು ಪೋರ್ಚುಗೀಸರೊಡನೆ, ಬ್ರಿಟಿಷರೊಡನೆ ಹೊಂದಾಣಿಕೆ ಮಾಡಿಕೊಂಡು ನಾಮಕಾವಾಸ್ಥೆ ರಾಜರಾಗಿದ್ದುಕೊಂಡು ಕಿರೀಟವನ್ನೂ ಉಳಿಸಿಕೊಂಡು, ಎಲ್ಲ ವೈಭೋಗ ಗಳನ್ನೂ ಅನುಭವಿಸುತ್ತ ವಂಶಪಾರಂಪರ್ಯವಾಗಿ ಬಂದಿದ್ದ ಜವಾಬ್ದಾರಿಯನ್ನು ಸುಲಭವಾಗಿ ಬಿಟ್ಟುಕೊಟ್ಟು ನೆಮ್ಮದಿಯಾಗಿರಬೇಕಾದರೆ ಈ ಇಬ್ಬರು ರಾಣಿಯರಾಗಿದ್ದು ತಮ್ಮ ಸರದಿ ಬಂದಾಗ ಪ್ರತಿಭಟಿಸಿದ್ದು ಆಗಿನ ಕಾಲಘಟ್ಟಕ್ಕೆ ಬಹಳ ವಿಶೇಷ ಸಂಗತಿಯೇ ಸರಿ.

ಇಲ್ಲಿ ರಾಣಿ ಚೆನ್ನಮ್ಮನಿಗೆ ದತ್ತು ಪುತ್ರನನ್ನು ಮುಂದಿಟ್ಟುಕೊಂಡು ಬ್ರಿಟಿಷ್ ಸರಕಾರ ಕೊಡುವ ಗೌರವಧನ ಒಪ್ಪಿಕೊಂಡು ರಾಜ್ಯವನ್ನು ಅವರ ಸುಪರ್ದಿಗೆ ಒಪ್ಪಿಸಿ ಎಲ್ಲ ಸವಲತ್ತುಗಳೊಂದಿಗೆ ಅವರು ಹೇಳಿದಂತೆ ಬದುಕುವ ಎಲ್ಲ ಅವಕಾಶಗಳೂ ಇದ್ದವು. ಆಕೆಯನ್ನು ಹೀಗೇಕೆ ಮಾಡಿದಿರೆಂದು ಪ್ರಶ್ನಿಸಲು ಯಾರೊಬ್ಬರೂ ಇರಲಿಲ್ಲ. ಆದರೂ ತನ್ನ ನೆಲದ, ತನ್ನ ಅಸ್ತಿತ್ವದ, ತನ್ನವರ ಹಾಗೂ ತನ್ನನ್ನೇ ನಂಬಿದ ಪ್ರಜೆಗಳ ವಿಚಾರ ಬಂದಾಗ ಬ್ರಿಟಿಷರ ಆದೇಶವನ್ನು ಸಾರಾಸಗಟಾಗಿ ತಿರಸ್ಕರಿಸಿ ಕೆಚ್ಚೆದೆಯಿಂದ ಹೋರಾಟಕ್ಕೆ ಸಿದ್ಧವಾದಳು. ಆ ಮೂಲಕ ಬ್ರಿಟಿಷರ ವಿರುದ್ಧ ಸಿಡಿದೆದ್ದ ಮೊದಲ ಮಹಿಳೆಯೆನಿಸಿಕೊಂಡಳು. ನಂತರ ಆಕೆಯಂತೆ ಬಹಳಷ್ಟು ರಾಣಿಯರು ಬ್ರಿಟಿಷರ ವಿರುದ್ಧ ಹೋರಾಡಿದರೂ ಪುಟ್ಟ ಸಂಸ್ಥಾನದ ರಾಣಿಯಾಗಿದ್ದ ಚೆನ್ನಮ್ಮನ ಹೋರಾಟ ಇತಿಹಾಸದಲ್ಲಿ ಮೈಲಿಗಲ್ಲಾಗುತ್ತದೆ.

ಇನ್ನು ರಾಣಿ ಅಬ್ಬಕ್ಕದೇವಿಯ ಹೋರಾಟ ಬ್ರಿಟಿಷರು ಭಾರತಕ್ಕೆ ಕಾಲಿಡುವ ಬಹಳ ಮುಂಚಿನದ್ದು. ಆಕೆ ಆಗ ಇದ್ದ ಪೋರ್ಚುಗೀಸರ ವಿರುದ್ಧವೇ ತಿರುಗಿಬಿದ್ದವಳು. ಮನಸ್ಸು ಮಾಡಿದ್ದಿದ್ದರೆ ಕಪ್ಪ ಕೊಟ್ಟು ಅದಾಗಲೇ ಹೊಂದಾಣಿಕೆ ಮಾಡಿಕೊಂಡಿದ್ದ ತನ್ನ ಗಂಡನ ಸಂಸ್ಥಾನದ ಮತ್ತು ಇತರ ಬೇರೆ ಬೇರೆ ರಾಜರುಗಳ ಹಾಗೆ ಅಬ್ಬಕ್ಕದೇವಿಯೂ ಪೋರ್ಚುಗೀಸರಿಗೊಂದು ನೆಲೆ ಒದಗಿಸಿ ತನ್ನ ಪ್ರದೇಶದ ಸಮುದ್ರ ತೀರದಲ್ಲಿ ಅವರಿಗೂ ನೌಕಾನೆಲೆ ಹೊಂದಲು ಅವಕಾಶವಿತ್ತು ತಾನೂ ಬದುಕಿ ತನ್ನ ಪಟ್ಟವನ್ನೂ ಉಳಿಸಿಕೊಂಡು ನೆಮ್ಮದಿಯ ಬಾಳು ಬಾಳಬಹುದಾಗಿತ್ತು. ಕಿರೀಟದ ಜೊತೆ ವ್ಯಾಪಾರ ವಹಿವಾಟಿನಿಂದ ಬರುವ ಲಾಭವೂ ಬೊಕ್ಕಸ ಸೇರುತ್ತಿತ್ತು. ಆದರೆ ಆಕೆಯದು ಪರಕೀಯರು ತನ್ನ ಸಂಸ್ಥಾನವನ್ನು ತನ್ನ ಜನರನ್ನು ನಿಯಂತ್ರಿಸುವುದರ ವಿರುದ್ಧದ ದಿಟ್ಟ ನಿಲುವಾಗಿತ್ತು. ಯಾವುದೇ ಕಾರಣಕ್ಕೂ ನನ್ನ ಮನೆಯೊಳಗೆ ಅಪರಿಚಿತ ಪರದೇಸಿಗಳ ಅಧಿಕಾರ ನಡೆಯದು ಎನ್ನುವ ನಿರ್ಧಾರವಾಗಿತ್ತು. ಹಾಗಾಗಿ ಸಾವೇ ಎದುರಾದಾಗಲೂ ಧೃತಿಗೆಡದೆ ಕೊನೆಯುಸಿರಿನ ತನಕ ಹೋರಾಡಿದಳು.

ಇಪ್ಪತ್ತೊಂದನೇ ಶತಮಾನದ ಈಗಿನ ಕಾಲಘಟ್ಟದಲ್ಲೂ ನಾವು ಸ್ತ್ರೀ ಸಮಾನತೆ ಬಗ್ಗೆ ಹೋರಾಟ ಮಾಡುತ್ತಿದ್ದೇವೆ. ಆದರೆ ಆಗಲೇ ೧೬ನೇ ಶತಮಾನದಲ್ಲಿ ಅಬ್ಬಕ್ಕದೇವಿಯಂತಹ ಹೆಣ್ಣೊಬ್ಬಳು ರಾಣಿಯಾಗಿ ಇಡೀ ಸಂಸ್ಥಾನದ ಕುರಿತು ದಿಟ್ಟ ನಿರ್ಧಾರವನ್ನು ಯಾವುದೇ ಮುಲಾಜಿಲ್ಲದೆ ತೆಗೆದುಕೊಂಡಿದ್ದಳು. ಆ ನಂತರ ಬರುವ ರಾಣಿ ಚೆನ್ನಮ್ಮ ಅಂತಹುದೇ ನಿರ್ಧಾರಕ್ಕೆ ಬದ್ಧಳಾದಳು. ಅದಾದ ನಂತರ ಕೂಡ ಅನೇಕ ರಾಣಿಯರೂ, ಅಷ್ಟೇ ಏಕೆ ೧೮೫೭ರ ನಂತರ ಸಮಗ್ರ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡ ಅದೆಷ್ಟೊ ಸಾಮಾನ್ಯ ಮಹಿಳೆಯರೂ ಕೂಡ ಇವತ್ತಿಗೂ ನಮ್ಮ ಕಣ್ಣಿಗೆ ದಿಟ್ಟ ನಾರಿಯರು. ಸಮಾನತೆಗಾಗಿ ಅಲವತ್ತುಕೊಂಡು ಕೂರುವ ಬದಲಾಗಿ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿ ಪುರುಷರಿಗೆ ಸಮಾನವಾಗಿ ಹೋರಾಡಿದರು. ಸಮಸ್ಯೆ ಚಿಕ್ಕದಾಗಲಿ, ದೊಡ್ಡದಾಗಲಿ, ಯಾವುದೇ ರೀತಿಯದ್ದಾಗಲಿ ದಿಟ್ಟತನದಿಂದ ಎದುರಿಸಬೇಕಾದ್ದು ಹೆಣ್ಣಾಗಲಿ, ಗಂಡಾಗಲಿ ಪ್ರತಿಯೊಬ್ಬರ ಮನೋಧರ್ಮ ವಾಗಬೇಕೆನ್ನುವ ನಿಲುವನ್ನು ತೋರಿಸಿಕೊಟ್ಟು ಹೆಣ್ಣುಮಕ್ಕಳಿಗೆಲ್ಲ ಮಾದರಿಯಾದರು. ಧೈರ್ಯ, ಶೌರ್ಯದಿಂದ ಇತಿಹಾಸದ ಪುಟದಲ್ಲಿ ದಾಖಲಾದ ಎಲ್ಲ ಹೆಣ್ಣುಮಕ್ಕಳಿಗೂ ರಾಣಿ ಚೆನ್ನಮ್ಮ ಅಥವಾ ರಾಣಿ ಅಬ್ಬಕ್ಕದೇವಿಯರಂತೆ ಸಮಾನ ಮನೋಧರ್ಮದ ಮನೆಯ ವಾತಾವರಣವೇನೂ ದೊರೆತಿಲ್ಲ. ಆದರೆ ಅವರೆಲ್ಲರ ನಿರ್ಧಾರ ಅಚಲವಾಗಿತ್ತು. ಈಗಿನ ಕಾಲಘಟ್ಟದಲ್ಲೂ ಹೆಣ್ಣನ್ನು ಎರಡನೇ ದರ್ಜೆಯ ಪ್ರಜೆಯಾಗಿ ಕಾಣುವ ಬಹುತೇಕ ಕುಟುಂಬ ಗಳಿರುವಾಗ ಆಗಲೇ ದೇಶದ ಸಮಸ್ಯೆಗಳ ಪರಿಹಾರಕ್ಕೆ ಶ್ರಮಿಸಿದ ಇಂತಹ ಎಷ್ಟೊ ಮಹಿಳೆಯರು ಮತ್ತವರ ಜೀವನದ ಘಟನೆಗಳನ್ನು ಮೈಲಿಗಲ್ಲಾಗಿಸಿಕೊಂಡು ಮುನ್ನಡೆಯಬೇಕಾದ ಅಗತ್ಯ ಮಹಿಳೆಯರಿಗಿದೆ.

**ಪಲ್ಲವಿ ಇಡೂರ**
ನಂ.೧೫, ೬ನೇ ಮುಖ್ಯ ರಸ್ತೆ, ೨ನೇ ಬ್ಲಾಕ್
ಆರ್. ಟಿ. ನಗರ, ಬೆಂಗಳೂರು – ೫೬೦ ೦೩೨



# ಡೋನಾಲ್ಡ್ ಟ್ರಂಪ್ : ಅಧಿನಾಯಕತ್ವದ ಸ್ಥಾಪನೆ ಅಮೆರಿಕದ ಗುರಿ

'ದಿಕ್ಕು ದಿಶೆ ಇಲ್ಲದ ಎಡವಟ್ಟು ಸರಕಾರ' ಎಂದು ಟ್ರಂಪ್ ಆಡಳಿತವನ್ನು ಟೀಕಿಸಿದ ಅಮೆರಿಕದ ರಾಯಭಾರಿ ಬ್ರಿಟನ್ನಿನ ಮುತ್ಸದ್ದಿ ಈಚೆಗೆ ರಾಜೀನಾಮೆ ನೀಡಬೇಕಾಯಿತು. ರಾಯಭಾರಿಗಳು ಕಳಿಸುವ ರಹಸ್ಯ ಸಂದೇಶದಲ್ಲಿದ್ದ ಮಾತುಗಳು ಅವು. ಅದು ಸೋರಿದ್ದು ಹೇಗೆ ಎಂಬುದು ಬೇರೆ ವಿಚಾರ. ಆದರೆ ಬ್ರಿಟಿಷ್ ರಾಯಭಾರಿಯ ಈ ವಿವರಣೆ ಎಷ್ಟು ಸರಿ ನೋಡೋಣ. ಹೊರನೋಟಕ್ಕೆ ಅಮೆರಿಕದ ಅಧ್ಯಕ್ಷ ಡೋನಾಲ್ಡ್ ಟ್ರಂಪ್ ನಡೆನುಡಿ ಹಾಗೆ ಎನಿಸುವುದು ಸಹಜ. ಆದರೆ ಅದರ ಹಿಂದೆ ಇರುವುದು ಅಮೆರಿಕದ ಶ್ರೇಷ್ಠತೆಯನ್ನು ಪ್ರತಿಷ್ಠೆಯನ್ನು ಎತ್ತಿಹಿಡಿಯುವ ಘೋಷಣೆಯಿಂದಲೇ ಟ್ರಂಪ್ ಆಯ್ಕೆಯಾದ್ದು ಎಂಬುದನ್ನು ಮರೆಯುವಂತಿಲ್ಲ. ವೆನಿಜುವೇಲ, ಇರಾನ್ ಮತ್ತು ಉತ್ತರ ಕೊರಿಯಗಳ ಪರಿಸ್ಥಿತಿಯನ್ನು ನೋಡಿದರೆ ಅಮೆರಿಕ ತನ್ನ ಅಧಿನಾಯಕತ್ವ ಹೇರುವ ವಿಚಾರವನ್ನು ಮುಂದುವರಿಸುತ್ತಿರುವುದು ವೇದ್ಯವಾಗುತ್ತದೆ.

ಡೋನಾಲ್ಡ್ ಟ್ರಂಪ್ ಅಮೆರಿಕದ ಅಧ್ಯಕ್ಷರಾಗಿ ಅಧಿಕಾರವಹಿಸಿಕೊಂಡು ಒಂದೂವರೆ ವರ್ಷದ ಮೇಲಾಯಿತು. ಬಾಕಿ ಇರುವ ವರ್ಷಗಳಲ್ಲಿ ಏನು ಅವಾಂತರ ಉಂಟು ಮಾಡುತ್ತಾರೋ ನೋಡಬೇಕು. ಇಪ್ಪತ್ತೊಂದನೆ ಶತಮಾನದ ಪರಿಸ್ಥಿತಿ ಬೇರೆಯೇ. ಇಪ್ಪತ್ತನೆ ಶತಮಾನದ ಅಂತ್ಯದಲ್ಲಿ ಸೋವಿಯತ್ ಒಕ್ಕೂಟ ವಿಘಟನೆಯಾದ ಮೇಲೆ ಅಮೆರಿಕ ಏಕಕೇಂದ್ರಿತ ವ್ಯವಸ್ಥೆಯ ಕೇಂದ್ರವಾಯಿತು. ಪಶ್ಚಿಮ ಏಷ್ಯದ ಮೇಲೆ ಹಿಡಿತ ಸಾಧಿಸಲು ನೇರವಾಗಿ ಅಲ್ಲಿನ ದೇಶಗಳ ಆಡಳಿತಗಳನ್ನು ಪದಚ್ಯುತಗೊಳಿಸಲು ದಾಳಿ ನಡೆಸಿತು. ಇರಾಕ್‌ನ ಅಧಿಪತಿ ಸದ್ದಾಮ್ ಹುಸೇನ್ ಮತ್ತು ಲಿಬಿಯದ ಗಡಾಫಿ ಪದಚ್ಯುತರಾದರು. ಸಮರ್ಥ ನಾಯಕತ್ವದ ಕೊರತೆಯಿಂದಾಗಿ ಅರಬ್ ಕ್ರಾಂತಿ ವಿಫಲಗೊಂಡು ಅಮೆರಿಕಕ್ಕೆ ಅನುಕೂಲವಾಯಿತು. ಸಿರಿಯ ಮತ್ತು ಇರಾನ್ ಅಮೆರಿಕ ನಡೆಸಿದ ಪ್ರಯತ್ನಗಳಿಗೆ ದಕ್ಕಲಿಲ್ಲ. ಅಷ್ಟರಲ್ಲಿ ಅಂತರರಾಷ್ಟ್ರೀಯ ಪರಿಸ್ಥಿತಿ ಬದಲಾಗಿತ್ತು. ಚೀಣ ಮತ್ತು ರಷ್ಯಗಳು ಚೇತರಿಸಿಕೊಂಡು ಅಮೆರಿಕದ ಅಧಿನಾಯಕತ್ವದ ಬಯಕೆಗೆ ಅಡ್ಡಿಯಾದವು. ಎಂಟು ವರ್ಷಗಳು ಅಮೆರಿಕದ ಆಡಳಿತದ ಚುಕ್ಕಾಣಿ ಹಿಡಿದಿದ್ದ ಬರಾಕ್ ಒಬಾಮಾ ಕೊನೆಯ ದಿನಗಳಲ್ಲಿ ಇರಾನಿನೊಂದಿಗೆ ಒಪ್ಪಂದಕ್ಕೆ ಬಂದು ಸುದೀರ್ಘಕಾಲ ಹೊರಿಸಿದ್ದ ಆರ್ಥಿಕ ದಿಗ್ಬಂಧನವನ್ನು ತೆರವುಗೊಳಿಸಿದರು. ಇರಾನಿನೊಂದಿಗೆ ಅಮೆರಿಕದ ವಿವಾದವಿದ್ದುದು ಆ ದೇಶ ನ್ಯೂಕ್ಲಿಯರ್ ಅಸ್ತ್ರಗಳನ್ನು ತಯಾರಿಸತೊಡಗಿದೆ ಎಂಬುದಾಗಿತ್ತು. ಮುಖ್ಯವಾದ ಉದ್ದೇಶ ಬೇರೆಯೇ ಆಗಿತ್ತು. ಇರಾನಿನಲ್ಲಿ ನೆಲೆಯೂರಿದ್ದ ಆಡಳಿತವನ್ನು ಅಸ್ಥಿರಗೊಳಿಸಿ, ಅಮೆರಿಕಕ್ಕೆ ಅನುಕೂಲವಾದ ಆಡಳಿತವನ್ನು ಅಧಿಕಾರಕ್ಕೆ ತರುವುದಾಗಿತ್ತು. ಅಧಿಕಾರಕ್ಕೆ ಬಂದ ಡೋನಾಲ್ಡ್ ಟ್ರಂಪ್ ಇರಾನಿನೊಂದಿಗೆ ಒಬಾಮಾ ಮಾಡಿಕೊಂಡಿದ್ದ ಒಪ್ಪಂದವನ್ನು ತಿರಸ್ಕರಿಸಿ ಮತ್ತೆ ಇರಾನಿನ ಮೇಲೆ ಆರ್ಥಿಕ ದಿಗ್ಬಂಧನ ಹೇರಿದ್ದಾರೆ. ಮತ್ತೆ ಅಲ್ಲಿನ ಆಡಳಿತವನ್ನು ಬದಲಿಸಲು ಹೊರಟಿದ್ದಾರೆ.

ಸಿರಿಯಾದಲ್ಲಿ ಮಧ್ಯೆ ಪ್ರವೇಶಿಸಿ ಅಮೆರಿಕ ಕೈಸುಟ್ಟುಕೊಂಡಾಯಿತು. ಇಸ್ರೇಲನ್ನು ಈ ಪ್ರದೇಶದ ಆಡಳಿತಗಳನ್ನು ಬೆದರಿಸಲು ಎಷ್ಟು ಬೇಕೋ ಅಷ್ಟು ಉಪಯೋಗಿಸಿಕೊಂಡಿದೆ ಅಮೆರಿಕ. ಆರ್ಥಿಕವಾಗಿ, ಸೈನಿಕವಾಗಿ ಪ್ರಬಲಗೊಂಡಿರುವ ಚೀಣಾ ಮತ್ತು ರಷ್ಯಗಳ ವಿಸ್ತರಿಸುತ್ತಿರುವ ಪ್ರಭಾವಕ್ಕೆ ಕಡಿವಾಣ ಹಾಕಲು ಅಮೆರಿಕ ನಾನಾ ರೀತಿಯಲ್ಲಿ ಪ್ರಯತ್ನಿಸುತ್ತಿದೆ. ಭಾರತದೊಂದಿಗೆ ಬಲಪಂಥೀಯ ಸರಕಾರ ಅಧಿಕಾರಕ್ಕೆ ಬಂದ ಮೇಲೆ ವ್ಯೂಹಾತ್ಮಕ ಪಾಲುದಾರಿಕೆ ಸಂಬಂಧವನ್ನು ಕುದುರಿಸಿರುವ ಅಮೆರಿಕ ಚೀಣದ ವಿರುದ್ಧವಾಗಿ ಭಾರತವನ್ನು ಎತ್ತಿಕಟ್ಟಲು ನೋಡುತ್ತಿದೆ. ಈ ಪ್ರಯತ್ನವೆಲ್ಲ ಭಯೋತ್ಪಾದನೆಯ ವಿರುದ್ಧವಾದ ಸಮರದ ಹೆಸರಿನಲ್ಲಿ ನಡೆಯುತ್ತಿದೆ. ಚೀಣದ ಬೆಳೆಯುತ್ತಿರುವ ಪ್ರಭಾವವನ್ನು ಏಷಿಯ, ಯೂರೋಪು ಮತ್ತು ಆಫ್ರಿಕಾ ಖಂಡದಲ್ಲಿ ತಡೆಯಲು ಮುಖ್ಯವಾಗಿ ಚೀಣಾದ ಹೆಬ್ಬಯಕೆಯಾದ 'ಬೆಲ್ಟ್ ರೋಡ್' ಯೋಜನೆಯನ್ನು ಕಾರ್ಯಗತವಾಗದಂತೆ ಮಾಡಲು ಅಮೆರಿಕ ನೋಡುತ್ತಿದೆ.

ದಕ್ಷಿಣ ಅಮೆರಿಕದಲ್ಲಿ ಹೊಸ ಹಾದಿ ತುಳಿದು ಅಮೆರಿಕದ ಕೆಂಗಣ್ಣಿಗೆ ಗುರಿಯಾಗಿರುವ ವೆನಿಜುವೇಲ ಇಂದು ಟ್ರಂಪ್ ಆಡಳಿತ ವಿಧಿಸಿರುವ ಆರ್ಥಿಕ ದಿಗ್ಬಂಧನಕ್ಕೆ ಒಳಗಾಗಿದೆ. ಚೀಣ ಮತ್ತು ರಷ್ಯದ ಬೆಂಬಲ ಹೊಂದಿರುವ ವೆನಿಜುವೇಲ ಅಮೆರಿಕದ ಬಾಂಬು ದಾಳಿಯಿಂದ ಮುಕ್ತವಾಗಿದೆ. ಇಪ್ಪತ್ತೊಂದನೆ ಶತಮಾನದಲ್ಲಿ ಇಡೀ ದಕ್ಷಿಣ ಅಮೆರಿಕ ಖಂಡದ ದೇಶಗಳಿಗೆ ದಾರಿದೀಪವಾಗಿದ್ದ ವೆನಿಜುವೇಲ ಇಂದು ಆರ್ಥಿಕ ಮುಗ್ಗಟ್ಟಿಗೆ ಸಿಲುಕಿದೆ. ರಷ್ಯ – ಚೀಣಗಳ ಸೇನೆಯ ಉಪಸ್ಥಿತಿಯೇ ಅದಕ್ಕೆ ಶ್ರೀರಕ್ಷೆ.

ಉತ್ತರ ಕೊರಿಯದ ನಾಯಕ ಕಿಮ್‌ಅನ್ನು ಅಧ್ಯಕ್ಷ ಟ್ರಂಪ್ ಮೂರನೇ ಬಾರಿ ಭೇಟಿಯಾದ್ದು ವಿಶೇಷ. ಇರಾನಿನಂತೆಯೇ ಉತ್ತರ ಕೊರಿಯಾದ ನ್ಯೂಕ್ಲಿಯರ್ ಅಸ್ತ್ರಗಳ ಮೇಲೆ ಅಮೆರಿಕದ ಕಣ್ಣು. ಎರಡೂ ದೇಶಗಳ ಮೇಲೆ ತೀವ್ರವಾದ ಆರ್ಥಿಕ ದಿಗ್ಬಂಧನ ವಿಧಿಸಲಾಗಿದೆ. ಉತ್ತರ ಕೊರಿಯ ಸುಮಾರು ಆರೇಳು ದಶಕಗಳಿಂದ ಆರ್ಥಿಕ ದಿಗ್ಬಂಧನಕ್ಕೆ ಒಳಗಾಗಿದೆ. ಅಮೆರಿಕದ ಅಧ್ಯಕ್ಷ ಜಾರ್ಜ್‌ಬುಷ್ ದೃಷ್ಟಿಯಲ್ಲಿ 'ರೋಗ್ ಸ್ಟೇಟ್' ಎಂದು ಹಣೆ ಪಟ್ಟಿ ಹೊಂದಿರುವ ದೇಶಗಳಲ್ಲಿ ಉತ್ತರ ಕೊರಿಯ ಕೂಡ ಒಂದು. ರಷ್ಯ ಮತ್ತು ಚೀಣಗಳ ಬೆಂಬಲವಿಲ್ಲದಿದ್ದರೆ ಎಂದೋ ಉತ್ತರ ಕೊರಿಯ ನಿರ್ನಾಮವಾಗಿ ಹೋಗುತ್ತಿತ್ತು. ಉತ್ತರ ಕೊರಿಯದ ಅಧಿಪತಿಯೊಂದಿಗೆ ಮೂರನೆ ಸಲ ಟ್ರಂಪ್ ಶೃಂಗ ಸಮಾವೇಶ ನಡೆಸಿದ್ದು ಇತ್ತೀಚೆಗೆ. ಅದೂ ಕೊರಿಯ ಪರ್ಯಾಯ ದ್ವೀಪದ ನಿಸ್ಸೇನೀಕೃತ ಪ್ರದೇಶದಲ್ಲಿ. ಒಮ್ಮೆ ಟ್ರಂಪ್ ಉತ್ತರ ಕೊರಿಯದ ನೆಲದ ಮೇಲೆ ಕಾಲೂರಿಯೂ ಆಯಿತು. ಆದರೆ ಹಿಂದಿನ ಎರಡು ಶೃಂಗಸಭೆಗಳಂತೆಯೇ ಇದು ವಿಫಲವಾಗುವ ಸೂಚನೆಗಳೇ ಹೆಚ್ಚು.

ಚೀಣಾದ ವಿರುದ್ಧವಾಗಿ ಅಮೆರಿಕ ವಾಣಿಜ್ಯ ಸಮರ ನಡೆಸಿದ್ದು ಎಲ್ಲರಿಗೂ ತಿಳಿದಿರುವ ವಿಷಯ. ಸದ್ಯಕ್ಕೆ ಇದರ ಓಟ ತೀವ್ರತೆಯನ್ನು ಕಳೆದುಕೊಂಡಿದೆ. ಭಾರತದ ಸರಕಾರ ಅಮೆರಿಕದ ಅಧಿನಾಯಕತ್ವದ ಆಮಿಷಗಳಿಗೆ ಬಲಿಯಾಗದೆ ಎಚ್ಚರ ವಹಿಸುವುದು ಅಗತ್ಯ. ಮೊದಲೇ ಹೇಳಿದ ಹಾಗೆ ಭಾರತವನ್ನು ಚೀಣ ವಿರುದ್ಧ ಎತ್ತಿಕಟ್ಟಲು ಅಮೆರಿಕ ಪ್ರಯತ್ನಿಸುತ್ತಿದೆ. ಭಾರತವನ್ನು ನ್ಯಾಟೋ ಕೂಟಕ್ಕೆ ಸೆಳೆಯುವ ತಂತ್ರವೂ ಇದೆ.

**ಸೀಯಾರ್ಕೆ**
"ಸೂರ್ಯ ರೆಸಿಡೆನ್ಸಿ", ಫ್ಲಾಟ್ – ೧, # ೩೧೩೩
೩ನೇ ಅಡ್ಡರಸ್ತೆ, ಗಿರಿನಗರ ೪ನೇ ಹಂತ, ಬೆಂಗಳೂರು – ೫೬೦ ೦೮೫

## ಪ್ರಶ್ನೆಗಳನ್ನು ಹುಟ್ಟುಹಾಕುವ



# ಆರ್ಟಿಕಲ್ ೧೫

**ಬಾ**ಲಿವುಡ್, ಸ್ಯಾಂಡಲ್‌ವುಡ್, ಕಾಲಿವುಡ್, ಟಾಲಿವುಡ್ ಅಥವಾ ಇನ್ಯಾವುದೇ ಉಡ್ ಇರಲಿ, ಅವುಗಳಲ್ಲಿ ಮಸಾಲ ಚಲನಚಿತ್ರಗಳ ಭರಾಟೆಯೇ ಜಾಸ್ತಿ. ಡಿಜಿಟಲ್ ಚಿತ್ರೀಕರಣ ಸುಲಭವಾಗಿ ಎಟುಕುವುದರಿಂದ ನಿರ್ಮಾಣಗೊಳ್ಳುವ ಚಲನಚಿತ್ರಗಳ ಸಂಖ್ಯೆ ಗಣನೀಯವಾಗಿ ವೃದ್ಧಿಸಿದೆ. ವಿಕಿಪಿಡಿಯಾದ ಅನ್ವಯ ೨೦೧೮ರಲ್ಲಿ ಸರ್ಟಿಫೈಗೊಂಡ ಫೀಚರ್ ಫಿಲ್ಮ್‌ಗಳ ಸಂಖ್ಯೆ ೧೮೧೩ ! ಅವುಗಳಲ್ಲಿ ಗಲ್ಲಾಪೆಟ್ಟಿಗೆಯಲ್ಲಿ ಜಯಶಾಲಿಯಾದದ್ದು ಎಷ್ಟು? ತೀರಾ ಕಡಿಮೆ ಎಂದೇ ಹೇಳಬಹುದು. ಪರಿಸ್ಥಿತಿ ಹೀಗಿರಬೇಕಾದರೆ, ವೀಕ್ಷಕರನ್ನು ಚಿಂತನೆಗೆ ಹಚ್ಚುವ ಕೆಲವೇ ಕೆಲವು ಚಲನಚಿತ್ರಗಳು ತೆರೆಕಾಣುತ್ತಿವೆ. ವಾಣಿಜ್ಯದ ದೃಷ್ಟಿಯಿಂದ ಅಳೆಯುವುದಾದರೆ, ಅವುಗಳಲ್ಲಿ ಕೆಲವು ಯಶಸ್ಸನ್ನು ಗಳಿಸುತ್ತವೆ; ಕೆಲವು ತೋಪಾಗುತ್ತವೆ. ಇತ್ತೀಚೆಗೆ ತೆರೆಕಂಡಿರುವ ಅನುಭವ ಸಿನ್ಹಾ ನಿರ್ದೇಶನದ ಆರ್ಟಿಕಲ್ ೧೫ ಎಂಬ ಹಿಂದಿ ಚಲನಚಿತ್ರ ವೀಕ್ಷಕರ ನಡುವೆ ಅನೇಕ ಬಗೆಯ ಚರ್ಚೆಗಳನ್ನು ಹುಟ್ಟುಹಾಕಿದೆ. ಗಲ್ಲಾಪೆಟ್ಟಿಗೆಯಲ್ಲೂ ಗಮನಾರ್ಹ ಹೆಜ್ಜೆಗಳನ್ನು ಇಡುತ್ತ ಸಾಗುತ್ತಿದೆ. ಇದೊಂದು ಸ್ವಾಗತಾರ್ಹ ಬೆಳವಣಿಗೆ.

ಕಳೆದ ವರ್ಷ ಅನುಭವ ಸಿನ್ಹಾರ ನಿರ್ದೇಶನದ 'ಮುಲ್ಕ್' ಹಿಂದಿ ಚಲನಚಿತ್ರ ಕೂಡ ಸುದ್ದಿ ಮಾಡಿತ್ತು. ಇದಕ್ಕೆ ಮುನ್ನ ಅವರು ಹತ್ತರಲ್ಲಿ ಹನ್ನೊಂದು ಆಗುವ ಕೆಲವು ಚಲನಚಿತ್ರಗಳನ್ನು ನಿರ್ದೇಶಿಸಿದ್ದರು! ಆರ್ಟಿಕಲ್ ೧೫ ಚಲನಚಿತ್ರದ ಮೂಲಕ ಅವರು ಭಿನ್ನ ಹಾದಿಯ ಪಯಣಿಗರಾಗುತ್ತಿದ್ದಾರೆ ಎಂಬುದನ್ನು ಸೂಚಿಸುತ್ತದೆ. ಇರಲಿ..

ಅಯಾನ್ ರಂಜನ್(ನಟ ಆಯುಷ್ಮಾನ್ ಖುರಾನ) ದೆಹಲಿಯ ಸ್ಯೆಂಟ್ ಸ್ಟೀಫನ್ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡಿ, ವಿಲಾಯತಿಯಲ್ಲೂ ಶಿಕ್ಷಣ ಪಡೆದ ಒಬ್ಬ ಯುವ ಬ್ರಾಹ್ಮಣ ಐಪಿಎಸ್ ಅಧಿಕಾರಿಯಾಗಿ ಲಾಲ್‌ಗಾಂವ್‌ಗೆ ಶಿಕ್ಷೆಯ ರೂಪದಲ್ಲಿ ವರ್ಗಾವಣೆಗೊಂಡಿರುತ್ತಾನೆ. ಆತ ಕರ್ತವ್ಯಕ್ಕೆ ಹಾಜರಾದ ಮಾರನೆಯ ದಿನ ಇಬ್ಬರು ಅಪ್ರಾಪ್ತ ವಯಸ್ಸಿನ ಹುಡುಗಿಯರು ಆತ್ಮಹತ್ಯೆ(?) ಮಾಡಿಕೊಂಡಿದ್ದಾರೆ ಎಂದು ಬಿಂಬಿತಗೊಳ್ಳುವ ವಿಷಯ ತಿಳಿದುಬರುತ್ತದೆ. ಮೂರನೇ ಹುಡುಗಿ ಪೂಜಾ ಕಾಣೆಯಾಗಿರುತ್ತಾಳೆ. ಆತ್ಮಹತ್ಯೆ(?) ವಿಚಾರವನ್ನು ಮರ್ಯಾದೆ ಹತ್ಯೆ ಎಂದು ತಿರುಚಲು, ತನಿಖೆಯ ಹಾದಿ ತಪ್ಪುವಂತೆ ಮಾಡಲು ಸರ್ಕಲ್ ಇನ್ಸ್‌ಪೆಕ್ಟರ್ ಬ್ರಹ್ಮದತ್ತ್ ಸಿಂಗ್(ನಟ ಮನೋಜ್ ಪಹ್ವಾ) ಪ್ರಯತ್ನಿಸುತ್ತಾನೆ. ಶವಪರೀಕ್ಷೆಯಲ್ಲಿ ಡಾ॥ ಮಾಲ್ತಿ ರಾಮ್‌ಗೆ(ನಟಿ ರಂಜನಿ ಚಕ್ರವರ್ತಿ) ಇಬ್ಬರು ಹುಡುಗಿಯರನ್ನು ಗ್ಯಾಂಗ್ ರೇಪ್ ಮಾಡಿರುವ ವಿಷಯ ತಿಳಿದುಬರುತ್ತದೆ. ಬ್ರಹ್ಮದತ್ತ್ ಡಾ॥ ಮಾಲ್ತಿಯ ಮೇಲೆ ಒತ್ತಡವನ್ನು ಹೇರುತ್ತಾನೆ.

**ಮ. ಶ್ರೀ. ಮುರಳಿ ಕೃಷ್ಣ**

ಅಯಾನ್ ತನಿಖೆಯನ್ನು ತೀವ್ರಗೊಳಿಸುತ್ತಾನೆ. ಇಡೀ ಪ್ರಕರಣದಲ್ಲಿ, ಜಾತಿ ಶ್ರೇಣೀಕರಣದಲ್ಲಿ ಅತ್ಯಂತ ಕೆಳಸ್ತರದಲ್ಲಿರುವ ಪಾಸಿ ಜಾತಿಯ ಹುಡುಗಿಯರಿಗೆ ಅನ್ಯಾಯವಾಗಿರುವುದನ್ನು ಅರಿತ ಅಯಾನ್ ನ್ಯಾಯವನ್ನು ಒದಗಿಸಲು ಮುಂದಾಗುತ್ತಾನೆ; ಅನೇಕ ಕ್ಲಿಷ್ಟ ಸವಾಲು/ಸಮಸ್ಯೆಗಳನ್ನು ಎದುರಿಸುತ್ತಾನೆ. ಪೋಲೀಸ್ ಠಾಣೆಯ ನೋಟೀಸ್ ಬೋರ್ಡ್‌ನಲ್ಲಿ ಸಂವಿಧಾನದ ಆರ್ಟಿಕಲ್ ೧೫ರ ಕೆಲವು ಅಂಶಗಳುಳ್ಳ ಒಂದು ಪುಟವನ್ನು ತಾನೇ ಹಾಕುತ್ತಾನೆ. ತನಿಖೆಯಿಂದ ನ್ಯಾಯ ದೊರಕುತ್ತದೆಯೇ, ತಪ್ಪಿತಸ್ಥರಿಗೆ ಶಿಕ್ಷೆಯಾಗುತ್ತದೆಯೇ ಎಂಬುದನ್ನು ಚಲನಚಿತ್ರದ ಅಂತ್ಯ ತಿಳಿಸುತ್ತದೆ.



ಅಯಾನ್ ಆಕೆಗೆ ಬೆಂಗಾವಲಾಗಿ ನಿಲ್ಲುತ್ತೇನೆ ಎಂದು ಭರವಸೆ ನೀಡುತ್ತಾನೆ. ಕಾಣೆಯಾಗಿರುವ ಮೂರನೇ ಹುಡುಗಿಯ ಅಕ್ಕ ಗೌರಾ(ನಟಿ ಸಯಾನಿ ಗುಪ್ತಾ), ಈ ಮೂವರು ಹುಡುಗಿಯರು ಸ್ಥಳೀಯ ಕಂಟ್ರಾಕ್ಟರ್ ಅಂಶುಲ್ ನಹಾರಿಯ (ನಟ ವೀಣ್) ಬಳಿ ಕೆಲಸ ಮಾಡುತ್ತಿದ್ದುದಾಗಿ, ದಿನಗೂಲಿಯ ಮೊತ್ತವನ್ನು ಮೂರು ರೂಪಾಯಿಯಷ್ಟು ಹೆಚ್ಚಿಸಬೇಕೆಂದು ಕೇಳಿದ್ದರು ಎಂದು ಅಯಾನ್‌ಗೆ ತಿಳಿಸುತ್ತಾಳೆ. ಈ ಮಧ್ಯೆ ಸಬ್ ಇನ್ಸ್‌ಪೆಕ್ಟರ್ ಜಾತವ್(ನಟ ಕುಮುದ್ ಮಿಶ್ರಾ) ಮತ್ತು ಮಯಾಂಕ್ (ಅಯಾನ್‌ನ ಆಪ್ತ ಸಹಾಯಕ–ನಟ ಆಶೀಶ್ ವರ್ಮಾ) ಜೀಪ್‌ನಲ್ಲಿ ತೆರಳುತ್ತಿದ್ದಾಗ, ಹುಡುಗಿಯರ ಹತ್ಯೆಯನ್ನು ಖಂಡಿಸಲು, ನಿಷಾದ್(ಭೀಮ್ ಸಂಘರ್ಷ ಸಂಘ್‌ನ ನಾಯಕ – ನಟ ಮೊಹಮ್ಮದ್ ಝೀಶನ್ ಅಯೂಬ್)ನ ಕೆಲವು ಸಂಗಾತಿಗಳು ಆ ಜೀಪನ್ನು ಸುಟ್ಟು ಹಾಕುತ್ತಾರೆ. ಈ ಬೆಳವಣಿಗೆಯಿಂದ ಅಯಾನ್ ತನಿಖೆಯನ್ನು ತೀವ್ರಗೊಳಿಸುತ್ತಾನೆ. ಇಡೀ ಪ್ರಕರಣದಲ್ಲಿ, ಜಾತಿ ಶ್ರೇಣೀಕರಣದಲ್ಲಿ ಅತ್ಯಂತ ಕೆಳಸ್ತರದಲ್ಲಿರುವ ಪಾಸಿ ಜಾತಿಯ ಹುಡುಗಿಯರಿಗೆ ಅನ್ಯಾಯವಾಗಿರುವುದನ್ನು ಅರಿತ ಅಯಾನ್ ನ್ಯಾಯವನ್ನು ಒದಗಿಸಲು ಮುಂದಾಗುತ್ತಾನೆ; ಅನೇಕ ಕ್ಲಿಷ್ಟ ಸವಾಲು/ಸಮಸ್ಯೆಗಳನ್ನು ಎದುರಿಸುತ್ತಾನೆ. ಪೊಲೀಸ್ ಠಾಣೆಯ ನೋಟೀಸ್ ಬೋರ್ಡ್‌ನಲ್ಲಿ ಸಂವಿಧಾನದ ಆರ್ಟಿಕಲ್ ೧೫ರ (ಮತಧರ್ಮ, ಜನಾಂಗ, ಲಿಂಗ ಅಥವಾ ಹುಟ್ಟಿದ ಸ್ಥಳವನ್ನು ಆಧರಿಸಿ ಯಾವುದೇ ರೀತಿಯ ತಾರತಮ್ಯವನ್ನು ನಿಷೇಧಿಸಲಾಗಿದೆ ಎಂದು ಸಾರುತ್ತದೆ ಈ ವಿಧಿ) ಕೆಲವು ಅಂಶಗಳುಳ್ಳ ಒಂದು ಪುಟವನ್ನು ತಾನೇ ಹಾಕುತ್ತಾನೆ. ತನಿಖೆಯಿಂದ ನ್ಯಾಯ ದೊರಕುತ್ತದೆಯೇ, ತಪ್ಪಿತಸ್ಥರಿಗೆ ಶಿಕ್ಷೆಯಾಗುತ್ತದೆಯೇ ಎಂಬುದನ್ನು ಚಲನಚಿತ್ರದ ಅಂತ್ಯ ತಿಳಿಸುತ್ತದೆ.

ಚಲನಚಿತ್ರದ ಪ್ರಾರಂಭದಲ್ಲೇ ಗೌರಾ ಪಾಸಿ ಸಮುದಾಯದ ತನ್ನ ಬಾಂಧವರ ಜೊತೆ ಹಾಡನ್ನು ಹಾಡುತ್ತಿರುತ್ತಾಳೆ. ಸಮಾಜದಲ್ಲಿ ನೆಲೆಗೊಂಡಿರುವ ಅಸಮಾನತೆಯನ್ನು ಆ ಹಾಡು ಅನಾವರಣಗೊಳಿಸುತ್ತದೆ ಹಾಗೂ ಚಲನಚಿತ್ರ ಹಿಡಿಯಬಹುದಾದ ಜಾಡನ್ನು ಸೂಕ್ಷ್ಮವಾಗಿ ಈ ಹಂತದಲ್ಲೇ ದಾಟಿಸುತ್ತದೆ. ಅಯಾನ್ ಪ್ರಥಮ ಬಾರಿ ಲಾಲ್‌ಗಾಂವ್‌ಗೆ ವಾಹನದಲ್ಲಿ ಬರುತ್ತಿರುವಾಗ ಬಾಬ್ ಡೈಲಾನ್‌ನ ಹಾಡು 'ಬ್ಲೋಯಿಂಗ್ ಇನ್ ದ ವಿಂಡ್' ಹಿನ್ನೆಲೆಯಲ್ಲಿ ಕೇಳಿ ಬರುತ್ತದೆ. ಆತನ ಪಕ್ಕ ಜವಹರಲಾಲ್ ನೆಹರು ವಿರಚಿತ 'ಡಿಸ್ಕವರಿ ಆಫ್ ಇಂಡಿಯಾ' ಪುಸ್ತಕ ಕಂಡುಬರುತ್ತದೆ. ಅಯಾನ್‌ನ ವೇಷಭೂಷಣ, ಠಾಕುಠೀಕು ನಡವಳಿಕೆ ಮುಂತಾದವು ಆತ ಪಟ್ಟಣಪ್ರದೇಶದ, ಶಿಕ್ಷಿತ, ಉಚ್ಚ ಜಾತಿಯವನೆಂದು ಸಾರುತ್ತಿರುತ್ತವೆ. ಅಲ್ಲದೆ ಆತ ಹಲವು ಸ್ತರಗಳ ಭಾರತಕ್ಕೆ ಮುಖಮಾಡಿರುವ ಯುವ ಪೊಲೀಸ್ ಅಧಿಕಾರಿ ಎಂಬುವುದನ್ನು ಈ ಶಾಟ್‌ನಲ್ಲಿನ ಪುಸ್ತಕ ಸೂಚಿಸುತ್ತದೆ. ಚಲನಚಿತ್ರದ ಕೊನೆಯ ಶಾಟ್‌ನಲ್ಲಿ ಅಯಾನ್ ತನ್ನ ಸಹೋದ್ಯೋಗಿಗಳೊಡನೆ ಬೀದಿ ಬದಿಯ ಖಾನಾವಳಿಯ ಮುದುಕಿಯಿಂದ ರೊಟ್ಟಿಯನ್ನು ತಿನ್ನುತ್ತಾನೆ. ಈ ವೈದೃಶ್ಯ ಆತನ ವ್ಯಕ್ತಿತ್ವದ ಸಣ್ಣ ಬದಲಾವಣೆಯ ಝಲಕನ್ನು ನೀಡುತ್ತದೆ.

ಮೇಲೆ ಪ್ರಸ್ತಾಪಿಸಿರುವ ದೃಶ್ಯ ಮುಂದುವರಿದಂತೆ, ಅಯಾನ್ ಮಾರ್ಗದಲ್ಲಿದ್ದ ಹಳ್ಳಿಯೊಂದರಲ್ಲಿ ನೀರಿನ ಬಾಟಲನ್ನು ಖರೀದಿಸಲು ವಾಹನದ ಚಾಲಕನಿಗೆ ತಿಳಿಸುತ್ತಾನೆ. ಆಗ ಆತ "ಅಯ್ಯೋ! ಇದು ಪಾಸಿಗಳು ವಾಸಿಸುವ ಹಳ್ಳಿ. ಅವರಿಂದ ನೀರು ಸ್ವೀಕರಿಸುವುದಿರಲಿ, ಅವರ ನೆರಳೂ ಸೋಂಕಬಾರದು ಎಂಬ ಕಟ್ಟಳೆ ಇದೆ" ಎನ್ನುತ್ತಾನೆ. ಇದರಿಂದ ವಿಚಲಿತನಾಗುವ ಅಯಾನ್ ತಾನೇ ನೀರಿನ ಬಾಟಲನ್ನು ಖರೀದಿಸುತ್ತಾನೆ!

ಲಾಲ್‌ಗಾಂವ್ ಪ್ರದೇಶದಲ್ಲಿ ಆಳವಾಗಿ ಬೇರೂರಿರುವ ಜಾತಿಪ್ರಜ್ಞೆಯ ವಿಚಾರ ನೇರವಾಗಿ ಅಯಾನ್‌ಗೆ ತಿಳಿಯುತ್ತದೆ. ಒಮ್ಮೆ ಠಾಣೆಯ ಪ್ರಾಂಗಣದಲ್ಲಿ ಆತನ ಸಹೋದ್ಯೋಗಿಗಳು ಸೇರಿರುತ್ತಾರೆ. ಅವರ ಬಳಿ ಸಾಗಿ ಅಯಾನ್ ಅವರ ಜಾತಿಯ ಬಗೆಗೆ ವಿಚಾರಿಸುತ್ತಾನೆ. ಒಬ್ಬೊಬ್ಬರಾಗಿ ಅವರು ಜಾಟ್, ರಜಪೂತ್, ಕಾಯಸ್ಥ, ಚಮ್ಮಾರ್.. ಎಂದು ತಿಳಿಸುತ್ತಾರೆ. ಸಬ್ ಇನ್ಸ್‌ಪೆಕ್ಟರ್ ಜಾತವ್ "ನಾನು ಚಮ್ಮಾರ್" ಎನ್ನುತ್ತಾನೆ. ಆಗ ಅಯಾನ್ "ಚಮ್ಮಾರ್ ಮತ್ತು ಪಾಸಿ ಒಂದೇನಾ?" ಎಂದು ಪ್ರಶ್ನಿಸುತ್ತಾನೆ. ಜಾತವ್ "ಇಲ್ಲ. ನಾವು ಪಾಸಿಗಳಿಗಿಂತ ಮೇಲುಸ್ತರದಲ್ಲಿದ್ದೀವಿ. ಅವರು ತಯಾರಿಸಿದ ಆಹಾರವನ್ನು ನಾವು ಸೇವಿಸುವುದಿಲ್ಲ" ಎಂದು ಉತ್ತರಿಸುತ್ತಾನೆ. ನಂತರ "ನಾನ್ಯಾರು?" ಎಂಬ ಅಯಾನ್‌ನ ಪ್ರಶ್ನೆಗೆ ಆತನ ಆಪ್ತ ಸಹಾಯಕ ಮಯಾಂಕ್ "ನೀವು ಬ್ರಾಹ್ಮಣರಲ್ಲೇ ಉತ್ತಮರು" ಎಂದು ಜವಾಬು ನೀಡುತ್ತಾನೆ! ತನಿಖೆ ಒಂದು ಹಂತವನ್ನು ತಲುಪಿದಾಗ, ಪಾಸಿ ಜಾತಿಯ ಹುಡುಗಿಯರ ಸಾವು ಸಾವಲ್ಲ, ಕೊಲೆ ಎಂಬುದು ಅಯಾನ್‌ಗೆ ಅರಿವಾಗುತ್ತದೆ. ತನಿಖೆಯ ದಿಕ್ಕನ್ನು ತಪ್ಪಿಸಲು ಪ್ರಯತ್ನಿಸುವ ಬ್ರಹ್ಮದತ್ತ್ ಅಸಫಲನಾಗುತ್ತಾನೆ. ಕೊನೆಗೆ "ನೀವು ದಯವಿಟ್ಟು ಸಮಾಜದ(ಇಲ್ಲಿರುವ) ಸಮತೋಲನವನ್ನು ಏರುಪೇರು ಮಾಡಬೇಡಿ" ಎಂದು ಆತ ಅಯಾನ್‌ನಲ್ಲಿ ವಿನಂತಿಸುತ್ತಾನೆ. ಹೀಗೆ ನಮ್ಮ ಸಮಾಜದಲ್ಲಿ ರೂಢಿಗತವಾಗಿರುವ ಜಾತಿ ಎಂಬ ವ್ಯವಸ್ಥೆಯ ಕರಾಳ ಮುಖಗಳನ್ನು ಈ ಚಲನಚಿತ್ರದ ಇತರ ಸನ್ನಿವೇಶಗಳಲ್ಲೂ ಕಾಣಬಹುದು. ಆದರೆ ಅಯಾನ್ ತನ್ನ ಸಹೋದ್ಯೋಗಿಗಳಲ್ಲಿರಬಹುದಾದ ಜಾತಿ ಭಾವನೆಯನ್ನು ಅರಿಯಲು ಕೇಳಿದ ಪ್ರಶ್ನೆಯೇ ಕೊನೆಯಲ್ಲಿ, ಸಿಬಿಐ ವಿಚಾರಣೆಯ ಸಮಯದಲ್ಲಿ ಆತನಿಗೆ ತೊಡಕಾಗುತ್ತದೆ! ಅಲ್ಲಿನ ಸಾಮಾಜಿಕ ಸೌಹಾರ್ದವನ್ನು ಅಯಾನ್ ಕದಡಿದ್ದಾನೆಂದು ಸಿಬಿಐ ಅಧಿಕಾರಿ ಪಣಿಕ್ಕರ್ (ತಮಿಳು ನಟ ನಾಸ್ಸರ್) ಆಪಾದಿಸುತ್ತಾನೆ. ಪೂರ್ವಾಗ್ರಹಪೀಡಿತನಾಗಿ ತನಿಖೆಯನ್ನು ಮಾಡುತ್ತಿರುವುದಾಗಿ ಆರೋಪಿಸಿ, ಅಯಾನ್‌ನನ್ನು ಅಮಾನತುಗೊಳಿಸಲಾಗುತ್ತದೆ!

ಚಲನಚಿತ್ರದಾದ್ಯಂತ ಅಲ್ಲಲ್ಲಿ ಮಬ್ಬು ವಾತಾವರಣದ ದೃಶ್ಯಗಳಿವೆ. ಇಬ್ಬರು ಹುಡುಗಿಯರ ನೇಣಿನ ದೃಶ್ಯವಂತೂ ಒಂದು ಬೀಭತ್ಸ ಪೈಂಟಿಂಗನ್ನು ನೆನಪಿಸುವಂತಿದೆ. ಆ ಕ್ಷಣದಲ್ಲಿ ಕ್ಯಾಮರಾ ಸ್ಥಾಯಿಯಾಗುತ್ತದೆ. ಲಾಲ್‌ಗಾಂವ್ ಪ್ರದೇಶದ ಸಾಮಾಜಿಕ ಪ್ರಕ್ಷುಬ್ಧತೆಯನ್ನು ಈ ತರಹದ ದೃಶ್ಯಕಟ್ಟುವಿಕೆಯ ಮೂಲಕ ನಿರ್ದೇಶಕ–ಛಾಯಾಗ್ರಾಹಕರು (ಇವಾನ್ ಮುಲಿಗನ್) ಬಿಂಬಿಸಿದ್ದಾರೆ. ಮಂಗೇಶ್ ಧಡ್ಕೆ ಚಲನಚಿತ್ರದ ಮೂಡ್‌ಗೆ ಮತ್ತು ವೀಕ್ಷಕರಲ್ಲಿ ಉದ್ಭವಿಸುವ ಮುಂದೇನು ಎಂಬ ಪ್ರಶ್ನೆಗೆ ತಕ್ಕಂತೆ ಹಿನ್ನೆಲೆ ಸಂಗೀತವನ್ನು ಸಂಯೋಜಿಸಿದ್ದಾರೆ.

ಇನ್ನು ಈ ಚಲನಚಿತ್ರದ ಕುರಿತಂತೆ ಕೆಲವು ಅಪಸ್ವರಗಳೂ ಎದ್ದಿವೆ. ಅವುಗಳತ್ತ ಗಮನವನ್ನು ಹರಿಸೋಣ. ದಲಿತರು ದೀರ್ಘಾವಧಿಯಿಂದ ಜಾತಿ ವ್ಯವಸ್ಥೆಯ ವಿರುದ್ಧ ಸೆಣಸಾಟವನ್ನು ನಡೆಸುತ್ತಲೇ ಬಂದಿದ್ದಾರೆ. ಈ ಚಲನಚಿತ್ರದಲ್ಲಿ ಅವರು ವಸ್ತುವಾಗಿದ್ದಾರೆ ಅಷ್ಟೇ. ಬದಲಾವಣೆಯ ಪಾತ್ರಧಾರಿಗಳಾಗಿಲ್ಲ. ಅವರ ಪರವಾಗಿ ಹೋರಾಡುವುದು ಒಬ್ಬ ಬ್ರಾಹ್ಮಣ ನಾಯಕ (ಇಂತಹದ್ದನ್ನು 'ವೈಟ್ ಸೇವಿಯರ್ ಟೆಂಪ್ಲೇಟ್' ಎಂದು ಕರೆಯಲಾಗುತ್ತದೆ). ಜಾತಿ ವ್ಯವಸ್ಥೆಯನ್ನು ಗ್ರಾಮೀಣ ಪ್ರದೇಶದ ಜೊತೆ ತಳಕುಹಾಕಲಾಗಿದೆ. ಅಂದರೆ ಅಂತಹ ಪ್ರದೇಶಗಳಲ್ಲಿರುವ ಅವಿದ್ಯಾವಂತ, ಬಡ ಜನತೆ ಜಾತಿ ಪದ್ಧತಿಯನ್ನು ಪಾಲಿಸುತ್ತಾರೆ ಎಂಬ ಸಂದೇಶವನ್ನು ಈ ಚಲನಚಿತ್ರ ರವಾನಿಸುತ್ತದೆ. ಅಯಾನ್ ಒಂದರ್ಥದಲ್ಲಿ ಜಾತ್ಯಾಂಧನಾಗಿದ್ದಾನೆ. ಅಂದರೆ ಆತ ಯಾವುದೇ ಜಾತಿಯನ್ನು ಮೇಲು–ಕೀಳಾಗಿ ಕಾಣುವುದಿಲ್ಲ. ಆದರೆ ಈ ತರಹದ ಕಾಣ್ಕೆ ಉಚ್ಚ ಜಾತಿಗಳಿಗೆ ಒಂದು ವಿಶೇಷ ಸವಲತ್ತೇ (ಪ್ರಿವಿಲೇಜ್) ಸರಿ. ಏಕೆಂದರೆ ಆ ಜಾತಿಗಳ ಮಂದಿ ಜಾತಿ ಎಂಬ ವ್ಯವಸ್ಥೆಯನ್ನು ಉಪೇಕ್ಷಿಸಿದರೂ, ಅದರ ಸಾಮಾಜಿಕ/ಸಾಂಸ್ಕೃತಿಕ ಬಂಡವಾಳದ ಫಲಾನುಭವಿಗಳು ಅವರೇ ಆಗಿದ್ದಾರೆ. ಚಲನಚಿತ್ರದಲ್ಲಿ ನಿಷಾದ್ "ನಾವು ಕೆಲವೊಮ್ಮೆ ಹರಿಜನರಾಗುತ್ತೀವಿ; ಕೆಲವೊಮ್ಮೆ ಬಹುಜನ. ಆದರೆ ನಾವೆಂದೂ ಪ್ರಜೆಗಳಾಗುವುದಿಲ್ಲ.." ಎನ್ನುತ್ತಾನೆ. 'ಬಹುಜನ' ಎನ್ನುವುದು ಕಾನ್ಶಿರಾಮ್ ಶುರುಮಾಡಿದ ಚಳುವಳಿಯ ಜೊತೆ ತಳಕುಹಾಕಿಕೊಂಡಿರುವ ಒಂದು ಬಲಿಷ್ಠ, ದೃಢ ಅಸ್ಮಿತೆ. ಅದರ ಕಲ್ಪನೆಯಲ್ಲಿ, ದಲಿತರು ಇತರ ಹಿಂದುಳಿದ ಜಾತಿಗಳು ಮತ್ತು ಅಲ್ಪಸಂಖ್ಯಾತರು ಈ ದೇಶದ ಆಡಳಿತಗಾರರಾಗುತ್ತಾರೆ. ಆದುದರಿಂದ ಹರಿಜನ್ ಜೊತೆ ಬಹುಜನ್‌ನನ್ನು ಸಮೀಕರಿಸುವುದು ನಮ್ಮ ಭಾರತದ ಸಮಾಜ ಮತ್ತು

ರಾಜಕಾರಣವನ್ನು ಸರಳೀಕರಿಸಿದಂತಾಗುತ್ತದೆ ಎಂಬ ನಿಲುಮೆಗಳು ವ್ಯಕ್ತವಾಗಿವೆ.

ಇವುಗಳ ಜೊತೆ ಗೌರಾ ಪಾತ್ರದ ಬೆಳವಣಿಗೆ ಮತ್ತು ನಿಷಾದ್–ಅಯಾನ್ ಭೇಟಿಯ ದೃಶ್ಯದ ಕಟ್ಟೋಣದ ಬಗೆಗೆ ಕೂಡ ಟೀಕೆಗಳನ್ನು ವ್ಯಕ್ತಪಡಿಸಲಾಗಿದೆ. ಮೊದಲ ದೃಶ್ಯದಲ್ಲಿ ಸಂವೇದನಾಶೀಲ ಹಾಡನ್ನು ಹಾಡುವ ಗೌರಾ ಅಯಾನ್‌ನನ್ನು ಭೇಟಿ ಮಾಡುವ ನಿಟ್ಟಿನಲ್ಲಿ ಆಕೆ ತೋರಿಸುವ ಕೆಚ್ಚು, ಕೊನೆಯಲ್ಲಿ ನಿಷಾದ್ ಮರಣಿಸಿದಾಗ ಜಾತವ್‌ನ ಸಾಂತ್ವನದ ಆಸರೆಯಲ್ಲಿ ನಲುಗುತ್ತಾಳೆ. ಅಂದರೆ ಆಕೆಯ ಪಾತ್ರದ ಬೆಳವಣಿಗೆಯಲ್ಲಿ ಗಟ್ಟಿತನವಿಲ್ಲ. ಹಾಗೆಯೇ ನಿಷಾದ್ ಅಯಾನ್‌ನನ್ನು ಭೇಟಿ ಮಾಡುವ ಸಂದರ್ಭದಲ್ಲಿ ಕೆಳಗೆ ಕುಳಿತುಕೊಳ್ಳುತ್ತಾನೆ. ಇದು ಆತನ ವ್ಯಕ್ತಿತ್ವವನ್ನು ಕುಬ್ಜಗೊಳಿಸುವ ನಡೆ ಎಂದೂ ಬೊಟ್ಟುಮಾಡಿ ತೋರಿಸಲಾಗಿದೆ.

ಆದರೆ ಗೌರಾ ಇರಲಿ ಅಥವಾ ಇತರ ಮಹಿಳೆಯಿರಲಿ / ವ್ಯಕ್ತಿಯಿರಲಿ, ಸಂಕಷ್ಟಗಳು ಸರಣಿಯೋಪಾದಿಯಲ್ಲಿ ಅಪ್ಪಳಿಸುವಾಗ, ಆಕೆ/ಆತ ಕಂಗೆಡುವ ಸಂದರ್ಭಗಳೂ ಇರುತ್ತವೆ. ಇನ್ನು ನಿಷಾದ್ ಅಯಾನ್‌ನನ್ನು ಭೇಟಿ ಮಾಡುವ ದೃಶ್ಯ. ನಿಜ, ಪ್ರಾರಂಭದಲ್ಲೇ ನಿಷಾದ್ ನೆಲದ ಮೇಲೆ ಕೂಡುತ್ತಾನೆ. ಅಯಾನ್ ಹಲಗೆಯೊಂದಕ್ಕೆ ತಾಗಿಕೊಂಡು ನಿಂತಿರುತ್ತಾನೆ. ಈ ಸಂದರ್ಭದಲ್ಲಿನ ಕ್ಯಾಮರಾ ಕೋನಗಳು, ಚಲನವಲನಗಳು ನಿಷಾದ್‌ನ ನಿರೂಪಣೆಗೆ ಒತ್ತು ನೀಡುವಂತಿವೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಆತ ಅಯಾನ್‌ನ ಎದುರು ಕುಬ್ಜನಾಗುವುದಿಲ್ಲ; ಇತ್ಯಾತ್ಮಕವಾಗಿ ತನ್ನ ಸಂದೇಶವನ್ನು ಸ್ಪಷ್ಟವಾಗಿ ರವಾನಿಸುತ್ತಾನೆ. ಕೊನೆಯಲ್ಲಿ ಕುಳಿತ ನಿಷಾದ್‌ನ ಬಳಿ ಸಾಗಿ ಅಯಾನ್ ತನ್ನ ಪಾದಗಳ ಮೇಲೆ ಭಾರ ಹಾಕಿ ಕುಳಿತುಕೊಳ್ಳುತ್ತಾನೆ! ಜಾತಿ ಶ್ರೇಣೀಕರಣದ ದೃಷ್ಟಿಕೋನದಿಂದ ವಿಶ್ಲೇಷಿಸಿದಾಗ ಈ ಕ್ರಿಯೆ ಏನನ್ನು ಸೂಚಿಸುತ್ತದೆ?

ಚಲನಚಿತ್ರದಲ್ಲಿ ಕೆಲವು ಡ್ರಾಮ್ಯಾಟಿಕ್ ಅಂಶಗಳು ಇವೆ. ಕೊನೆಯ ದೃಶ್ಯದಲ್ಲಿ ಕಾಣೆಯಾಗಿದ್ದ ಪೂಜಾಳನ್ನು ಅಯಾನ್‌ನೇ ಹೊತ್ತುಕೊಂಡು ಬರುತ್ತಾನೆ. ಇದು ಒಂದು ಅಂಶ. ಬೀದಿ ಬದಿಯಲ್ಲಿದ್ದ ಖಾನಾವಳಿಯ ಮುದುಕಿ ಎಲ್ಲರಿಗೂ ರೊಟ್ಟಿ–ಭಾಜಿ ಕೊಟ್ಟನಂತರ ಆಕೆ ಯಾವ ಜಾತಿಯವಳೆಂದು ಅಯಾನ್ ಕೇಳುತ್ತಾನೆ. ಆಗ ರಸ್ತೆಯಲ್ಲಿ ಸಾಗುತ್ತಿರುವ ಲಾರಿಯ ಹಾರ್ನ್‌ನ ದೊಡ್ಡದಾದ ಶಬ್ದದಲ್ಲಿ ಆಕೆಯ ಉತ್ತರ ಕಳೆದುಹೋಗುತ್ತದೆ. ಇದು ಇನ್ನೊಂದು ಅಂಶ. ಪೂಜಾ ಕಳೆದುಹೋಗಿ ಸುಮಾರು ದಿನಗಳಾಗಿರುತ್ತವೆ ಎಂದು ಊಹಿಸಬಹುದು. ಅಷ್ಟು ದಿನ ಆಕೆ ಹಸಿವನ್ನು ಹೇಗೆ ತಡೆದುಕೊಂಡಿರುತ್ತಾಳೆ ಎಂಬ ಪ್ರಶ್ನೆ ಏಳುತ್ತದೆ.

ಈ ಚಲನಚಿತ್ರದ ಪಂಚ್ ವಿಷಯಗಳಲ್ಲಿ ಒಂದು – ಅದರ ಸಂಭಾಷಣೆಗಳು. ಅವು ವೀಕ್ಷಕರಿಗೆ ರಾಚುವಂತಿವೆ. ಅವುಗಳಲ್ಲಿ ಕೆಲವು ಹೀಗಿವೆ :

❖ "ಎಲ್ಲ ಸಮುದಾಯಗಳಿಗೂ ತಮ್ಮವೇ ಆದ ಸಮಸ್ಯೆಗಳು ಇರುತ್ತವೆ. ಆದರೆ ದೇಗುಲ ಪ್ರವೇಶ ಮಾಡಿದ್ದಕ್ಕೆ ನಮ್ಮಂತೆ ಮೂಳೆ ಮುರಿಸಿಕೊಳ್ಳುವಂತಹ ಸಮಸ್ಯೆಗಳಲ್ಲ ಅವು."
❖ "ಈ ದೇಶದಲ್ಲಿ ಶೇಕಡ ೭೦ ಇರುವ ಎಸ್‌ಸಿ / ಎಸ್‌ಟಿ / ಒಬಿಸಿಗಳ ಮಂದಿಗೆ ದನಿಯಿಲ್ಲ. ಇವರನ್ನು ಶೇಕಡ ೩೦ ಇರುವ ಉಳಿದವರು ನಿಯಂತ್ರಣದಲ್ಲಿರಿಸಿಕೊಂಡಿದ್ದಾರೆ.
❖ " ಎಲ್ಲರೂ ಸಮಾನರಾಗಿಬಿಟ್ರೇ 'ರಾಜ' ಆಗೋದು ಯಾರು?"
❖ "ನಮಗೆ ರಾಜನಾದ್ರೂ ಏಕೆ ಬೇಕು?"
❖ "ನಮಗೆ ಹೀರೋ ಬೇಕಿಲ್ಲ; ಬೇಕಿರೋದು ಹೀರೋಗಾಗಿ ಕಾಯುತ್ತ ಕೂರದವರು.." ಇತ್ಯಾದಿ.

ಅಯಾನ್–ಅದಿತಿ(ಸಂಗಾತಿ–ನಟಿ ಇಶಾ ತಲ್ವಾರ್) ನಡುವೆ ಜರುಗುವ ವಿಷಯ ವಿನಿಮಯಗಳು, ಊನ ಘಟನೆಯನ್ನು ನೆನಪಿಸುವ ಪ್ರಸಂಗ, ರೋಹಿತ್ ವೇಮುಲ, ನಿರ್ಭಯ ಕೇಸುಗಳ ಪ್ರಸ್ತಾಪ, ಪೊಲೀಸ್ ಠಾಣೆಯ ಆವರಣದಲ್ಲಿ ಕಟ್ಟಿಕೊಂಡ ಒಳಚರಂಡಿಯನ್ನು ಸರಿಪಡಿಸಲು ಮ್ಯಾನ್‌ಹೋಲ್‌ಗೆ ಇಳಿಯುವ ಬರೀಮೈನ ಪಾಸಿ ಯುವಕ ಹೊಲಸನ್ನು ಎತ್ತಿ ಹಾಕುವ ಸನ್ನಿವೇಶ, ಪೌರಕಾರ್ಮಿಕರ ಮುಷ್ಕರ, ಹಿಂದುತ್ವದ ಪ್ರತಿಪಾದಕನಂತೆ ಕಾಣಿಸುವ, ಕಾವಿ ಬಟ್ಟೆಯ ಮಹಂತ್ – ದಲಿತ ನಾಯಕನ ಸಹಭೋಜನ / ರಾಜಕೀಯ ಮೈತ್ರಿಯ ಹಿಂದಿರುವ ಬೂಟಾಟಿಕೆ ಮತ್ತು ಅಧಿಕಾರ ಲಾಲಸೆ ಇತ್ಯಾದಿ ಅಂಶಗಳು ಚಿತ್ರಕಥೆಯಲ್ಲಿ ಅಡಕಗೊಂಡಿವೆ. ಆದುದರಿಂದ ಅದು ಸಂಕೀರ್ಣವಾಗಿದೆ. ಅನೇಕ ವಿಷಯಗಳನ್ನು ಚಿತ್ರಕಥೆಯಲ್ಲಿ ಸೇರಿಸಿ ವೀಕ್ಷಕರನ್ನು ಹಿಡಿದಿಟ್ಟುಕೊಳ್ಳುವುದು ಸುಲಭವಲ್ಲ. ಈ ವಿಚಾರದಲ್ಲಿ, ಚಿತ್ರಕಥೆಯನ್ನು ಬರೆದಿರುವ ಗೌರವ್ ಸೋಲಂಕಿ ಮತ್ತು ಅನುಭವ ಸಿನ್ಹಾ ಗೆದ್ದಿದ್ದಾರೆ. ನಟರು ನಟನೆಯಲ್ಲಿ ಕಸುವನ್ನು ತುಂಬಿದ್ದಾರೆ.

ಆರ್ಟಿಕಲ್ ೧೫ ಚಲನಚಿತ್ರಕ್ಕೆ ೨೦೧೪ರಲ್ಲಿ ಉತ್ತರ ಪ್ರದೇಶದ ಬದೌನ್‌ನಲ್ಲಿ ಜರುಗಿದ ಗ್ಯಾಂಗ್ ರೇಪ್ ಕೇಸ್‌ನ ಪ್ರೇರೇಪಣೆ ಇದೆ. ನಮ್ಮ ಸಂವಿಧಾನ ಅನೇಕ ಪ್ರಹಾರಗಳಿಗೆ ಈಡಾಗಿರುವ ಪ್ರಸ್ತುತ ಸಂದರ್ಭದಲ್ಲಿ ಸಂವಿಧಾನವನ್ನು ಎತ್ತಿಹಿಡಿಯುವ ದೃಢ ನಿರ್ಣಯದ ಸುತ್ತ ಚಲನಚಿತ್ರದ ವಸ್ತುವಿರುವುದು ಪ್ರಶಂಸನೀಯ ವಿಚಾರ. ಈ ಚಲನಚಿತ್ರ ಅನೇಕ ಚರ್ಚೆಗಳಿಗೆ ಗ್ರಾಸವಾಗಿದೆ. ಇದರ ಬಗೆಗೆ ಪರ–ವಿರೋಧ ನಿಲುವುಗಳು ವ್ಯಕ್ತವಾಗಿವೆ. ಇದು ವೀಕ್ಷಕರಲ್ಲಿ ಹಲವು ಪ್ರಶ್ನೆಗಳನ್ನು ಎಬ್ಬಿಸುವುದರಲ್ಲಿ ಸಫಲವಾಗಿದೆ. ನಮ್ಮ ಸಮಾಜದಲ್ಲಿರುವ ಕೆಲವು ಕಟು, ನಗ್ನಸತ್ಯಗಳತ್ತ ಕನ್ನಡಿಯನ್ನು ಹಿಡಿದಿದೆ. ಒಂದು ಚಲನಚಿತ್ರ ಯಶಸ್ವಿಯಾಗಿದೆ ಎಂದು ಪರಿಗಣಿಸಲು ಇನ್ನೇನು ಬೇಕು?!

**ಮ. ಶ್ರೀ. ಮುರಳಿ ಕೃಷ್ಣ**
ನಂ ೩೮, ೩ನೇ ಕ್ರಾಸ್, ರಾಜಾ ಗಾರ್ಡನಿಯ ಲೇಔಟ್
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

ಎದುವಾರ್ಡೋ ಗೆಲಿಯಾನೋನ ಜನನ ೧೯೪೦ನೇ ಸೆಪ್ಟೆಂಬರ್ ೧೩ರಂದು ಮಾಂಟವಿಡಿಯೋ, ಉರುಗ್ವೇನಲ್ಲಿ. ಆತ ಉರುಗ್ವೇಯ ಪತ್ರಿಕೋದ್ಯಮಿ, ಲೇಖಕ ಮತ್ತು ಕಾದಂಬರಿಕಾರ. ಅವನ 'ಓಪನ್ ವೇನ್ಸ್ ಆಫ್ ಲ್ಯಾಟಿನ್ ಅಮೆರಿಕಾ' (೧೯೭೧) ಪ್ರಪಂಚದ ಕಣ್ತೆರೆಸುವಂತಹ ಕೃತಿ. ೧೯೭೩ರಲ್ಲಿ ಒಂದು ಮಿಲಿಟರಿ ಕೂ ಉರುಗ್ವೇಯ ಅಧಿಕಾರವನ್ನು ವಹಿಸಿಕೊಂಡಿತು. ಗೆಲಿಯಾನೊ ಬಂಧನಕ್ಕೊಳಗಾದ. ಅಲ್ಲಿಂದ ತಪ್ಪಿಸಿಕೊಂಡು ಅರ್ಜೆಂಟಿನಾ ಸೇರಿದ, ಅಲ್ಲಿ ಕ್ರೈಸಿಸ್ ನಿಯತಕಾಲಿಕೆಯನ್ನು ಆರಂಭಿಸಿದ. ೧೯೮೫ರ ಪ್ರಾರಂಭದಲ್ಲಿ ಮತ್ತೆ ಮಾಂಟವಿಡಿಯೋಕ್ಕೆ ಬಂದ. ಅವನ ಬರಹಗಳಲ್ಲಿ ಸ್ವಾತಂತ್ರ್ಯ ಮತ್ತು ಗುಲಾಮಗಿರಿ; ಪ್ರಜಾಪ್ರಭುತ್ವ ಮತ್ತು ಅಧಿಕಾರಶಾಹಿಗಳ ನಡುವಿನ ಬಾಂಧವ್ಯವನ್ನು ಹೆಚ್ಚಾಗಿ ಕಾಣಬಹುದು. ಏಪ್ರಿಲ್ ೧೩, ೨೦೧೫ರಂದು ತನ್ನ ೭೪ನೇ ವಯಸ್ಸಿನಲ್ಲಿ ಮಾಂಟವಿಡಿಯೋದಲ್ಲಿ ತೀರಿಕೊಂಡ. ಅವನ "ಮಿರರ್ಸ್"ನಿಂದ ಆಯ್ದ ತುಣುಕುಗಳು ಇಲ್ಲಿವೆ.

## ಗಣಕ ಯಂತ್ರದ ಜನಕ

ಅಲನ್ ಟ್ಯೂರಿಂಗ್ ಒಬ್ಬ ಗಡಸು ವ್ಯಕ್ತಿ ಎಂದು ಅವನನ್ನು ಜರಿಯುತ್ತಿರಲಿಲ್ಲ. ಬದಲಾಗಿ ಅವನ ಎದೆಯ ಮೇಲೆ ಕೂದಲನ್ನು ಹೊಂದಿದ್ದ ಒಬ್ಬ ಬಲಿಷ್ಠನೆಂದು.

ಅವನು ಕಿರುಚುತ್ತಿದ್ದ, ಕರ್ಕಶ ಧ್ವನಿಯಲ್ಲಿ ಮಾತನಾಡುತ್ತಿದ್ದ ಮತ್ತು ಬಿಕ್ಕುತ್ತಿದ್ದ. ಅವನು ಒಂದು ಹಳೆಯ ನೆಕ್-ಟೈಅನ್ನು ಬೆಲ್ಟ್‌ನಂತೆ ಉಪಯೋಗಿಸುತ್ತಿದ್ದ. ಅವನು ಬಹಳ ಅಪರೂಪವಾಗಿ ನಿದ್ರಿಸುತ್ತಿದ್ದ. ಹಲವಾರು ದಿನಗಳವರೆಗೆ ಕ್ಷೌರ ಮಾಡಿಕೊಳ್ಳುತ್ತಿರಲಿಲ್ಲ. ಸದಾ ತಲೆಯೊಳಗೆ ಗಣಿತದ ಜಟಿಲ ಸೂತ್ರಗಳನ್ನು ಕಲ್ಪಿಸಿಕೊಳ್ಳುತ್ತಾ ನಗರದ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಓಡುತ್ತಿದ್ದ.

ಬ್ರಿಟಿಷ್ ಗುಪ್ತಚರ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಾ ಅವನು ಜರ್ಮನಿಯ ಪ್ರಧಾನ ಸೈನ್ಯಾಧಿಕಾರಿಗಳು ಉಪಯೋಗಿಸುತ್ತಿದ್ದ ದುರ್ಭೇದ್ಯ ಸೇನಾ ಗುಪ್ತ ಸಂಜ್ಞಾಕ್ರಮವನ್ನು ಕಂಡು ಹಿಡಿಯುವಂತಹ ಒಂದು ಯಂತ್ರವನ್ನು ಸೃಷ್ಟಿಸಿ ಎರಡನೇ ವಿಶ್ವಸಮರವನ್ನು ಮೊಟಕುಗೊಳಿಸಿದ.

ಅಷ್ಟು ಹೊತ್ತಿಗಾಗಲೆ ಅವನು ಒಂದು ವಿದ್ಯುನ್ಮಾನ ಗಣಕಯಂತ್ರದ ಮೂಲ ಮಾದರಿಯನ್ನು ಕಲ್ಪಿಸಿಕೊಂಡಿದ್ದ ಮತ್ತು ಇಂದಿನ ಮಾಹಿತಿ ತಂತ್ರಜ್ಞಾನದ ವ್ಯವಸ್ಥೆಗೆ ಸೈದ್ಧಾಂತಿಕ ಅಡಿಪಾಯವನ್ನು ಸಿದ್ಧಪಡಿಸಿದ್ದ. ನಂತರ ಸಂಯೋಜಿತ ಸಂಕೇತ ಭಾಷೆಯೊಂದಿಗೆ ಕಾರ್ಯ ನಿರ್ವಹಿಸುವ ಮೊತ್ತ ಮೊದಲ ಗಣಕಯಂತ್ರವನ್ನು ನಿರ್ಮಿಸುವ ತಂಡದ ಮುಂದಾಳತ್ವವನ್ನು ವಹಿಸಿ ಮುನ್ನಡೆಸಿದ. ಅವನು ಆ ಯಂತ್ರದೊಂದಿಗೆ ಎಂದಿಗೂ ಕೊನೆಗಾಣದ ಚದುರಂಗದಾಟವನ್ನು ಆಡುತ್ತಿದ್ದ. ಯಂತ್ರಕ್ಕೇ ಹುಚ್ಚು ಹಿಡಿಯುವಂತಹ ಪ್ರಶ್ನೆಗಳನ್ನು ಕೇಳುತ್ತಿದ್ದ. ಅದು ತನಗೆ ಪ್ರೇಮ ಪತ್ರಗಳನ್ನು ಬರೆಯಬೇಕೆಂದು ಒತ್ತಾಯಿಸುತ್ತಿದ್ದ. ಇದಕ್ಕೆ ಪ್ರತ್ಯುತ್ತರವಾಗಿ ಆ ಯಂತ್ರ ಕೆಲವು ಅಸಂಬದ್ಧ ಸಂದೇಶಗಳನ್ನು ಹೊರಹಾಕಿತು. ಆದರೆ 1952ರಲ್ಲಿ ಅವನ ಅಸಭ್ಯ ನಡವಳಿಕೆಗಾಗಿ ಮ್ಯಾಂಚೆಸ್ಟರ್‌ನ ಕ್ರಿಯಾವಂತ ಪೊಲೀಸ್ ಅವನನ್ನು ಬಂಧಿಸಿದರು.

ವಿಚಾರಣೆಯ ವೇಳೆ ತಾನೊಬ್ಬ ಸಲಿಂಗ ಪ್ರೇಮಿ ಎಂದು ಅವನು ಒಪ್ಪಿಕೊಂಡ. ಜೈಲಿನಿಂದಾಚೆಗಿರಲು, ಈ ಬೇಗುದಿಯನ್ನು ನಿವಾರಿಸಿಕೊಳ್ಳಲು ವೈದ್ಯಕೀಯ ಚಿಕಿತ್ಸೆಗೊಳಗಾಗಲು ಅವನು ಸಮ್ಮತಿಸಿದ. ಔಷಧಿಗಳ ಸುರಿಮಳೆ ಅವನನ್ನು ನಪುಂಸಕ ನನ್ನಾಗಿಸಿತು. ಅವನ ಸ್ತನಗಳು ಬೆಳೆದು ದೊಡ್ಡದಾದವು. ಅವನು ಮನೆಯೊಳಗೇ ಇರಲು ಆರಂಭಿಸಿದ. ಅವನು ವಿಶ್ವವಿದ್ಯಾನಿಲಯದ ಕಡೆಗೆ ಮತ್ತೆಂದೂ ಹೋಗಲೇ ಇಲ್ಲ. ಅವನಿಗೆ ಯಾರೋ ಪಿಸುಗುಟ್ಟುವಂತೆ ಕೇಳಿಸುತ್ತಿತ್ತು. ಯಾರೋ ಹಿಂದಿನಿಂದ ತನ್ನನ್ನು ದುರುಗುಟ್ಟಿಕೊಂಡು ನೋಡುವಂತೆ ಭಾಸವಾಗುತ್ತಿತ್ತು.

ಪ್ರತಿದಿನ ಮಲಗುವ ಮುನ್ನ ಒಂದು ಸೇಬು ತಿನ್ನುವುದು ಅವನಿಗೆ ಪರಿಪಾಠ ವಾಗಿತ್ತು. ಹಾಗೊಂದು ರಾತ್ರಿ ಸೇಬಿಗೆ ಅವನು ಸಯನೈಡನ್ನು ಇಂಜೆಕ್ಟ್ ಮಾಡಿದ.

## ಪೀಲೆ

ಎರಡು ಬ್ರಿಟಿಷ್ ತಂಡಗಳು ಚ್ಯಾಂಪಿಯನ್ ಪಟ್ಟಕ್ಕಾಗಿ ಸೆಣಸಾಡುತ್ತಿದ್ದವು. ಕೊನೆಯ ಸೀಟಿ ಅಷ್ಟು ದೂರವೇನೂ ಇರಲಿಲ್ಲ ಮತ್ತು ಎರಡೂ ತಂಡಗಳು ಸಮಾನ ಅಂಕವನ್ನು ಗಳಿಸಿದ್ದವು. ಆಗ ಒಬ್ಬ ಆಟಗಾರ ಇನ್ನೊಬ್ಬ ಆಟಗಾರನಿಗೆ ಡಿಕ್ಕಿ ಹೊಡೆದು ಎದ್ದೇಳಲಾಗದಂತೆ ಕೆಳಗೆ ಬಿದ್ದ.

ಒಂದು ಸ್ಟ್ರೆಚರ್ ಮೇಲೆ ಅವನನ್ನು ಮಲಗಿಸಿಕೊಂಡು ಹೋಗಿ ಇಡೀ ವೈದ್ಯಕೀಯ ತಂಡ ತನ್ನ ಕಾರ್ಯವನ್ನಾರಂಭಿಸಿತು. ಆದರೆ ಅವನು ಮೇಲೇಳಲೇ ಇಲ್ಲ.

ನಿಮಿಷಗಳುರುಳಿದವು, ಶತಮಾನಗಳುರುಳಿದವು. ತಂಡದ ತರಪೇತುದಾರ ತನ್ನ ಗಡಿಯಾರ, ಕೈಗಳನ್ನೆಲ್ಲಾ ನುಂಗುತ್ತಿದ್ದ. ಈಗಾಗಲೇ ಅವನು ತನ್ನ ಎಲ್ಲ ಬದಲಿ ಆಟಗಾರರನ್ನು ಉಪಯೋಗಿಸಿಬಿಟ್ಟಿದ್ದ. ಹನ್ನೊಂದು ಆಟಗಾರರ ಎದುರಿಗೆ ಆಟವಾಡುತ್ತಿದ್ದ ಅವನ ಹತ್ತು ಹುಡುಗರು ಅವರಿಗೆ ಎಷ್ಟು ಸಾಧ್ಯವೋ ಅಷ್ಟು ರಕ್ಷಣೆಯ ಆಟವನ್ನು ಆಡುತ್ತಿದ್ದರು. ಆದರೆ ಅದು ಸಾಕಾದಷ್ಟಿರಲಿಲ್ಲ. ತರಪೇತುದಾರನೆದುರಿಗೆ ಸೋಲು ಎದ್ದುಕಾಣುತ್ತಿತ್ತು. ಆಗ ಇದ್ದಕ್ಕಿದ್ದ ಹಾಗೆ ತಂಡದ ವೈದ್ಯ ಓಡಿಬಂದು ಭಾವಪರವಶತೆಯಿಂದ ಬೊಬ್ಬಿರಿದ:

"ನಾವು ಮಾಡಿದೆವು! ಅವನು ಎಚ್ಚೆತ್ತುಕೊಳ್ಳುತ್ತಿದ್ದಾನೆ!"

ಆದರೆ ಒಂದು ಕ್ಷೀಣ ಧ್ವನಿಯಲ್ಲಿ:

"ಅವನಿಗೆ ಅವನ್ಯಾರೆಂದು ತಿಳಿದಿಲ್ಲ" ಎಂದು ಸೇರಿಸಿದ.

ತರಪೇತುದಾರ, ಅಸಂಬದ್ಧವಾಗಿ ಪ್ರಲಾಪಿಸುತ್ತಿದ್ದ ಮತ್ತು ಮೇಲೇಳಲು ಪ್ರಯತ್ನಿಸುತ್ತಿದ್ದ ಆಟಗಾರನ ಬಳಿ ಹೋಗಿ, "ನೀನು ಪೀಲೆ" ಎಂದು ಅವನ ಕಿವಿಯಲ್ಲಿ ಉಸುರಿದ.

ಅವರು ಐದು-ಸೊನ್ನೆ ಅಂತರದಿಂದ ಗೆದ್ದರು. ಹಲವಾರು ವರ್ಷಗಳ ಹಿಂದೆ ಸತ್ಯವನ್ನು ತಿಳಿಸಿದ ಈ ಸುಳ್ಳನ್ನು ನಾನು ಕೇಳಿಸಿಕೊಂಡೆ.

## ಮರಡೋನಾ

ಕೈಗಾರಿಕೋದ್ಯಮದ ಧಣಿಗಳನ್ನು ಒಬ್ಬ ಕಾಲ್ಚೆಂಡಾಟದ ತಾರೆ ಹಿಂದೆಂದೂ ಹೀಗೆ ಬಹಿರಂಗವಾಗಿ ಖಂಡಿಸಿರಲಿಲ್ಲ. ಆದರೆ ಸಾರ್ವಕಾಲಿಕವಾಗಿ ಅತ್ಯಂತ ಹೆಸರಾಂತನಾದ ಮತ್ತು ಜನಪ್ರಿಯನಾದ ಒಬ್ಬ ಆಟಗಾರ, ಸುಪರಿಚಿತರೂ ಅಲ್ಲದ ಅಥವಾ ಜನಪ್ರಿಯರೂ ಅಲ್ಲದ ಆಟಗಾರರ ರಕ್ಷಣೆಗಾಗಿ ರಕ್ಷಣೆಯ ಗೋಡೆಯನ್ನೇ ಏರಿದ್ದ.

ಈ ಉದಾರ ಮನಸ್ಸಿನ ಮತ್ತು ಕಾಳಜಿಯುಳ್ಳ ಆರಾಧ್ಯ ವ್ಯಕ್ತಿ ಇಡೀ ಕಾಲ್ಚೆಂಡಾಟದ ಇತಿಹಾಸದಲ್ಲೇ ಅತಿ ಹೆಚ್ಚು ವಿರೋಧಾತ್ಮಕವಾದ ಎರಡು ಗೋಲು ಗಳನ್ನು ಐದು ನಿಮಿಷದ ಅವಧಿಯಲ್ಲಿ ಹೊಡೆದ. ಅವನ ಅಚಲ ನಿಷ್ಠೆಯುಳ್ಳ ಅಭಿಮಾನಿಗಳು ಎರಡು ಗೋಲುಗಳಿಗೂ ಅವನನ್ನು ಗೌರವಿಸಿದರು. ಅದು ಅವನ ಕಾಲುಗಳ ಅಮಾನುಷ ಚಮತ್ಕಾರದಿಂದ ಅಲಂಕೃತವಾದ ಒಬ್ಬ ಕಲೆಗಾರನ ಗೋಲಿಗಾಗಿ. ಪ್ರಾಯಶಃ ಇನ್ನೂ ಹೆಚ್ಚಾಗಿ ಅವನ ಕೈಯಿಂದ ಜೇಬಿಗಿಳಿಸಿದ ಒಬ್ಬ ಕಳ್ಳನ ಗೋಲಿಗಾಗಿ.

ಅವನ ಅಸಾಧಾರಣ ಲಾಗಪಟುತ್ವಕ್ಕೆ ಮತ್ತು ಅವನು ಒಬ್ಬ ಕ್ಷುದ್ರ ದೇವರು, ಒಬ್ಬ ಪಾಪಿ ಅಥವಾ ದೇವಗಣದಲ್ಲೇ ಅತಿ ಹೆಚ್ಚು ಮಾನವೀಯ ಎಂಬ ಕಾರಣದಿಂದ ಅವನನ್ನು ಆರಾಧಿಸುತ್ತಿದ್ದರು. ನಡೆದಾಡುವ ಮಾನವ ಸಂಯೋಜನೆ ಅಥವಾ ಬಲಾಢ್ಯನನ್ನು ಯಾರೊಬ್ಬರು ಕೂಡ ಅವನಲ್ಲಿ ಕಾಣಬಹುದಿತ್ತು. ಅವನ ಬಲಹೀನತೆಗಳೆಂದರೆ, ಅವನೊಬ್ಬ ಲಂಪಟನಾಗಿದ್ದ, ತಿಂಡಿಪೋತನಾಗಿದ್ದ, ಪಕ್ಕಾ ಕುಡುಕನಾಗಿದ್ದ, ವಂಚಕನಾಗಿದ್ದ, ಸುಳ್ಳು ಹೇಳುವವನಾಗಿದ್ದ ಮತ್ತು ಅತ್ಯಂತ ಬೇಜವಾಬ್ದಾರಿ ವ್ಯಕ್ತಿಯಾಗಿದ್ದ.

ಆದರೆ ದೇವತೆಗಳು ಎಷ್ಟೇ ಮನುಷ್ಯರಾಗಿದ್ದರೂ ನಿವೃತ್ತಿ ಹೊಂದುವುದಿಲ್ಲ.

ಯಾವ ಹೆಸರಿಲ್ಲದ ಜನಸಮೂಹದಿಂದ ಅವನು ಬಂದಿದ್ದನೋ ಅಲ್ಲಿಗೆ ಅವನು ಮತ್ತೆಂದೂ ಹಿಂತಿರುಗಲಿಲ್ಲ.

ಅವನನ್ನು ಬಡತನದಿಂದ ಪಾರು ಮಾಡಿದ ಖ್ಯಾತಿ ಅವನನ್ನು ಒಬ್ಬ ಖೈದಿಯಂತೆ ಹಿಡಿದಿಟ್ಟುಕೊಂಡಿತು.

ಪ್ರತಿಯೊಂದು ಸಂತೋಷಕೂಟದಲ್ಲಿ ಕೇಂದ್ರಬಿಂದುವಾಗಲು ಸಹಕರಿಸುತ್ತಿದ್ದ, ಪ್ರತಿಯೊಂದು ನಾಮಕರಣದಲ್ಲಿ ಮಗುವಂತಿರುತ್ತಿದ್ದ, ಪ್ರತಿಯೊಂದು ಸಾವಿನಲ್ಲಿ ಚಟುವಟಿಕೆಯಿಂದ ಕಾರ್ಯ ನಿರ್ವಹಿಸುತ್ತಿದ್ದ ಆ ಮರಡೋನಾನೇ ಈ ಮರಡೋನಾನಾ ಎಂಬ ನಿಂದನೆಗೊಳಗಾದ.

ಯಶಸ್ಸಿನ ಮಾದಕತೆಯನ್ನು ಮೂತ್ರ ಪರಿಶೀಲನೆಯಿಂದಾಗಲಿ ಅಥವಾ ರಕ್ತ ಪರೀಕ್ಷೆಗಳಿಂದಾಗಲಿ ಕಂಡು ಹಿಡಿಯಲು ಸಾಧ್ಯವಿಲ್ಲ. ಆದರೆ ಅದು ಕೊಕೈನ್‌ಗಿಂತಲೂ ಹೆಚ್ಚು ವಿನಾಶಕಾರಿ.

ಅನುವಾದ : **ವಿನಾಯಕ ಕುಲಕರ್ಣಿ, ಎಚ್. ಆರ್. ಪ್ರಕಾಶ್**
ಬಿಕಾಸಿಪುರ, ಬೆಂಗಳೂರು – ೫೬೦೦೬೧

# ಜನಚಳುವಳಿಗಳು ಪ್ರಜಾತಂತ್ರದ ಜೀವಾಳ

**ಡಾ|| ಕಿರಣ್ ಎಂ ಗಾಜನೂರು**

**ವ**ರ್ಷಗಳ ಹಿಂದೆ ಒಮ್ಮೆ ಭಾರತದ ಕ್ಯಾಬಿನೆಟ್ ಕಾರ್ಯದರ್ಶಿಯಾಗಿದ್ದ ಟಿ. ಆರ್. ಎಸ್. ಸುಬ್ರಮಣಿಯನ್ ಅವರು ರೈಲಿನಲ್ಲಿ ಪ್ರಯಾಣಿಸುವಾಗ ತಾವು ಕುಳಿತಿದ್ದ ಎಸಿ ಬೋಗಿಯ ಕಿಟಕಿಯಿಂದ ಕಾಣುತ್ತಿದ್ದ ಬಡವರ-ಭಾರತವನ್ನು ಕಂಡು ಮರುಗಿ ರೈಲ್ವೆ ಇಲಾಖೆಯ ತಮ್ಮ ಮಿತ್ರರೊಂದಿಗೆ ತಮಗಾದ ಅನುಭವವನ್ನು ಬೇಸರದಿಂದ ಹಂಚಿಕೊಳ್ಳುತ್ತಾರೆ. ಅದಕ್ಕೆ ಆ ಮಿತ್ರ ನೋಡಿ, ನೀವು ಆ ಘಟನೆಗಳನ್ನೆಲ್ಲಾ ನೋಡದೆಯೂ ಪ್ರಯಾಣ ಮಾಡಬಹುದಾಗಿತ್ತು..! ಏಕೆ ನಿಮ್ಮ ಬೋಗಿಯ ಕಿಟಕಿಗಳಿಗೆ ಪರದೆಗಳು ಇರಲಿಲ್ಲವೇ ಎಂದು ಕೇಳುತ್ತಾರೆ...!

ಇಂದು ಚುನಾವಣಾ ರಾಜಕೀಯದ ಫಲಿತಗಳನ್ನು ಆಧರಿಸಿ 'ಭಾರತದಲ್ಲಿ ಕಮ್ಯುನಿಸಂ ಕೋಟೆ ಕುಸಿಯು ತ್ತಿದೆ' ಎನ್ನುತ್ತಿರುವ ಮಂದಿ ನನಗೆ ಟಿ. ಆರ್. ಎಸ್. ಸುಬ್ರಮಣಿಯನ್ ಅವರ ಸ್ನೇಹಿತರಂತೆ ತೋರುತ್ತಿದ್ದಾರೆ. ಇದು ಖಂಡಿತ ಅವರ ತಪ್ಪಲ್ಲ ಬದಲಾಗಿ ೧೯೯೦ರ ನಂತರ ಭಾರತದಲ್ಲಿ ಜಾರಿಯಾದ ನವಉದಾರವಾದಿ ಆರ್ಥಿಕತೆ ಆಧರಿಸಿ ರೂಪುಗೊಂಡ ಮೌಲ್ಯಗಳು ಭಾರತದ ದೊಡ್ಡ ಸಂಖ್ಯೆಯ ಅಧಿಕೃತ ಬಡವರು ಅನುಭವಿಸುತ್ತಿರುವ ಅಸಮಾನತೆ, ಶೋಷಣೆ, ಅಪಮಾನಗಳ ಕುರಿತು ಮಧ್ಯಮ ವರ್ಗದಲ್ಲಿ ಸಿನಿಕತೆಯೊಂದನ್ನು ಸೃಷ್ಟಿಸಿದೆ.

ಹಾಗಾಗಿಯೇ ಈ ವರ್ಗಕ್ಕೆ ಸೇರಿದ ಜನ ಬಡವರು, ಕಾರ್ಮಿಕರು, ರೈತರು ಮುಖ್ಯವಾಗಿ ಮಹಿಳೆಯರ ಅಸ್ತಿತ್ವಕ್ಕಾಗಿ ದಿನನಿತ್ಯ ಭಾರತದ ಬೀದಿಗಳಲ್ಲಿ ನಡೆಯುತ್ತಿರುವ ಎಡಪಕ್ಷಗಳ ಹೋರಾಟ ಗಳನ್ನು ಕಂಡರೂ ಕಾಣದಂತೆ, ಚಲಿಸುತ್ತಿರುವ ತಮ್ಮ ಕಾರಿನ ಕಿಟಕಿಯ ಪರದೆಗಳನ್ನು ಎಳೆದುಕೊಂಡು ರಾಷ್ಟ್ರೀಯತೆ, ಅಭಿವೃದ್ಧಿ, ಹಿಂದೂತ್ವಭಾರತ ಎಂಬ ಪದಪುಂಜಗಳನ್ನು ಬಳಸಿ ಭವ್ಯ ಭಾರತದ ಕುರಿತು ಮಾತನಾಡುವುದು ಕಾಣುತ್ತದೆ. ಇದೊಂದು ರೀತಿ ಕಲ್ಪಿತ ಕೇಳುಗರೊಂದಿಗೆ ಮಾತನಾಡುವ ಮನದ ಮಾತಿದ್ದಂತೆ.

ವಾಸ್ತವ ಏನೆಂದರೆ ನವಉದಾರವಾದಿ ಆರ್ಥಿಕ ನಿರೂಪಣೆ ಇಂದು ದೇಶದಾದ್ಯಂತ ಹೊಟ್ಟೆ/ಬಟ್ಟೆಗೆ ಮೋಸವಿಲ್ಲದ, ಸಾಂಕೇತಿಕ ಸ್ವಾತಂತ್ರ್ಯದಲ್ಲಿ ಬಂಧಿ ಯಾಗಿರುವ ಮಧ್ಯಮವರ್ಗವನ್ನು ಸೃಷ್ಟಿಸಿದೆ, ಮಾರುಕಟ್ಟೆಯಲ್ಲಿ ಕೊಳ್ಳುವ ಸಾಮರ್ಥ್ಯವನ್ನೇ ಸ್ವಾತಂತ್ರ್ಯ ಎಂದು ನಂಬುವ ಈ ವರ್ಗ ಇಂದು ಬಂಡವಾಳಶಾಹಿಗೆ ಷರತ್ತುರಹಿತ ಬೆಂಬಲವನ್ನು ನೀಡಿ ನಿಜವಾದ ಜನಚಳುವಳಿಯನ್ನು ಗುರುತಿಸಲು ಸಾಧ್ಯವಾಗದ ಸ್ಥಿತಿಗೆ ಸಮಾಜವನ್ನು ತಲುಪಿಸಿದೆ.

ಜನಚಳುವಳಿಗಳು ಪ್ರಜಾತಂತ್ರದ ಜೀವಾಳ ಅವುಗಳ ಪ್ರಭಾವ ಕುಂಠಿತವಾದರೆ ಪಟ್ಟಭದ್ರ ಶಕ್ತಿಗಳು ಪ್ರಜಾತಂತ್ರದ ಮೇಲೆ ಹಿಡಿತವನ್ನು ಸಾಧಿಸುತ್ತವೆ. ಈ ಬೆಳವಣಿಗೆಯನ್ನು ನಾವು ಈಗಾಗಲೇ ಭಾರತದ ರಾಜಕೀಯದಲ್ಲಿ ಕಾಣುತ್ತಿದ್ದೇವೆ. ಇಂದು ರಾಜಕೀಯ ವನ್ನು ಮಾರುಕಟ್ಟೆ / ಉಳ್ಳವರು ನಿಯಂತ್ರಿಸುವ ಸ್ಥಿತಿಯನ್ನು ತಲುಪಿದೆ. ಆ ಕಾರಣದಿಂದಾಗಿಯೇ ಇಂದು ೫೨೧ ಲೋಕಸಭಾ ಸದಸ್ಯರಲ್ಲಿ ೪೮೩ ಮಂದಿ ಕೋಟ್ಯಾಧಿಪತಿಗಳು ಗೆದ್ದಿದ್ದಾರೆ, ಲೋಕಸಭೆಯ ಒಟ್ಟು ಸದಸ್ಯರಲ್ಲಿ ಶೇಕಡಾ ೪೩ರಷ್ಟು ಜನ ಗಂಭೀರ ಸ್ವರೂಪದ ಕ್ರಿಮಿನಲ್ ಮೊಕದ್ದಮೆ ಎದುರಿಸುತ್ತಿರುವವರು, ಕರ್ನಾಟಕದ ಮಟ್ಟಿಗೆ ನೋಡುವುದಾದರೆ ಕರ್ನಾಟಕದ ಒಟ್ಟು ೨೨೧ ವಿಧಾನಸಭಾ ಸದಸ್ಯರಲ್ಲಿ ೨೧೫ ಮಂದಿ ಕೋಟ್ಯಾಧೀಶರಿದ್ದಾರೆ, ಕರ್ನಾಟಕದ ವಿವಿಧ ಪಕ್ಷಗಳಿಗೆ ಸೇರಿದ ೧೬ ಮಂದಿ ಶಾಸಕರು ಸುಮಾರು ನೂರುಕೋಟಿಗಳಷ್ಟು ಆದಾಯವನ್ನು ಅಧಿಕೃತವಾಗಿ ಘೋಷಣೆ ಮಾಡಿಕೊಂಡಿದ್ದಾರೆ ಮತ್ತು ಒಟ್ಟು ಸದಸ್ಯರಲ್ಲಿ ಶೇಕಡಾ ೩೫ ಕ್ರಿಮಿನಲ್ ಮೊಕದ್ದಮೆ ಎದುರಿಸುತ್ತಿದ್ದಾರೆ.



ಈ ಮಾಹಿತಿಯನ್ನು "ಇಂದು ನಮ್ಮ ದೇಶದಲ್ಲಿ ಬಡವರ ಕುರಿತು ಕಾನೂನು ರೂಪಿಸಿರುವ ಹೊಣೆಹೊತ್ತಿರುವ ಶೇಕಡಾ ೮೩ರಷ್ಟು ಜನ ಕೋಟ್ಯಾಧೀಶರು..! ಕರ್ನಾಟಕದಲ್ಲಿನ ದೊಡ್ಡ ಸಂಖ್ಯೆಯಲ್ಲಿ ಇರುವ ಬಡವರು ಮತ್ತು ದೀನ – ದಲಿತರ ಪರವಾಗಿ ಕಾನೂನು ರೂಪಿಸುವ ಶೇಕಡಾ ೯೭ ಮಂದಿ ಕೋಟ್ಯಾಧೀಶರು..! ಭಾರತದಲ್ಲಿ ಸಾಮಾಜಿಕ ಶಾಂತಿಗಾಗಿ ಕಾಯ್ದೆ ರೂಪಿಸುತ್ತಿರುವ ಶೇಕಡಾ ೪೩ ಗಂಭೀರ ಸ್ವರೂಪದ ಕ್ರಿಮಿನಲ್ ಪ್ರಕರಣಗಳ ಆರೋಪಿಗಳು. ಕರ್ನಾಟಕದಲ್ಲಿ ಅಂತಹ ಜನಪ್ರತಿನಿಧಿಗಳ ಸಂಖ್ಯೆ ಶೇಕಡಾ ೩೫ ಎಂದು ಓದಿಕೊಳ್ಳಬಹುದು...!

ವರ್ತಮಾನದಲ್ಲಿ ಜಾಗತೀಕರಣ ಕಟ್ಟಿಕೊಟ್ಟಿರುವ ಸಾಂಕೇತಿಕ ಸ್ವಾತಂತ್ರ್ಯದಲ್ಲಿ ಬಂಧಿಯಾಗಿರುವ ಮಧ್ಯಮ ವರ್ಗ ಸಾರ್ವಜನಿಕ ಅಭಿಪ್ರಾಯ ರೂಪಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತಿರುವುದರಿಂದ, ನಾವು ಖಾಸಗೀಕರಣ ಸೃಷ್ಟಿಸಿರುವ ಅಸಮಾನತೆಯನ್ನು ಗುರುತಿಸಲು ನಾವು ಸೋಲುತ್ತಿದ್ದೇವೆ. ಇಂದು ಜಗತ್ತಿನಲ್ಲಿ ಪ್ರಜಾಪ್ರಭುತ್ವದ ಹರಿಕಾರ ಎಂದು ಗುರುತಿಸುವ ಅಮೇರಿಕಾದ ಮಾಂಸ ಸಂಸ್ಕರಿಸುವ ಕಂಪೆನಿಯಲ್ಲಿ ೮ ತಾಸು ದುಡಿಮೆಯ ಮಧ್ಯೆ ಶೌಚಕ್ಕೂ ಸಮಯ ನೀಡದೆ ಅಲ್ಲಿನ ಮಹಿಳಾ ನೌಕರರಿಗೆ ಡೈಪರ್ ಒದಗಿಸುವುದು ಇವರಿಗೆ ಸಮರ್ಥನೀಯ ಅನ್ನಿಸುತ್ತದೆ, ನಮ್ಮದೇ ನಗರಗಳ ಮಾಲ್‌ಗಳಲ್ಲಿ ಈಗ ತಾನೇ ಪದವಿ ಮುಗಿಸಿದ ಹಳ್ಳಿ ಮತ್ತು ನಗರಗಳ ಬಡವರ ಮನೆಯಿಂದ ಹೊರಗೆ ಬೀಳುವ ಮಕ್ಕಳು ದಿನದ ೧೦ರಿಂದ ೧೪ ಗಂಟೆಗಳ ಕಾಲ ನಿಂತುಕೊಂಡೇ ದುಡಿಯುವ, ಹಳ್ಳಿಗಳಿಂದ ನಗರಗಳ ಗಾರ್ಮೆಂಟ್ ಕಂಪೆನಿಗಳಿಗೆ ಕನಿಷ್ಠ ಕೂಲಿಗೆ ಹೆಣ್ಣುಮಕ್ಕಳನ್ನು ಕುರಿಗಳಂತೆ ತುಂಬಿಕೊಂಡು ಬರುವ ಸಂಗತಿ ಮನುಷ್ಯ ಗೌರವಕ್ಕೆ ಧಕ್ಕೆ ಅನ್ನಿಸುವುದಿಲ್ಲ. ಕೊನೆಗೆ ದೇವಸ್ಥಾನದ ಸಾಲಿನಲ್ಲಿ ದುಡ್ಡಿರುವ ಮಂದಿಗೆ ಶೀಘ್ರ ದರ್ಶನ ಎಂಬಂತಹ ನೈತಿಕವಲ್ಲದ ನಿಯಮಗಳನ್ನು ನಿರ್ಭಿಡೆಯಿಂದ ಪ್ರದರ್ಶಿಸುವುದೂ ಇವರಿಗೆ ಸಹ್ಯವಾಗಿಬಿಡುತ್ತವೆ, ಅಧಿಕಾರಕ್ಕಾಗಿ ತಾವೇ ಆರಿಸಿದ ಜನಪ್ರತಿನಿಧಿಗಳು ನಡೆಸುವ ರೆಸಾರ್ಟ್ ರಾಜಕೀಯ ಇವರುಗಳಿಗೆ ಪ್ರಜಾತಂತ್ರದ ಅಧಃಪತನದ ಭಾಗ ಅನ್ನಿಸುವುದಿಲ್ಲ, ಕನಿಷ್ಠ ಇದು ತಮ್ಮ ರಾಜಕೀಯ ಆಯ್ಕೆಗೆ ಸಂಬಂಧಿಸಿದ ಗಂಭೀರ ಸಂಗತಿ ಅನ್ನಿಸುವುದೂ ಇಲ್ಲ...! ಇಂದು ಮಾಧ್ಯಮ ಕ್ಷೇತ್ರವನ್ನು ಒಳಗೊಂಡಂತೆ ಅತಿಥಿ ಉಪನ್ಯಾಸಕರು, ಗುತ್ತಿಗೆ ಕಾರ್ಮಿಕರು ಸೇರಿದಂತೆ ಬಹುತೇಕ ಉದ್ಯೋಗಿಗಳು ಎದುರಿಸುತ್ತಿರುವ ಅಭದ್ರತೆ ನಾವು ಒಪ್ಪಿರುವ ಆರ್ಥಿಕ ನೀತಿಗಳ ಉತ್ಪನ್ನ ಎಂಬ ಅರಿವು ನಮಗೆ ಮೂಡುವುದಿಲ್ಲ..! ಇದು ನವಉದಾರವಾದಿ ಸೃಷ್ಟಿಸಿರುವ ಮನಸ್ಥಿತಿ ಇಲ್ಲಿ ಅರ್ಹತೆ ಎನ್ನುವುದು ಸಹಜವಾದುದಲ್ಲ ಅದು ಹಣದೊಂದಿಗೆ ಒಂದು ಸಂಬಂಧವನ್ನು ಹೊಂದಿರುತ್ತದೆ.

ನಮ್ಮ ನಡುವೆ ಬೆಳೆದಿರುವ ಈ ಮನಸ್ಥಿತಿ ಇಂದು ಜಾಗತೀಕರಣ/ ಖಾಸಗೀಕರಣ ಉದ್ಯೋಗಗಳನ್ನು ಸೃಷ್ಟಿಸಿದೆ, ಪ್ರಭುತ್ವದ ಮೂಲ ಕರ್ತವ್ಯ ಖಾಸಗೀಕರಣವನ್ನು ಬೆಂಬಲಿಸುವುದು ಎಂಬ ಸಂಗತಿಯನ್ನು ಅಬ್ಬರದಿಂದ ಪ್ರಚಾರಮಾಡುತ್ತದೆ, ಆದರೆ ಖಾಸಗೀಕರಣ ಸೃಷ್ಟಿಸಿರುವ ಉದ್ಯೋಗಗಳ ಮೌಲ್ಯ ಮತ್ತು ಗುಣಮಟ್ಟದ ಕುರಿತು ಒಂದು ದಿನವೂ ಚರ್ಚೆಯನ್ನು ನಡೆಸುವುದಿಲ್ಲ, ವ್ಯಕ್ತಿಯ ಸ್ವ-ಗೌರವವನ್ನು ಕಡೆಗಣಿಸಿ ಅವನನ್ನು ಕಾರ್ಖಾನೆಯ ಯಂತ್ರದ ಭಾಗದಂತೆ

ನೋಡುವ ಈ ಕಣ್ಣೋಟ ಮೂಲತಃ ಪ್ರಜಾತಂತ್ರ ವಿರೋಧಿ ಎನ್ನುವುದು ಇವರಿಗೆ ಹೊಳೆಯುವುದಿಲ್ಲ.

ಜಗತ್ತಿನ ಎಡಚಳುವಳಿ ಈ ಪ್ರಶ್ನೆಗಳನ್ನು ಕೇಳುತ್ತಿದೆ. ಭಾರತದಲ್ಲಿ ಲೋಹಿಯಾ, ಗಾಂಧಿ, ಅಂಬೇಡ್ಕರ್ ಮತ್ತು ಭಗತ್ ಸಿಂಗ್ ಈ ಪ್ರಶ್ನೆಗಳನ್ನು ಕೇಳಿದ್ದಾರೆ, ಇವರೆಲ್ಲರೂ ಕಾರ್ಲ್ ಮಾರ್ಕ್ಸ್ ಆಲೋಚನೆಗಳನ್ನು ಅಧ್ಯಯನ ಮಾಡಿ ಅದನ್ನು ಭಾರತಕ್ಕೆ ಅನ್ವಯಿಸುವ ಕುರಿತು ರಾಜಕೀಯ ತಾತ್ವಿಕತೆಯನ್ನು ಬೆಳೆಸಿದ್ದಾರೆ. ಸ್ವತಃ ಅಂಬೇಡ್ಕರ್ ಭಾರತದ ಮಾರ್ಕ್ಸ್‌ವಾದಿ ಪಕ್ಷಧೋರಣೆಯ ಕುರಿತು ಕಟು ವಿಮರ್ಶೆಗಳನ್ನು ದಾಖಲಿಸಿದ್ದಾರೆ ಅಷ್ಟರ ಮಟ್ಟಿಗೆ ಭಾರತದ ಎಡಚಿಂತನೆ ವಿಮರ್ಶೆಗಳಿಗೆ ತೆರೆದುಕೊಳ್ಳುವ ವಸ್ತುನಿಷ್ಠತೆಯನ್ನು ಉಳಿಸಿಕೊಂಡಿದೆ, ಆ ಕಾರಣಕ್ಕೆ ಎಡಚಳುವಳಿ ಮೂಲತಃ ಪ್ರಜಾತಾಂತ್ರಿಕ ಚಳುವಳಿ ಅನ್ನಿಸುತ್ತದೆ.

ಹಾಗೆ ನೋಡುವುದಾದರೆ ಜಗತ್ತಿನ ಸಮತಾವಾದಿ ಸಂಕಥನ ಎಂದಿಗೂ ಚುನಾವಣಾ ರಾಜಕೀಯವನ್ನು ಮಾತ್ರ ಜನಾಧಿಕಾರ ಪಡೆಯುವ ದಾರಿಯಾಗಿ ಗುರುತಿಸಿಲ್ಲ, ನಿಜವಾದ ಜನಾಧಿಕಾರ ಎಂದರೆ ವ್ಯಕ್ತಿಗೆ ತನಗಿರುವ ನೈಸರ್ಗಿಕ/ಸಾಂವಿಧಾನಿಕ ಹಕ್ಕುಗಳ ಕುರಿತ ಅರಿವನ್ನು ಮೂಡಿಸುವುದು, ಅವನನ್ನು ಸಹಜ–ನೈಸರ್ಗಿಕ ಮತ್ತು ಸಾಮುದಾಯಿಕ ಬದುಕಿಗೆ ಪ್ರೋತ್ಸಾಹಿಸುವುದು ಎಂದು ಎಡಚಿಂತನೆ ಗುರುತಿಸುತ್ತದೆ. ಆ ಅರ್ಥದಲ್ಲಿ ಜಾಗತಿಕ ಮಾರ್ಕ್ಸ್‌ವಾದಿ ಚರ್ಚೆ ಒಟ್ಟು ಸಮಾಜವನ್ನು ತಳಮಟ್ಟದಿಂದ ಪರಿವರ್ತಿಸುವ ಆಶಯವನ್ನು ಹೊಂದಿದೆಯೇ ಹೊರತು ಕೇವಲ ಚುನಾವಣಾ ರಾಜಕೀಯದಲ್ಲಿನ ಸೋಲು/ಗೆಲುವುಗಳನ್ನಲ್ಲ. ಈ ಹಿನ್ನೆಲೆಯಲ್ಲಿಯೇ ಇಂದು ಎಡಪಂಥೀಯ ಹೋರಾಟ ಎಂದರೆ "ಮಾರುಕಟ್ಟೆಯ ಮೇಲೆ ಪ್ರಜಾಪ್ರಭುತ್ವದ ನಿಯಂತ್ರಣಕ್ಕೆ" ಹಕ್ಕೊತ್ತಾಯ ಎಂಬ ವಿನೂತನ ವಿಶ್ಲೇಷಣೆಗಳು ಚರ್ಚೆಯಲ್ಲಿವೆ.



ಅತಿವೇಗ, ಮೊಬೈಲ್ ಬಳಕೆ, ಅಜಾಗರೂಕ ಚಾಲನೆ, ಲೈಸನ್ಸ್ ಇಲ್ಲ... ಇತ್ಯಾದಿ ಸೇರಿ ಬೈಕ್ ಬೆಲೆಯಷ್ಟೇ ನೀವೀಗ ದಂಡವಾಗಿ ಕಟ್ಟಬೇಕಾಗಿದೆ ಏನ್ಮಾಡ್ತೀರಿ?

ಹೌದು, ಭಾರತದಲ್ಲಿರುವ ಮಾರ್ಕ್ಸ್‌ವಾದಿ ಪಕ್ಷಗಳು(ಎಡಪಕ್ಷಗಳು) ಸಾಕಷ್ಟು ಮಿತಿಗಳನ್ನು ಹೊಂದಿವೆ, ಅವು ಇಲ್ಲಿನ ಜನರೊಂದಿಗೆ ಸಂವಾದಿಸಲು ಬೇಕಾದ ಭಾಷೆಯನ್ನೇ ರೂಪಿಸಿಕೊಂಡಿಲ್ಲ, ಇಂದಿಗೂ ಯುರೋಪ್ ಕೇಂದ್ರಿತ ಸಾಂಪ್ರದಾಯಿಕ ತಿಳಿವನ್ನು ಭಾರತಕ್ಕೆ ಅನ್ವಯಿಸುತ್ತಿದ್ದಾರೆ, ವಸಾಹತೋತ್ತರ ಕಾಲದ ಏಷ್ಯ ದೇಶಗಳು ಒಪ್ಪಿಕೊಂಡ ಲೆನಿನರ 'ಮುಂಚೂಣಿ ಪಕ್ಷ'ದ ಮಾದರಿ ಬಂಡವಾಳಶಾಹಿ ಶೋಷಣೆಯನ್ನು ಗುರುತಿಸಿ ಒಂದು ರಾಜಕೀಯ ಕ್ರಾಂತಿಗೆ ಸಿದ್ಧವಾದ ಸಮಾಜಕ್ಕೆ ಸೂಕ್ತವೇ ಹೊರತು, ಸಾಂಸ್ಕೃತಿಕ ರಾಜಕಾರಣದ ಮೂಲಕ ಕಟ್ಟಬಹುದಾದ ಪರ್ಯಾಯ ರಾಜಕೀಯವನ್ನು ಬಯಸುತ್ತಿರುವ ಸಮಾಜಕ್ಕೆ ಅಲ್ಲ. ಭಾರತದ ಎಡಪಕ್ಷಗಳು ರೆವೊಲ್ಯೂಷನರಿ ಭಾಷೆಗೆ ಬದಲು ರಿಫಾರ್ಮಿಸ್ಟ್ ಧೋರಣೆಗಳನ್ನು ಹೊಂದಿವೆ– ಇತ್ಯಾದಿ ಇತ್ಯಾದಿ ವಿಮರ್ಶೆಗಳೆಲ್ಲವೂ ಸತ್ಯವೇ. ಈ ಎಲ್ಲಾ ಚಾರಿತ್ರಿಕ ತಪ್ಪುಗಳ ಪರಿಣಾಮವನ್ನು ಭಾರತದ ಮಾರ್ಕ್ಸ್‌ವಾದಿ ಪಕ್ಷಗಳು ಇಂದು ಎದುರಿಸುತ್ತಿವೆ, ಇದರ ಅರ್ಥ 'ಭಾರತದಲ್ಲಿ ಕಮ್ಯುನಿಸಂ ಕೋಟೆ ಕುಸಿಯುತ್ತಿದೆ' ಎಂಬುದಲ್ಲ ಬದಲಾಗಿ ಭಾರತದ ಕಮ್ಯುನಿಸ್ಟ್ ಪಕ್ಷಗಳು ಈ ಸಮಾಜದ ಕುರಿತ ತಮ್ಮ ಗ್ರಹಿಕೆಗಳನ್ನು ಮರುಶೋಧಿಸುವ ಅವಕಾಶವನ್ನು ಈ ಸೋಲು ಸೃಜಿಸಿದೆ ಎಂಬುದು. ಏಕೆಂದರೆ ಎಲ್ಲಿಯವರೆಗೂ ಜಾಗತಿಕ ಬಂಡವಾಳಶಾಹಿ ಇರುತ್ತದೆಯೋ ಅಲ್ಲಿಯವರೆಗೆ ಕಮ್ಯುನಿಸಂ ಇರುತ್ತದೆ, ಎಲ್ಲಿಯವರೆಗೆ ಕಮ್ಯುನಿಸಂ ಇರುತ್ತದೆಯೋ ಅಲ್ಲಿಯವರೆಗೆ ಕಮ್ಯುನಿಸ್ಟರು ಇರುತ್ತಾರೆ ಅನ್ನುವುದು ಅಳಿಸಲಾಗದ ಜಾಗತಿಕ ಸತ್ಯ.

**ಡಾ|| ಕಿರಣ್ ಎಂ ಗಾಜನೂರು**
ಬೆಂಗಳೂರು ಕೇಂದ್ರ ವಿವಿ

---

*(೫೨ನೇ ಪುಟದಿಂದ)*

ಅವನು ತನ್ನ ಮಾತನ್ನು ಉಳಿಸಿಕೊಳ್ಳುವಂತೆ ಪ್ರೋತ್ಸಾಹದ ಮಾತುಗಳನ್ನು ಹೇಳುವುದೇ ನನ್ನ ಧರ್ಮ. ಇದರಲ್ಲಿಯೇ ಆತನ ಸುಧಾರಣೆಯ ಆಶಾಕಿರಣವಿದೆ."

ಹೀಗೆ ಭಾರತಕ್ಕೆ ನಿಷ್ಠರಾಗಿರುತ್ತೇವೆ ಎಂದು ಮುಸ್ಲಿಂರು ಹೇಳುತ್ತಿರುವವರೆಗೂ ಮುಸ್ಲಿಂರನ್ನು ನಂಬಬೇಕಾದುದು ನಮ್ಮ ಧರ್ಮ. ಇದರೊಂದಿಗೆ ಜಾಗರೂಕರಾಗಿರ ಬೇಕಾದುದೂ ಅವಶ್ಯಕವಾಗಿದೆ. ಇತ್ತೀಚೆಗೆ ಪಂಡಿತ್ ಪಂಥ್‌ರವರು ಉತ್ತರ ಪ್ರದೇಶದಲ್ಲಿ ಮುಸ್ಲಿಂರನ್ನು ರಕ್ಷಣೆ ಮಾಡಲಾಗುವುದು ಎಂದು ಹೇಳಿದ್ದಾರೆ. ಇದರ ಅರ್ಥ ನಿರಂತರವಾಗಿ ಹಿಂದೂಗಳನ್ನು ಉದ್ರೇಕಿಸುವ ಮುಸ್ಲಿಂ ಲೀಗ್‌ನ ನಾಯಕರು ಏನೆಲ್ಲ ಮಾಡಿದರೂ ಅವರನ್ನು ರಕ್ಷಿಸುವುದು ಎಂದರ್ಥವಲ್ಲ ಎಂದೂ ಸ್ಪಷ್ಟಪಡಿಸಿದ್ದಾರೆ. "ಬಂಧುಗಳೇ, ಜಾತಿಯ ಹುಚ್ಚುತನವನ್ನು ಮರೆತು ಈ ದೇಶಯಾವಾಗ ಬಾಳುವದು ಎನ್ನುವುದನ್ನು ನೋಡಲು ನಾನು ಕಾತುರನಾಗಿದ್ದೇನೆ. ನಮ್ಮ ಧರ್ಮಗಳು ಏನೇ ಆಗಿರಲಿ, ನಮ್ಮ ಕ್ರಿಯೆ ಮಾತ್ರ ಭಾರತ, ಭಾರತೀಯತೆಯಾಗಿರಲಿ" ಎಂದು ಸ್ಪಷ್ಟಪಡಿಸಿದ ಗಾಂಧೀಜಿ ದೊಂಬಿಯ ಆ ದಿನಗಳಲ್ಲಿ ಮಾಧ್ಯಮ ಮಿತ್ರರಿಗೆ, ಪತ್ರಿಕೆಯ ಸಂಪಾದಕರುಗಳಿಗೆ ಕೈ ಮುಗಿದು ಹೇಳಿದ್ದು ಇಷ್ಟೆ – "ಬಂಧುಗಳೇ ಕೋಟಿ ಕೋಟಿ ಭಾರತೀಯರ ಶಿಕ್ಷಣ, ಉತ್ತಮ ಆಹಾರ, ಮೈ ತುಂಬಾ ಬಟ್ಟೆ, ನೆಮ್ಮದಿಯ ನಿದ್ರೆಗಾಗಿ ಒಂದು ಸೂರು, ನಿಮ್ಮ ಬರಹದ ಉದ್ದೇಶಗಳಾಗಲಿ. ಪರಸ್ಪರ ಹಿಂದೂ –ಮುಸ್ಲಿಂರ ಕಡಿದಾಟ ರೋಚಕದ ಸುದ್ದಿಗಳಾಗಿ ನಿಮ್ಮ ಪತ್ರಿಕೆಗಳಲ್ಲಿ ಎಂದೂ ಬಿತ್ತರಗೊಳ್ಳದಿರಲಿ."

ಗಾಂಧೀಜಿ ಆಕಾಶದೆತ್ತರಕ್ಕೆ ಬೆಳೆದಿದ್ದರು. ಈ ಬೆಳವಣಿಗೆ ಒಂದು ಕಡೆಯಲ್ಲಿ ಸರಳ – ಸರಳ ಎನಿಸಿಕೊಂಡರೆ, ಇನ್ನೊಂದೆಡೆ, ಸಾಮಾನ್ಯನಿಗೆ ತುಂಬಾ ಸಂಕೀರ್ಣವೆನ್ನಿಸುವ ಗಾಂಧೀಜಿಯನ್ನು ತೋರಿಸುತ್ತಿತ್ತು. ಗಾಂಧೀಜಿಯವರ ಈ ಮೌಲ್ಯಗಳ ಯಾತ್ರೆಯಲ್ಲಿ ಪ್ರತೀ ಹೆಜ್ಜೆಗೂ ಪ್ರಶ್ನೆಗಳು ಸಾಮಾನ್ಯವಾಗಿದ್ದವು. ಈ ಒಬ್ಬ ಗಾಂಧೀಜಿಯೇ ತಮ್ಮೆಲ್ಲಾ ಪ್ರಶ್ನೆಗಳಿಗೆ ನೈತಿಕ ಹೊಣೆಗಾರನಾಗುವುದು ಅಥವಾ ಅವರನ್ನೇ ಹೊಣೆಗಾರನನ್ನಾಗಿಸುವುದು ತಪ್ಪು ಎಂದು ಯಾರಿಗೂ ಅನಿಸಲಿಲ್ಲ.

'ಬಾಂಬೆ ಕ್ರಾನಿಕಲ್' ಪತ್ರಿಕೆಯ ಸಂಪಾದಕರಾಗಿದ್ದ ಎಸ್. ಎ. ಬ್ರಾಲ್ವಿಗೆ ಗಾಂಧೀಜಿ ಹಿಂದಿ ಭಾಷೆಯೊಂದನ್ನೇ ರಾಷ್ಟ್ರಭಾಷೆಯಾಗಿಸುವುದು ಇಷ್ಟವಿರಲಿಲ್ಲ. ಬದಲಾಗಿ, ಉರ್ದು ಆ ಸ್ಥಳದಲ್ಲಿ ಯಾಕೆ ಬರಬಾರದು? ಎನ್ನುವ ಪ್ರಶ್ನೆಯೂ ಇತ್ತು. ಕೆಲವರು ಭಾರತದ ರಾಷ್ಟ್ರಧ್ವಜದ ಮೂಲೆಯಲ್ಲಿ ಬ್ರಿಟಿಷ್ ಯೂನಿಯನ್ ಜೈಕನ್ನು ತೋರಿಸಬೇಕೆಂದು, ಮತ್ತೆ ಕೆಲವರು ಬೇಡ ಎಂದು, ವಿಭಜನೆಯಾಗುತ್ತಿದ್ದ ಭಾರತ ಮತ್ತು ಪಾಕಿಸ್ತಾನ ಸೈನ್ಯದ ತುಕಡಿಗಳಿಗೆ ಜನರಲ್ ವಿಲಿಯಂ ಸ್ಲಿಂ ಮತ್ತು ಜನರಲ್ ಫ್ರಾನ್ಸಿಸ್ ಟ್ಯೂಕರ್ ಮುಂದಾಳುಗಳಾಗಿರಬೇಕು ಎಂದು ಕೆಲವರು ವಾದಿಸಿದರೆ, ಮತ್ತೆ ಕೆಲವರು ಇವರು ಯಾರೂ ಬೇಡವೇ ಬೇಡವೆಂದು ವಿರೋಧಿಸುತ್ತಿದ್ದರು. ಗೋಹತ್ಯೆ ನಿಷೇಧಿಸಬೇಕೆಂದು ಹಿಂದೂಗಳು ಮುಂದಾದರೆ ಯಾರೂ ಅವುಗಳನ್ನು ಕಸಾಯಿಖಾನೆಯಲ್ಲಿಗಿಂತಲೂ ಕೆಟ್ಟದ್ದಾಗಿ ಜೀವಂತವಾಗಿ ನಡೆಸಿಕೊಳ್ಳುವುದಕ್ಕಿಂತಲೂ ಹತ್ಯೆ ಮಾಡುವುದರಲ್ಲಿ ತಪ್ಪೇನಿಲ್ಲ ಎನ್ನುವುದು ಮುಸ್ಲಿಂರ ವಾದವಾಗಿತ್ತು. ತಮ್ಮೊಳಗೇ ಇಷ್ಟೊಂದು ದ್ವಂದ್ವಗಳನ್ನಿಟ್ಟುಕೊಂಡು ಗಾಂಧೀಜಿಯೊಬ್ಬರಿಂದ ಒಂದೇ ಅಭಿಪ್ರಾಯ ಬರಬೇಕೆಂಬುದು ಮೂರ್ಖತನದ ಪ್ರಶ್ನೆ ಎಂದು ಯಾರಿಗೂ ಅನ್ನಿಸಲಿಲ್ಲ. ಆದರೆ ಗಾಂಧೀಜಿ ನಿರ್ಮೋಹಿಯಾಗಿದ್ದರು ಮತ್ತು ತಾವು ನಂಬಿದ ಮೌಲ್ಯಗಳಿಗೆ ಬದ್ಧರಾಗಿದ್ದರು.

ಮೌಲ್ಯಕ್ಕೆ ಹೋರಾಡುವ ಪ್ರತಿಯೊಬ್ಬನೂ ಸಹನೆಯ ಪರಮೋಚ್ಚ ಹಂತವನ್ನು ಸಾಧಿಸಬೇಕೆನ್ನುವುದು ಗಾಂಧೀಜಿಯವರ ವಾದವಾಗಿತ್ತು. ಅವರು ಈ ಅಂಧಕಾರದ ಮಧ್ಯೆ ಬೆಳಕಿಗಾಗಿ ತಡಕಾಡುತ್ತಿದ್ದರು. ಮೌಲ್ಯಗಳ ದೀವಟಿಗೆ ಹಿಡಿದುಕೊಂಡು ಬೆಳಕು ತೋರಲು ಮುಂದೆ ಬರುವ ಮನಸ್ಸುಗಳಿಗಾಗಿ, ಮನುಷ್ಯರಿಗಾಗಿ ಕಾಯುತ್ತಿದ್ದರು.

**ಡಾ|| ರಾಜಶೇಖರ ಮಠಪತಿ (ರಾಗಂ)**
ಸದಸ್ಯರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು
ಇ–ಮೇಲ್ : dr.rajashekharayya@gmail.com








# ವಿಭಿನ್ನ ಕಲ್ಪನೆಗಳ ಕೆಂಚಪ್ಪನ ಕಲಾಕೃತಿಗಳು



ಯುವಕ 'ಕೆಂಚಪ್ಪ ರಾಮಣ್ಣ ಬಡಿಗೇರ' ಒಬ್ಬ ಭಿನ್ನ ಮತ್ತು ವಿಶಿಷ್ಟ ಚಿತ್ರಕಲಾವಿದ. ತನ್ನ ಕಲಾಕೃತಿಗಳಿಗೆ 'ಶೀರ್ಷಿಕೆಗಳ ಅಗತ್ಯವೇ ಇಲ್ಲ' ಎನ್ನುವ ಈತನ ಕಲಾಕೃತಿಗಳು ನೋಡುಗರಿಗೆ ಅವರವರ ಸಂಸ್ಕಾರಗಳ ಹಿನ್ನೆಲೆಯಲ್ಲಿ ವಿಭಿನ್ನ ಅನುಭವಗಳನ್ನೇ ನೀಡುತ್ತವೆ.

ಸಾಗರದ ನೋಟ, ಭೂದೃಶ್ಯ ಮೊದಲಾದ ನಿಸರ್ಗ ಚಿತ್ರಗಳಲ್ಲಿ ಯಥಾದರ್ಶನ, ಬಣ್ಣಗಳ ಸುಸಾಂಗತ್ಯ, ಸಂಯೋಜನೆ, ಪ್ರಕೃತಿಯ ಸೊಬಗು, ನಾವೀನ್ಯತೆಗಳನ್ನು ಕಾಣಬಹುದು. ಭಾವಚಿತ್ರಣದಲ್ಲೂ ಪ್ರವೀಣರಾಗಿರುವ ಕೆಂಚಪ್ಪ ಕ್ಲೇ (ಮೃತ್ತಿಕೆ), ಸಿಮೆಂಟ್ ಹಾಗೂ ಪಿ.ಒ.ಪಿ.ಗಳಲ್ಲಿ (ಪ್ಲಾಸ್ಟರ್ ಆಫ್ ಪ್ಯಾರಿಸ್) ಶಿಲ್ಪಕಲಾಕೃತಿಗಳನ್ನೂ ರಚಿಸಿರುವರು.



ಈ ಕಲಾವಿದ ಗೋವಾ, ಕೊಲ್ಹಾಪುರ, ಪುಣೆ, ಮುಂಬೈಗಳಲ್ಲಿ ಹೊಟ್ಟೆಪಾಡಿಗಾಗಿ ಇತರರ ಕೈಕೆಳಗೆ ಗೋಡೆ ಚಿತ್ರಗಳನ್ನೂ ಬರೆದಿರುವರು. ಕೂಲಿನಾಲಿ ಮಾಡಿ ಬದುಕು ಸಾಗಿಸುವ ತಂದೆ–ತಾಯಿಗಳ ಆಶಯಕ್ಕೆ ಮಣಿದು ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲೀಗ ಸ್ನಾತಕೋತ್ತರ ಚಿತ್ರಕಲಾ (ಎಂ.ವಿ.ಎ. ಅಂತಿಮ) ವ್ಯಾಸಂಗವನ್ನು ಮುಂದುವರಿಸಿರುವರು.

– ಶಿವಾನಂದ ಎಚ್. ಬಂಟನೂರ, ಹಂಪಿ





Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

